# ಹೈದ್ರಾಬಾದ-ಕರ್ನಾಟಕ ವೀರಶೈವ ಮಠಗಳು
# ಒಂದು ಅಧ್ಯಯನ

---

ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಮಹಾಪ್ರಬಂಧ


ಸಂಶೋಧಕ

**ರಮೇಶ ಮೂಲಗೆ**

ಮಾರ್ಗದರ್ಶಕರು

**ಡಾ: ಎ. ಎಸ್. ಬಡಿಗೇರ**

ಪ್ರವಾಚಕರು

ಹಸ್ತಪ್ರತಿ ಶಾಸ್ತ್ರ ವಿಭಾಗ,

ಕನ್ನಡ ವಿಶ್ವವಿದ್ಯಾಲಯ, ಹಂಪಿ.










ಹಸ್ತಪ್ರತಿ ಶಾಸ್ತ್ರ ವಿಭಾಗ,

ಭಾಷಾನಿಕಾಯ,

ಕನ್ನಡ ವಿಶ್ವವಿದ್ಯಾಲಯ, ಹಂಪಿ,

ವಿದ್ಯಾರಣ್ಯ – ೫೮೩ ೨೭೬

೨೦೦೨

# ಹೈದ್ರಾಬಾದ – ಕರ್ನಾಟಕ ವೀರಶೈವ ಮಠಗಳು
# ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ಪಿಎಚ್.ಡಿ. ಮಹಾಪ್ರಬಂಧ


ಸಂಶೋಧಕ

**ರಮೇಶ ಮೂಲಗೆ**

ಮಾರ್ಗದರ್ಶಕರು

**ಡಾ: ಎ. ಎಸ್. ಬಡಿಗೇರ**

ಪ್ರವಾಚಕರು
ಹಸ್ತಪ್ರತಿ ಶಾಸ್ತ್ರ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ.


೨೦೦೩






ಹಸ್ತಪ್ರತಿ ಶಾಸ್ತ್ರವಿಭಾಗ,
ಭಾಷಾನಿಕಾಯ,
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ – ೫೮೩ ೨೭೬

05

# ದೃಢೀಕರಣ ಪತ್ರ



''ಹೈದ್ರಾಬಾದ – ಕರ್ನಾಟಕ ವೀರಶೈವ ಮಠಗಳು – ಒಂದು ಅಧ್ಯಯನ'' ಎಂಬ ಮಹಾಪ್ರಬಂಧ ವಿಷಯವನ್ನು ಕುರಿತು ರಮೇಶ ಮೂಲಗೆ ಯವರು ನನ್ನ ಮಾರ್ಗದರ್ಶನದಲ್ಲಿ ಜುಲೈ ೨೦೦೨ ರಂದು ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣದಲ್ಲಿ, ಪಿಎಚ್.ಡಿ. ಪದವಿಗಾಗಿ ಸಾದರ ಪಡಿಸಿದ್ದಾರೆ. ಅವರ ಈ ಮಹಾ ಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿಗಾಗಲಿ, ವಿಶ್ವವಿದ್ಯಾಲಯಗಳಿಗಾಗಲಿ ಸಾದರ ಪಡಿಸಿರುವುದಿಲ್ಲ. ಇದು ಅವರ ಸ್ವತಂತ್ರ ಅಧ್ಯಯನವಾಗಿದೆ. ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಾದರ ಪಡಿಸಲು ಯೋಗ್ಯವಾಗಿದೆಯೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ : ಕನ್ನಡ ವಿಶ್ವವಿದ್ಯಾಲಯ ಹಂಪಿ,ವಿದ್ಯಾರಣ್ಯ.

ದಿನಾಂಕ : ೩೦–೦೭–೨೦೦೨

ಮಾರ್ಗದರ್ಶಕರು
ಡಾ: ವಿ. ಎಸ್. ಬಡಿಗೇರ
ಪ್ರವಾಚಕರು
ಹಸ್ತಪ್ರತಿ ಶಾಸ್ತ್ರ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

# ಘೋಷಣಾ ಪತ್ರ

"ಹೈದ್ರಾಬಾದ- ಕರ್ನಾಟಕ ವೀರಶೈವ ಮಠಗಳು – ಒಂದು ಅಧ್ಯಯನ " ಎಂಬ ಸಂಶೋಧನೆಯ ಮಹಾಪ್ರಬಂಧದ ವಿಷಯವನ್ನು ಕನ್ನಡ ವಿಶ್ವವಿದ್ಯಾಲಯ ಹಂಪಿಯ ಹಸ್ತ ಪ್ರತಿ ಶಾಸ್ತ್ರ ವಿಭಾಗದ ಪ್ರವಾಚಕರಾದ ಡಾ: ಎ. ಎಸ್. ಬಡಿಗೇರ ಅವರ ಮಾರ್ಗದರ್ಶನದಲ್ಲಿ ಜುಲೈ ೨೦೦೨ ರಲ್ಲಿ ಸಿದ್ಧಪಡಿಸಿ ಪಿಎಚ್.ಡಿ. ಪದವಿಗಾಗಿ ಹಂಪಿಯ ಕನ್ನಡ ವಿಶ್ವ ವಿದ್ಯಾಲಯಕ್ಕೆ ಸಾದರ ಪಡಿಸುತ್ತಿದ್ದೇನೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವು ಈ ಮೊದಲು ಎಲ್ಲಿಯೂ ಪ್ರಕಟಗೊಂಡಿಲ್ಲವೆಂದು ನಾನು ಈ ಮೂಲಕ ಘೋಷಿಸುತ್ತೇನೆ.

ಸ್ಥಳ : ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ .
ದಿನಾಂಕ: ೩೦–೦೭–೨೦೦೨

ಸಂಶೋಧಕ
ರಮೇಶ ಮೂಲಗೆ

# ಪರಿವಿಡಿ

# ಅಧ್ಯಾಯ ಃ ಒಂದು

೧. ಅಧ್ಯಯನದ ಉದ್ದೇಶ

೨. ಅಧ್ಯಯನದ ವ್ಯಾಪ್ತಿ

೩. ಅಧ್ಯಯನದ ವಿಧಾನ

## ೧. ಅಧ್ಯಯನದ ಉದ್ದೇಶ

ಯಾವುದೇ ಒಂದು ಅಧ್ಯಯನವನ್ನು ಇಡೀಯಾಗಿ ಗ್ರಹಿಸುವುದಕ್ಕಿಂತ ಅದನ್ನು ಬಹುಮುಖಿ ಸಂವೇದನೆಗಳ ಮೂಲಕ ವಿವಿಧ ನೆಲೆಗಳಲ್ಲಿ ಅಧ್ಯಯನಿಸುವುದರಿಂದ ಹಲವಾರು ರೀತಿಯ ಹೊಸ ಸಾಧ್ಯತೆಗಳನ್ನು ಕಂಡುಕೊಳ್ಳಲು ಅನುಕೂಲವಾಗುತ್ತದೆ. ಒಂದು ವೇಳೆ ಅಂತಹ ಅಧ್ಯಯನವನ್ನು ಇಡೀಯಾಗಿ ಗ್ರಹಿಸಿದಾಗ ಹಲವಾರು ಸೂಕ್ಷ್ಮ ಸಂಗತಿಗಳು ಮರೆಮಾಚಿ ಹೋಗುವ ಸಾಧ್ಯತೆಗಳು ಹೆಚ್ಚು.

ಹನ್ನೆರಡನೆ ಶತಮಾನದ ಆದಿಯಿಂದ ಇಂದಿನ ವರೆಗೂ ಮಠಗಳ ಅಸ್ತಿತ್ವದ ಕಲ್ಪನೆ ನಮಗೆ ಸಿಗುತ್ತದೆ. ಇಂತಹ ಸಾಂಸ್ಕೃತಿಕ ಸ್ವರೂಪದ ಸಂರಚನೆಗಳೂ, ಶರಣರ ಅಂದೋಲನದ ಹೊತ್ತಿಗೆ ಹೊಸ ಆಯಾಮವನ್ನು ಪಡೆದುಕೊಂಡುದ್ದನ್ನು ಕಾಣುತ್ತೇವೆ. ಆದರೆ ಸಾಂಸ್ಕೃತಿಕ ಸ್ವರೂಪಗಳು ಎಷ್ಟೋ ಸಲ ಮುಂಚೂಣಿ ವ್ಯಕ್ತಿಯ ಮೂಗಿನ ನೇರಕ್ಕೆ ಕೆಲಸ ಮಾಡುವುದನ್ನು ಕಾಣುತ್ತೇವೆ. ಮಠಗಳಂಥಹ ಧಾರ್ಮಿಕ ಸಂಸ್ಥೆಗಳು ವ್ಯಕ್ತಿ ಪ್ರಜ್ಞೆಯನ್ನು ಮೀರಿ ಸಮೂಹ ಪ್ರಜ್ಞೆಯ ನೆಲೆಯಲ್ಲಿ ಅದರಲ್ಲೂ ಎಷ್ಟೋ ಮಠಗಳು ಅಲಕ್ಷಿತ ವರ್ಗಗಳ ಬಗ್ಗೆ ವಿಶೇಷ ಕಾಳಜಿ ಹೊಂದಿದ್ದನ್ನು ಕಾಣುತ್ತೇವೆ. ಒಂದೊಂದು ಸಲ ಇದಕ್ಕೆ ತದ್ವಿರುದ್ಧವಾದ ಸಂಗತಿಗಳನ್ನು ಕಾಣುತ್ತೇವೆ.

ಹೈದ್ರಾಬಾದ – ಕರ್ನಾಟಕದ ಸಂದರ್ಭದಲ್ಲಿ ಇಂತಹ ಹಲವಾರು ವೀರಶೈವ ಮಠಗಳು ಬೆಳೆದು ಬಂದುದನ್ನು ಕಾಣುತ್ತೇವೆ. ಇದರಲ್ಲಿ ಬಹಳಷ್ಟು ಮಠಗಳು ಪರಂಪರೆಯಿಂದ ಸಮಾಜ ಮುಖಿ ಕಾರ್ಯಗಳನ್ನು ನಡೆಸುತ್ತ ಬಂದಿರುವುದು ಗಮನಾರ್ಹವಾಗಿದೆ. ಇಂತಹ ಪಾರಂಪರಿಕ ಸಂಸ್ಥೆಗಳೊಂದಿಗೆ ಮುಖಾ–ಮುಖಿಯಾಗುವ ಮೂಲಕ ಅದರ ಅರ್ಥಪೂರ್ಣ ನೆಲೆಗಳನ್ನು ಪತ್ತೆ ಹಚ್ಚುವುದು ನನ್ನ ಅಧ್ಯಯನದ ಪ್ರಧಾನ ಉದ್ದೇಶವಾಗಿದೆ. ಇಂದು ಸಾಂಸ್ಕೃತಿಕ ಬದುಕನ್ನು ಆಳುತ್ತಿರುವ ಜಾಗತೀಕರಣ ಫಲಿತಾಂಶಗಳು ಅನೈತಿಕವಾದಂಥಹ ರಾಜಕೀಯ ಹಾಗೂ ಸಾಮಾಜಿಕವಾದ ಆಳ್ವಿಕೆಗಳು ಸಾಂಸ್ಕೃತಿಕ ಚಹರೆಗಳೆನ್ನುವಂತಹ ಮೌಲಿಕವಾದ ಸಂಗತಿಗಳನ್ನು ನಿರ್ಮಾಮ ಮಾಡುತ್ತದೆ. ಸಾಂಸ್ಕೃತಿಕ ನಿರ್ಣಯಕಿಂತ ಅದರ ನಿರ್ಮಾಮದ ನೆಲೆಗೆ ಹೆಚ್ಚಿನ ಒತ್ತು ಬಳುತ್ತದೆ. ಹೈದ್ರಾಬಾದ – ಕರ್ನಾಟಕದ ಚಾರಿತ್ರಿಕ ಕಾಲಘಟ್ಟದಲ್ಲಿ ವಿವಿಧ ರೀತಿಯ ರಾಜಕೀಯ ಮತ್ತು ಸಾಂಸ್ಕೃತಿಕ ಆಕ್ರಮಗಳಿಗೆ ಒಳಗಾಗುತ್ತ ಬಂದಿರುವುದು ಕಾಣುತ್ತೇವೆ. ಇಂತಹ ಸಂದಿಗ್ದ ಸಂದರ್ಭದಲ್ಲಿ ಭಾಷಿಕ, ಧಾರ್ಮಿಕ, ಜನಾಂಗಿಕ, ವಿಶೇಷವಾಗಿ ಸಾಂಸ್ಕೃತಿಕ ನೆಲೆಯಲ್ಲಿ ಜನರನ್ನು ಜಾಗೃತಗೊಳಿಸುತ್ತಾ ಬಂದ ಹೈದ್ರಾಬಾದ ಕರ್ನಾಟಕ ವೀರಶೈವ ಮಠಗಳ ಸೇವೆ ಇಲ್ಲಿ ಸ್ಮರಣೀಯವಾದದ್ದು. ವೀರಶೈವ ಮಠಗಳ ಇಂತಹ ಶ್ಲಾಘನೀಯ ಕಾರ್ಯಗಳ ಕುರಿತು ಒಂದು ವ್ಯವಸ್ಥಿತ ಅಧ್ಯಯನ ನಡೆದ ಬಗ್ಗೆ ಕಂಡು ಬರುವುದಿಲ್ಲ. ಹಲವಾರು ರೀತಿಯ ಸಾಂಸ್ಕೃತಿಕವಾದ ಪ್ರಾದೇಶಿಕವಾದ ವೈವಿದ್ಯತೆ ಮತ್ತು ವೈರುಧ್ಯತೆಗಳನ್ನು ಆಚರಣಾತ್ಮಕವಾದಂತಹ ಸಂಗತಿಗಳನ್ನು ಮೈಗೂಡಿಸಿಕೊಂಡಿರುವ ಈ ಮಠಗಳ ಅಧ್ಯಯ ಸವಾಲೆನ್ನುವದೆ ಸರಿ.

ಸಹಜವಾಗಿಯೇ ಈ ಭಾಗದ ಮಠಮಾನ್ಯಗಳೊಂದಿಗೆ, ಮಠಾಧೀಶರೊಂದಿಗಿನ ನನ್ನ ಗಾಢ ಸಂಪರ್ಕ ಈ ಮಠಗಳ ಕುರಿತು ಅಧ್ಯಯನ ಮಾಡಲು ಪ್ರೇರಣೆ ನೀಡಿತ್ತು. ಆ ಮೂಲಕ ಹೈದ್ರಾಬಾದ – ಕರ್ನಾಟಕ ವೀರಶೈವ ಮಠಗಳ ಕುರಿತು ಹೊಸ ರೀತಿಯ ಆಲೋಚನೆ ಮಾಡಲು ನಾನು ವಿದ್ಯುಕ್ತನಾಗಿ ಈ ಕಾರ್ಯವನ್ನು ಕೈಗೆತ್ತಿಕೊಂಡಿದ್ದೇನೆ. ಹೈದ್ರಾಬಾದ – ಕರ್ನಾಟಕ ವೀರಶೈವ ಮಠಗಳ ಕುರಿತು ಇದುವರೆಗೂ ಕೆಲವೊಂದು ಬಿಡಿ, ಬಿಡಿ, ಲೇಖನಗಳನ್ನು ಹಾಗೂ ಪರಿಚಯಾತ್ಮಕವಾಗಿ ಕೆಲವು ಕಿರು ಹೊತ್ತಿಗೆಗಳು ಪ್ರಕಟಗೊಂಡಿದ್ದು, ನಿಜವಾಗಿದ್ದರೂ ಅವು ಹೈದ್ರಾಬಾದ – ಕರ್ನಾಟಕ ಭಾಗದ ವೀರಶೈವ ಮಠಗಳ ಹಾಗೂ ಮಠಾಧೀಶರ ಸಮಗ್ರ ಚಿತ್ರಣವನ್ನು ಕೊಡಲಾರವು. ಡಾಃ ಜಿ.ಬಿ. ವಿಸಾಜಿಯವರು ಬರೆದ '' ಡಾಃ ಚನ್ನಬಸವ ಪಟ್ಟದ್ದೇವರು ಭಾಲ್ಕಿ'' ಎನ್ನುವ ಕಿರು ಹೊತ್ತಿಗೆಯು ಭಾಲ್ಕಿ ಹಿರೇಮಠದ ಏಳನೇ ಪೀಠಾಧಿಪತಿಯಾದ

ಡಾಃ ಚನ್ನಬಸವ ಪಟ್ಟದ್ದೇವರ ಜೀವನ ಸಾಧನೆಯನ್ನು ಕುರಿತ ಕಿರು ಹೊತ್ತಿಗೆಯಾಗಿದೆ. ಸ್ವಾಮಿಗಳು ಮಾಡಿರುವ ಕೆಲವು ಸಾಧನೆಗಳನ್ನು ಕಾರ್ಯಚಟುವಟಿಕೆಗಳನ್ನು ಇಲ್ಲಿ ಸಂಪಾದಿಸಿ ಬರೆದ ಕೃತಿಯಾಗಿದೆ. ಇದೇ ಮಠಾಧೀಶರನ್ನು ಕುರಿತು ಶಾಂತರಸ ರಾಯಚೂರ ಅವರ ಪ್ರಧಾನ ಸಂಪಾದಕತ್ವದಲ್ಲಿ " ಕಾಯಕ ಪರಿಣಾಮಿ" ಎನ್ನುವ ಬೃಹತ್ ಗ್ರಂಥವು ಭಾಲ್ಕಿಯ ಡಾಃ ಚನ್ನಬಸವ ಪಟ್ಟದ್ದೇವರ ಕುರಿತು ಬರೆದ ಗೌರವ ಗ್ರಂಥವಾಗಿದೆ. ಇದರಲ್ಲಿ ವಿವಿಧ ಸಾಹಿತಿಗಳು, ಲೇಖಕರು, ಬರೆದ ಹಲವಾರು ಭಿನ್ನರೀತಿಯ ಸಾಹಿತ್ಯವನ್ನು ಸಂವೇದನೆಗಳನ್ನು ಹಿಡಿದಿಡಲಾಗಿದೆ. ಶ್ರೀಗಳ ಜೀವನ ಚರಿತ್ರೆ ಹಾಡಿನ ಮುಖಾಂತರ ರೂಪಗೊಂಡದ್ದು ಎದ್ದು ಕಾಣುತ್ತದೆ.

ಡಾಃ ಸಂಗಮೇಶ ಸೌದತ್ತಿಮಠ ಅವರ ಸಂಪಾದಕತ್ವದಲ್ಲಿ ಸಂಪಾದಿಸಿದ ಕೃತಿ "ಚನ್ನವೀರ" ಇದು ಹಾರಕೂಡ ಬೃಹನ್ಮಠದ ಚನ್ನವೀರ ಶಿವಚಾರ್ಯ ಸ್ವಾಮಿಗಳ ಜೀವನ ಸಾಧನೆಯನ್ನು ಕುರಿತು ಕೃತಿಯಾಗಿದೆ. ವಿವಿಧ ಲೇಖಕರಿಂದ ವಿವಿಧ ರೀತಿಯ ಧಾರ್ಮಿಕ, ಸಾಮಾಜಿಕ, ಹಾಗೂ ಸಾಂಸ್ಕೃತಿಕ ನೆಲೆಗಳನ್ನೊಳಗೊಂಡ ಲೇಖನಗಳು ಇದರಲ್ಲಿ ಅಡಕವಾಗಿವೆ. ಡಾಃ ಎಸ್.ಎಂ. ಹಿರೇಮಠ ಅವರು "ಗುಲಬರ್ಗಾ ಜಿಲ್ಲೆಯ ವೀರಶೈವ ಮಠಗಳು " ಎನ್ನುವ ಕಿರು ಲೇಖನವು ಸಂಕ್ಷಿಪ್ತವಾಗಿ ಸುಮಾರ ಹದಿನೈದು ವೀರಶೈವ ಮಠಗಳ ಪರಿಚಯವನ್ನು ಮಾಡಿಕೊಡುತ್ತದೆ. ಅಲ್ಲದೆ ಇದೇ ಲೇಖಕರು " ಕಲಬುರ್ಗಿಯ ಶ್ರೀ ಶರಣ ಬಸವಪ್ಪ ಜೀವನ ಸಾಧನೆ " ಕುರಿತು ಮಹಾಪ್ರಬಂಧವನ್ನು ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಮಂಡಿಸಿ ಪಿ.ಹೆಚ್‌ಡಿ ಪದವಿಯನ್ನು ಗಳಿಸಿದ್ದಾರೆ. ಈ ಅಪ್ರಕಟಿತ ಮಹಾಪ್ರಬಂಧದಲ್ಲಿ ಶ್ರೀ ಶರಣಬಸವಪ್ಪನವರ, ಜೀವನ ಸಾಧನೆಯ ಪ್ರಮುಖ ಅಂಶಗಳನ್ನು ಸ್ಮರಿಸಲಾಗಿದೆ.

"ಗವಿದಿಪ್ತಿ" ಎನ್ನುವುದು ಕೊಪ್ಪಳ ಗವಿಮಠದ ಪುರಾಣವಾಗಿದೆ. ಇದನ್ನು ವೈ.ನಾಗೇಶಶಾಸ್ತ್ರಿ ಯೆಂಬುವವರು ರಚಿಸಿದ್ದಾರೆ. ಅಲ್ಲದೆ ಎ. ಬಿ. ಬ್ಯಾಳಿ ಅವರ ಸಂಪಾದಕತ್ವದಲ್ಲಿಯ " ಶಾಂತ ಪ್ರಭೆ " ಎನ್ನುವ ಕೃತಿ ದೊರೆಯುತ್ತದೆ. ಇದು ಶ್ರೀಮಠದ ನೂತನ ಪೀಠಾಧಿಪತಿಯಾದ ಶಾಂತವೀರ ಮಹಾಸ್ವಾಮಿಗಳವರ ಕುರಿತು ಬರೆದ ಗೌರವ ಗ್ರಂಥವಾಗಿದೆ. ಹಲವಾರು ವಿದ್ವಾಂಸರು, ಲೇಖಕರು, ವಿವಿಧ ಬರವಣಿಗೆಯ ಶೈಲಿಗಳಲ್ಲಿ ಇದನ್ನು ರಚಿಸಿದ್ದು ಕಂಡುಬರುತ್ತವೆ. ಇಂತಹ ಕೆಲವೊಂದು ಪುಸ್ತಕಗಳು ಹೈದ್ರಾಬಾದ – ಕರ್ನಾಟಕ ವೀರಶೈವ ಮಠಗಳ ಕುರಿತು ದೊರೆತರೂ, ಅವುಗಳೂ ಸಮಗ್ರ ಚಿತ್ರಣವನ್ನು ಕಟ್ಟಿಕೊಡುವುದಿಲ್ಲ.

ಹೀಗೆ ಇದುವರೆಗೂ ಆದ ಅಧ್ಯಯನದ ಇತಿ ಮಿತಿಗಳನ್ನು ಗಮನದಲ್ಲಿಟ್ಟುಕೊಂಡು ನನ್ನ ಅಧ್ಯಯನವನ್ನು ಮುಂದುವರೆಸುತ್ತೇನೆ. ಈ ಅಧ್ಯಯನವು ಮಠಗಳ ಸಮಾಜೋಧಾರ್ಮಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕವಾದಂಥಹ ನೆಲೆಗಳಿಗೆ ಹೆಚ್ಚು ಪ್ರಧಾನ್ಯತೆಯನ್ನು ಕೊಡುತ್ತದೆ. ಆ ಮೂಲಕ ಹೈದ್ರಾಬಾದ – ಕರ್ನಾಟಕ ಸಾಂಸ್ಕೃತಿಕ ಚಿತ್ರಣವನ್ನು ಹೊಸ ಬಗೆಯಲ್ಲಿ ಕಲ್ಪಿಸಿಕೊಳ್ಳಲು ಸಾಧ್ಯವಾಗುವಂತೆ ಮಾಡುವುದು ನನ್ನ ಪ್ರಯತ್ನವಾಗಿದೆ.

೧. ಮಠಗಳ ಅರ್ಥ, ಸ್ವರೂಪ ಹಾಗೂ ಬೆಳೆದು ಬಂದ ಬಗೆಯನ್ನು ಪತ್ತೆಹಚ್ಚುವುದು.

೨. ವೀರಶೈವ ಮಠಗಳಲ್ಲಿ ದೊರೆಯುವ ಪ್ರಕಾರಗಳೆಷ್ಟು? ಹಾಗೂ ಅವುಗಳಲ್ಲಿ ಕಂಡು ಬರುವ ವ್ಯತ್ಯಾಸಗಳನ್ನು ಕಂಡುಕೊಳ್ಳುವುದು.

೩. ಮಠಗಳ ಮಹತ್ವತೆಗಳನ್ನು ಅರಿಯುವುದು.

೪. ಮಠಗಳು ಸಮಾಜದಲ್ಲಿ ಹೊಂದಿದ ಪಾತ್ರವನ್ನು ಗಮನಿಸುವುದು.

೫. ಧಾರ್ಮಿಕ ಸಂಸ್ಥೆಗಳಾದ ಮಠಗಳು ಎಷ್ಟರ ಮಟ್ಟಿಗೆ ಧರ್ಮ ಹಾಗೂ ತತ್ವಗಳ ಪ್ರಚಾರಗಳಲ್ಲಿ ತೊಡಗಿವೆ ಎಂಬುದನ್ನು ಪತ್ತೆ ಹಚ್ಚುವುದು.

೬. ಲಿಂಗದೀಕ್ಷೆ ಹಾಗೂ ಗದ್ದುಗೆ ಪೂಜೆಗಳಲ್ಲಿ ಕಂಡು ಬರುವ ವ್ಯತ್ಯಾಸವನ್ನು ಶೋಧಿಸುವುದು.

೭. ಮಠಗಳು ಶೈಕ್ಷಣಿಕ ರಂಗದಲ್ಲಿ ಸಲ್ಲಿಸಿದ ಸೇವೆಯ ಗುಣಾತ್ಮಕತೆ ಕುರಿತು ಆಲೋಚಿಸುವುದು.

೮. ಮಠಾಧೀಶರ ಮೂಲ ಉದ್ದೇಶವನ್ನು ಸಾಧಿಸುವಲ್ಲಿ ಅನುಸರಿಸುವ ಮಾರ್ಗಗಳ ಬಗ್ಗೆ ಕಂಡು ಹಿಡಿಯುವುದು.

೯. ಒಂದು ಮಠಕ್ಕೆ ಮಠಾಧೀಶರಾಗಬೇಕಾದರೆ, ಅವರಲ್ಲಿರುವ ಯೋಗ್ಯತೆಯ ಮಾನದಂಡ.

೧೦. ಮಠಾಧೀಶರು ಸಮಾಜದೊಡನೆ ಹೊಂದಿದ್ದ ಸಂಬಂಧವನ್ನು ಅಧ್ಯಯನಿಸುವುದು.

೧೧. ಹೈದ್ರಾಬಾದ – ಕರ್ನಾಟಕ ಭಾಗದ ವೀರಶೈವ ಮಠಗಳ ಸ್ಥೂಲ ಪರಿಚಯ ಮಾಡಿಕೊಡುವುದು.

೧೨. ಮಠಗಳ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ನೀಡಿದ ಕೊಡುಗೆಗಳನ್ನು ಪ್ರಸ್ತಾಪಿಸುವುದು.

೧೩. ಗುರು ಹಾಗೂ ವಿರಕ್ತವರ್ಗದ ಮಠಗಳ ತೌಲನಿಕ ಅಧ್ಯಯನಕ್ಕೊಳಪಡಿಸುವುದು.

– ಹೀಗೆ ಮುಂತಾದ ಸಮಸ್ಯೆಗಳು ಮತ್ತು ಪರಿಹಾರವನ್ನು ಹುಡುಕುವುದೆ, ಈ ಪ್ರಸ್ತುತ ಅಧ್ಯಯನದ ಪ್ರಧಾನ ಉದ್ದೇಶವಾಗಿದೆ.

ಹೈದ್ರಾಬಾದ – ಕರ್ನಾಟಕ ಭಾಗದ ವೀರಶೈವ ಮಠಗಳು ಸಹಜವಾಗಿಯೇ ಸಮಾಜ ಸೇವೆಗೆ ತಮ್ಮನ್ನು ಅರ್ಪಿಸಿಕೊಂಡಂಥವುಗಳು. ಪುರಾಣ, ಪ್ರವಚನ, ಜಾತ್ರೆ, ಉತ್ಸವ ಮುಂತಾದ ಕಾರ್ಯಚಟುವಟಿಕೆಗಳನ್ನು ನಡೆಸಿಕೊಂಡು ಬರುವಂಥವು. ಧಾರ್ಮಿಕ ಕೇಂದ್ರಗಳಾಗಿ ಮೂಲತಃ ಹುಟ್ಟಿಕೊಂಡಂಥವು. ಧಾರ್ಮಿಕ, ಕ್ಷೇತ್ರಗಳಲ್ಲಿ ವಿವಿಧ ರೀತಿಯ ಕಾರ್ಯಚಟುವಟಿಕೆಗಳನ್ನು ನಡೆಸಿಕೊಂಡು ಬರುವಂಥವುಗಳು. ವಚನಸ್ವರ, ವಚನ ಅನುಭಾವಗೀತೆ, ಸೃಜನ ಸಾಹಿತ್ಯದಲ್ಲಿ ವೀರಶೈವ ಧರ್ಮದ ತತ್ವ ವಿವೇಚನೆ ವಿಮರ್ಶೆಗಳನ್ನು ಮಾಡುವಂಥವುಗಳಾಗಿವೆ. ಸಮಾಜದಲ್ಲಿ ಜನರೊಡನೆ ನೇರ ಸಂಬಂಧವುಳ್ಳವುಗಳಾಗಿವೆ.

ಹೈದ್ರಾಬಾದ – ಕರ್ನಾಟಕ ಭಾಗದಲ್ಲಿ ಸುಮಾರು ನೂರಾಐವತ್ತು ಮಠಗಳು ದೊರೆಯುತ್ತವೆ. ಅವುಗಳಲ್ಲಿ ಕೆಲವೊಂದು ಮಠಗಳು ಮನೆಗಳಂತೆ ಪರಿವರ್ತನೆಗೊಂಡಿವೆ. ಮತ್ತೆ ಕೆಲವು ಮಠಗಳು ನಶಿಸಿ ಹೋಗಿವೆ. ಕೆಲವು ಮಠಗಳು ಸಂಸಾರಿಕತೆಯಲ್ಲಿ ಮುಳುಗಿಕೊಂಡು ಮಠದ ಸಂಪ್ರದಾಯ ಮರೆ ಮಾಚಿ ಹೋಗಿವೆ. ಈಗ ಸದ್ಯದಲ್ಲಿ ಎಂಬತ್ತೈದು ವೀರಶೈವ ಮಠಗಳು ಪ್ರಚಲಿತದಲ್ಲಿದ್ದು, ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡು, ರಕ್ಷಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಇಂಥಹ ಮಠಗಳ ಸಮಗ್ರ ಚಿತ್ರಣವನ್ನು ಇಲ್ಲಿ ಪ್ರತಿಬಿಂಬಿಸಲು ಪ್ರಯತ್ನಿಸಲಾಗಿದೆ.

ಹಿಂದೆ ಹೈದ್ರಾಬಾದ ನಿಜಾಮರ ಆಳ್ವಿಕೆಯಲ್ಲಿ ಪ್ರಜೆಗಳು ತನ್ನತ್ವವನ್ನು ಕಳೆದುಕೊಂಡು ಪರ ತಂತ್ರಿಯರಾಗಿ ಬಾಳಬೇಕಾಗಿತ್ತು. ರಜಾಕಾರರು ಹಲವಾರು ತೊಂದರೆ ಸಮಸ್ಯೆಗಳಿಗೆ ಎಡೆ ಮಾಡಿಕೊಟ್ಟರು. ಈ ಭಾಗದ ಜನರನ್ನು ರಸ್ತೆಯ ಮೆಲೆ ಕೊಂದು ರಕ್ತವನ್ನು ಚೆಲ್ಲಿದರು. ಅಂಥಹ ಸಂಧರ್ಬಕ್ಕೆ ರಜಾಕಾರರು ಮಠಗಳಿಗೆ ಯಾವುದೇ ರೀತಿಯ ಹಾನಿಯಾಗದಂತೆ ಧಕ್ಕೆ ಬರದಂತೆ ನೋಡಿದರು. ಶ್ರೀಮಂತರಿಂದ ಭೂಮಿಯನ್ನು ಕಸಿದುಕೊಂಡು ಶ್ರೀ ಮಠಕ್ಕೆ ದಾನದ ರೂಪದಲ್ಲಿ ಉಂಬಳಿಯಾಗಿ ನಿಜಾಮರು ಕೊಡುತ್ತಿದ್ದರು. ಅಂದಿನ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ವೀರಶೈವ ಮಠಗಳು ಯಾವುದೇ ಧಾರ್ಮಿಕ ಕಾರ್ಯ ಮಾಡುವಂತಿರಲಿಲ್ಲ. ಬ್ರಿಟೀಷರ ಆಳ್ವಿಕೆ ಮುಗಿದ ಮೇಲೆ ಮಠಗಳು ಸಮಾಜಕ್ಕೆ ಹೊಸ ನೀಲ ನಕ್ಷೆಯನ್ನು

ಹಾಕಿಕೊಟ್ಟವು. ಹಲವಾರು ಧಾರ್ಮಿಕ ಕಾರ್ಯಗಳನ್ನು ಕೈಗೆತ್ತಿಕೊಂಡು ಸಾಂಸ್ಕೃತಿಕ ಜಾಗೃತಿಯನ್ನು ಆತ್ಮಬಲವನ್ನು ಉನ್ನತ ರೀತಿಯಲ್ಲಿ ಬೆಳೆಸಿದ್ದು ಕಂಡುಬರುತ್ತದೆ.

ಹೀಗೆ ಹೈದ್ರಾಬಾದ – ಕರ್ನಾಟಕ ವೀರಶೈವ ಮಠಗಳು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ರೀತಿಯಲ್ಲಿ ಸಲ್ಲಿಸುತ್ತಿರುವ ಸೇವೆಯ ಉದ್ದೇಶಗಳನ್ನು ಅಧ್ಯಯಿನಿಸುವುದು ಇಲ್ಲಿ ಪ್ರಮುಖವಾಗಿದೆ.

೨. ಅಧ್ಯಯನದ ವ್ಯಾಪ್ತಿ

ಸ್ವಾತಂತ್ರ್ಯ ಪೂರ್ವದಲ್ಲಿ ಕರ್ನಾಟಕದ ಕೆಲವು ಭಾಗಗಳು ಮುಂಬಯಿ ಆಡಳಿತಕ್ಕೆ, ಕೆಲವು ಭಾಗ ಮದ್ರಾಸ ಆಡಳಿತಕ್ಕೆ, ಕೆಲವು ಭಾಗ ಹಳೇಮೈಸೂರ ಆಡಳಿತಕ್ಕೆ, ಅದರಂತೆ ಕೆಲಭಾಗ ಹೈದ್ರಾಬಾದ ಆಡಳಿತಕ್ಕೆ ಸೇರಿಕೊಂಡಿದ್ದವು. ಆಡಳಿತಕ್ಕೊಳಗಾದ ಪ್ರದೇಶಗಳು ಜಿಲ್ಲಾವಾರುಗಳಂತೆ ಈ ಕೆಳಗಿನಂತೆ ವಿವರಿಸಲಾಗಿದೆ.

| ಮುಂಬಯಿ – ಕರ್ನಾಟಕ | ಮದ್ರಾಸ – ಕರ್ನಾಟಕ | ಹಳೇ ಮೈಸೂರ – ಕರ್ನಾಟಕ | ಹೈದ್ರಾಬಾದ – ಕರ್ನಾಟಕ |
|---|---|---|---|
| ಬೆಳಗಾಂವ | ಬಳ್ಳಾರಿ | ಮೈಸೂರು | ಬೀದರ |
| ಧಾರವಾಡ | ದಕ್ಷಿಣ ಕನ್ನಡ ಜಿಲ್ಲೆಗಳು | ಬೆಂಗಳೂರು | ಗುಲಬರ್ಗಾ |
| ವಿಜಾಪೂರ | | ತುಮಕೂರು | ರಾಯಚೂರ |
| ಕಾರವಾರ ಜಿಲ್ಲೆಗಳು | | ಚಿತ್ರದುರ್ಗ | |
| | | ಮಂಡ್ಯ | |
| | | ಕೋಲಾರ | |
| | | ಚಿಕ್ಕಮಂಗಳೂರು | |
| | | ಶಿವಮೊಗ್ಗ | |

ಹೀಗೆ ಕರ್ನಾಟಕ ರಾಜ್ಯದ ಜಿಲ್ಲೆಗಳು ನಾಲ್ಕು ಭಾಗಗಳಲ್ಲಿ ತುಂಡು ತುಂಡುಗಳಾಗಿ ಹಂಚಿ ಹರಿದುಹೋಗಿರುವುದು ಇತಿಹಾಸದ ಮೂಲಕ ಕಂಡು ಬರುತ್ತದೆ. ನಂತರ ಬೀದರ, ಗುಲಬರ್ಗಾ ಹಾಗೂ ರಾಯಚೂರು ಎಂಬ ಮೂರು ಜಿಲ್ಲೆಗಳು ಮಾತ್ರ ಹೈದ್ರಾಬಾದ ಕರ್ನಾಟಕ ವ್ಯಾಪ್ತಿಗೆ ಒಳಪಟ್ಟದ್ದವು. ಈ ಮೂರು ಜಿಲ್ಲೆಗಳ ವ್ಯಾಪ್ತಿ ಮಾತ್ರ ನನ್ನ ಅಧ್ಯಯನದ ರಕ್ಷಣೆ ನಿಲುಕುತ್ತದೆ. ಈ ಮೂರು ಜಿಲ್ಲೆಗಳಲ್ಲಿ ಇಪ್ಪತ್ತನಾಲ್ಕು ತಾಲೂಕುಗಳಿವೆ. ಇತ್ತಿಚೆ ಗೆ ರಾಯಚೂರು ಜಿಲ್ಲೆಯನ್ನು ಬೇರ್ಪಡಿಸಿ, ಹೋಬಳಿ ಗ್ರಾಮವಾದ

ಕೊಪ್ಪಳ ನಗರದ ಪ್ರದೇಶವನ್ನು ಪ್ರತ್ಯೇಕ ಜಿಲ್ಲೆಯನ್ನಾಗಿ ವಿಂಗಡಿಸಲಾಗಿದೆ. ಅಂತೆಯೇ ನಾಲ್ಕು ಜಿಲ್ಲೆಗಳಲ್ಲಿ ದೊರೆಯುವ ತಾಲೂಕುಗಳು, ಕೆಳಗಿನಂತಿವೆ.

| ಬೀದರ | ಗುಲಬರ್ಗಾ | ರಾಯಚೂರು | ಕೊಪ್ಪಳ |
| --- | --- | --- | --- |
| ಔರಾದ | ಆಳಂದ | ದೇವದುರ್ಗ | ಕುಷ್ಟಗಿ |
| ಬಸವಕಲ್ಯಾಣ | ಅಫಜಲಪೂರ | ಮಾನವಿ | ಕೊಪ್ಪಳ |
| ಭಾಲ್ಕಿ | ಗುಲಬರ್ಗಾ | ರಾಯಚೂರು | ಗಂಗಾವತಿ |
| ಬೀದರ | ಜೇವರ್ಗಿ | ಲಿಂಗಸೂರು | ಯಲಬುರ್ಗಾ |
| ಹುಮನಾಬಾದ | ಚಿಂಚೋಳಿ | ಸಿಂಧನೂರು | |
| | ಚಿತಾಪೂರ | | |
| | ಯಾದಗೀರಿ | | |
| | ಸುರಪೂರ | | |
| | ಸೇಡಂ | | |
| | ಶಾಹಪೂರ | | |

ಹೀಗೆ ನಾಲ್ಕು ಜಿಲ್ಲೆಯ ಇಪ್ಪತ್ನಾಲ್ಕು ತಾಲೂಕುಗಳನ್ನೊಳಗೊಂಡ ಹೈದ್ರಾಬಾದ ಕರ್ನಾಟಕ ವ್ಯಾಪ್ತಿಯಲ್ಲಿ ಬರುವ ವೀರಶೈವ ಮಠಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ವೀರಶೈವ ಮಠಗಳು ಸಮಾಜದ ಸೇವೆಗಾಗಿಯೇ ಜನ್ಮತಾಳಿವೆ. ಸಮಾಜದ ತಿಳುವಳಿಕೆಯ ಪರಿಧಿಯನ್ನು ವಿಸ್ತರಿಸುವ ದೃಷ್ಟಿಯಿಂದ ಪಾಠ ಪ್ರವಚನಗಳ ಮೂಲಕ ಜನರಲ್ಲಿಯ ಜಾಗೃತಿಯನ್ನುಂಟು ಮಾಡಿದವು. ಧಾರ್ಮಿಕ ಕೇಂದ್ರ ಬಿಂದುವಾಗಿ ವೀರಶೈವ ಮಠಗಳು ಮಹತ್ವದ ಪಾತ್ರವಹಿಸಿವೆ. ಶೈಕ್ಷಣಿಕ, ಸಾಹಿತ್ಯಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತಮ್ಮದೆಯಾದ ಕಾರ್ಯ ಚಟುವಟಿಕೆಗಳನ್ನು ರೂಪಿಸಿಕೊಂಡಿದೆ. ಮಠಗಳ ಈ ಬಗೆಯ ಕೊಡುಗೆಗಳು ಸಮಾಜಕ್ಕೆ ತಲುಪಿಸಬೇಕಾದರೆ ಮಠಾಧಿಪತಿಯರದು ಪ್ರಮುಖ ಪಾತ್ರವಾಗಿರುತ್ತದೆ. ಮಠಾಧಿಪತಿಗಳ ನಿಸ್ವಾರ್ಥ ಸೇವೆ ಇಲ್ಲಿ ಬಹುಮುಖ್ಯವಾದದ್ದು.

ಮಠಗಳು ಸರ್ವತೋಮುಖ ಅಭಿವೃದ್ಧಿ ಸಾಧಿಸಬೇಕಾದರೆ ಮಠಾಧಿಪತಿಗಳಾದ ಸ್ವಾಮಿಗಳು ಸ್ವಾರ್ಥ ರಾಜಕಾರಣದಿಂದ ದೂರಿರುವದು ಒಳ್ಳೆಯದು. ಮಠಕ್ಕೆ ಬರುವ ಸರ್ವ ಭಕ್ತರನ್ನು ಸಮನಾಗಿ ಕಾಣಬೇಕು. ಶ್ರೀ ಮಠದಲ್ಲಿ ಧಾರ್ಮಿಕ ಹಾಗೂ ಸಾಂಸ್ಕೃತಿಕ ಗೋಷ್ಠಿ ಹಾಗೂ ಕಾರ್ಯಕ್ರಮಗಳನ್ನೇರ್ಪಡಿಸಿಕೊಂಡು ಬರುವಂತಿರಬೇಕು, ಅಲ್ಲದೆ ಪಾಠ – ಪ್ರವಚನ ಬಲ್ಲವರಾಗಿರಬೇಕು. ಅಂದರೆ ಮಾತ್ರ ಮಠ ಮತ್ತು ಅದರ ಕಾರ್ಯ ವ್ಯಾಪ್ತಿ ಗುಣಾತ್ಮಕವಾಗಿರುತ್ತದೆ.

ವೀರಶೈವ ಧರ್ಮದ ಪರಂಪರೆಯಲ್ಲಿ " ಮಠ " (ಪೀಠ) ಗಳ ಸಂಪ್ರದಾಯ ಪ್ರಾಚೀನವಾದದ್ದು. ವೀರಶೈವ ಮಠಗಳಲ್ಲಿ ಗುರುಪೀಠ ಹಾಗೂ ನಿರಂಜನ ಪೀಠವೆಂದು ಎರಡು ರೀತಿಯ ಪೀಠಗಳು ಕಂಡು ಬರುತ್ತವೆ. ಗುರುಪೀಠಗಳಿಗೆ ಗುರುಸ್ಥಲ ಅಥವಾ ಹಿರೇಮಠ, ಪಟ್ಟದ್ದೇವರ ಮಠ, ಘನ ಮಠ, ಬೃಹನ್ಮಠವೆಂದು ಮುಂತಾಗಿ ಕರೆಯುವ ವಾಡಿಕೆ ಇದೆ. ಹಾಗೂ ನಿರಂಜನ ಪೀಠಗಳಿಗೆ ವಿರಕ್ತ ಪೀಠ ಸಿಂಹಾಸನ ಪೀಠ, ವೈರಾಗ್ಯ ಪೀಠವೆಂದು ಕರೆಯುತ್ತಾರೆ. ಗುರಸ್ಥಲ ಪೀಠಗಳು ಶಿವಾಚಾರ್ಯರ ಪರಂಪರೆಗೆ ಸೇರಿದವುಗಳಾದರೆ, ವಿರಕ್ತ ಪೀಠವು ಶೂನ್ಯ ಸಿಂಹಾಸನಕ್ಕೆ ಸೇರಿದವುಗಳು. ಅಲ್ಲದೆ ಗುರು ಮಠಗಳಿಗೆ " ಶ್ರೀ ಮಹಾಸಂಸ್ಥಾನ ಮಠ " ವೆಂದು ಕರೆಯುತ್ತಾರೆ. ಈ ವರ್ಗದಲ್ಲಿ ವೀರ ಸಿಂಹಾಸನ, ಧರ್ಮ ಸಿಂಹಾಸನ, ವೈರಾಗ್ಯ ಸಿಂಹಾಸನ, ಸೂರ್ಯ ಸಿಂಹಾಸನ ಹಾಗೂ ಜ್ಞಾನ ಸಿಂಹಾಸನಗಳೆಂಬುವುಗಳು ವೀರಶೈವ ಧರ್ಮದ ಗುರುಪೀಠಗಳಾಗಿ ಸ್ಥಾಪಿತಗೊಂಡಿವೆ.

ಮೂರು ಸಾವಿರ ಮಠ ಹುಬ್ಬಳ್ಳಿ, ಮುರುಘರಾಜೇಂದ್ರ ಶರಣರ ಬೃಹನ್ಮಠ ಚಿತ್ರದುರ್ಗ, ತೋಂಟದಾರ್ಯ ಮಠ ಗದಗ, ತರಳಬಾಳು ಮಠ ಸಿರಿಗೆರೆ, ನಿಡುಮಾಮಿಡಿ ಮಠ ಶ್ರೀಶೈಲ, ಶಿವಯೋಗ ಮಂದಿರ, ಸಿದ್ದಲಿಂಗೇಶ್ವರ ಮಠ ಎಡೆಯೂರು, ಫಕಿರೇಶ್ವರ ಮಠ ಶಿರಹಟ್ಟಿ , ನಾಗನೂರ ಮಠ ಬೆಳಗಾವಿ, ಮರುಘಾ ಮಠ ಧಾರವಾಡ, ಅನ್ನದಾನೇಶ್ವರ ಮಠ ಮುಂಡರಗಿ, ಸುತ್ತೂರ ಮಠ ಮೈಸೂರು, ಬೇಲಿ ಮಠ ಬೆಂಗಳೂರು ....... ಹೀಗೆ ಕರ್ನಾಟಕದಾದ್ಯಂತ ವೀರಶೈವ ಮಠಗಳು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಚಾರಿತ್ರಿಕವಾದ ಸಾಧನೆಗಳನ್ನು ಮಾಡಿರುವುದು ನೆನಪಿಡುವಂಥದ್ದು.

## ಬೀದರ

ಹೈದ್ರಾಬಾದ – ಕರ್ನಾಟಕ ವ್ಯಾಪ್ತಿಯಲ್ಲಿ ಬರುವ ಬೀದರ ಜಿಲ್ಲೆಯ ಭಾಲ್ಕಿ ಹಿರೇಮಠವು ಬಸವ ಧರ್ಮದ ತತ್ವಪಾಲನೆಯ ಕೇಂದ್ರ ಬಿಂದುವಾಗಿದೆ. ಈ ಭಾಗದಲ್ಲಿನ ವೀರಶೈವ ಧರ್ಮ ಮತ್ತು ಸಂಸ್ಕೃತಿಗಳ ಬೆಳವಣಿಗೆಗೆ ಕಾರಣವಾಗಿದೆ. ಲಿಂಗೈಕ್ಯ ಪೂಜ್ಯ ಶ್ರೀ ಮ.ಘ.ಚ. ಡಾ. ಚನ್ನಬಸವ ಪಟ್ಟದ್ದೇವರ ಕಾಲದಲ್ಲಿ ಧರ್ಮೋಪದೇಶಗಳನ್ನು ಸಾರಿದ್ದನ್ನು ಇಲ್ಲಿ ಸ್ಮರಿಸಬಹುದು. ಶ್ರೀಗಳ ಸಾಧನೆಯ ಕಾರ್ಯಗಳು ಸವಿಸ್ತಾರವಾಗಿ ಪ್ರಸ್ತಾಪಿಸಲಾಗಿದೆ. ಇಪ್ಪತ್ತನೆ ಶತಮಾನದಲ್ಲಿ ಬಾಳಿ – ಬದುಕಿ ಜನರ ಹೆಮ್ಮೆಯ ಗುರುಗಳಾಗಿದ್ದರು. ಈ ನಾಡಿನ ಶರಣರೆಂದೇ ಪ್ರಖ್ಯಾತಿ ಪಡೆದು ಮಹಾಪುರುಷರಾಗಿ, ಕಂಗೊಳಿಸಿದ್ದಾರೆ. ಇಡೀ ತಮ್ಮ ಬದುಕನ್ನು ಶಿವಮಯ ಮಾಡಿಕೊಂಡು ನಿಸ್ವಾರ್ಥತೆಯಿಂದ ಕಾಯಕದಲ್ಲಿ ತೊಡಗಿದವರು. "ಕಾಯಕಯೋಗಿ" ಯೆಂಬ

ಬಿರುದಿನೊಂದಿಗೆ ಹಿಗ್ಗದೆ, ಯಾವುದೇ ಸಮಸ್ಯೆ ಬಂದರೆ ಕುಗ್ಗದೆ, ಸದಾ ಹಸನ್ಮುಖಿಯಾಗಿ ಭಕ್ತರೊಡನೆ ಬೆರೆತು ಜೀವಿಸುತ್ತಿದ್ದರು. ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸಿದ ಶ್ರೀಗಳು ಮಠದ ಕೀರ್ತಿಯನ್ನು ಬಾನೆತ್ತರಕ್ಕೆ ಹರಡಿದರು. ನೂತನ ಶ್ರೀಗಳಾದ ಪೂಜ್ಯ ಶ್ರೀ ಮ.ಘ.ಚ. ಬಸವಲಿಂಗ ಪಟ್ಟದ್ದೇವರು ಗುರುಗಳು ಹೆಜ್ಜೆಯ ಮೇಲೆ ಹೆಜ್ಜೆಯನ್ನಿಟ್ಟು ಮುಂದೆ ಸಾಗುತ್ತಿದ್ದಾರೆ. ಭಾರತೀಯ ಬಸವ ಬಳಗದ ಅಧ್ಯಕ್ಷರಾಗಿ ಧರ್ಮ ಸಂಘಟನೆಯಲ್ಲಿ ತೊಡಗಿರುವುದು ಗಮನಾರ್ಹವಾಗಿದೆ. ಭಾಲ್ಕಿ ತಾಲೂಕಿನ ಭಾತಂಬ್ರಾ ವಿರಕ್ತ ಮಠ, ಗೌಡಗಾಂವ, ಮೇಹಕರ, ಲಖನಗಾಂವ, ಸಾಯಗಾಂವ, ಖಟಕ ಚಿಂಚೋಳಿ..... ಹೀಗೆ ಮುಂತಾದ ಗ್ರಾಮಗಳಲ್ಲಿ ವೀರಶೈವ ಮಠಗಳು ಕಾರ್ಯನಿರ್ವಹಿಸುತ್ತಿವೆ.

ಬಸವಕಲ್ಯಾಣ ತಾಲೂಕ ನಗರದಲ್ಲಿ ಕಣಗಿಲ ವಿರಕ್ತ ಮಠ, ಕಂಬಳಿ ಮಠ, ಕಳ್ಳಿ ಮಠ, ಹುಲಿಕಂಠಿ ಮಠ, ಹಿರೇಮಠ, ದಾಸೋಹ ಮಠ, ಗದ್ದುಗೆ ಮಠ, ಮಹಾಂತ ಮಠ,ಬಸವರಾಜ ದೇವರ ಮಠ, ಉರಿಲಿಂಗ ಪೆದ್ದಿ ಮಠ, ಅಲ್ಲಮ ಪ್ರಭು ದೇವರ ಮಠ, ಜೇಡರ ದಾಸಿಮಯ್ಯನ ಮಠ, ಅಕ್ಕನ ಮಠ, ಬಸವಣ್ಣನ ಮಠ ... ಹೀಗೆ ಹನ್ನೆರಡನೆ ಶತಮಾನದಲ್ಲಿ ೭೭೦ ಶರಣರ ಮನೆಗಳಿಗೆಲ್ಲ ಮಠಗಳೆಂದೆ ಕರೆಯುತ್ತಿದ್ದರೆಂದು ತಿಳಿದು ಬಂದಿದೆ. ತಾಲೂಕಿನ ಗ್ರಾಮಗಳಾದ ಹಿರೇನಗಾಂವ, ಚೆಲ್ಲೂರ, ಖೇಳಗಿ, ಮಂಠಾಳ, ತಡೋಳಾ, ರಾಜೇಶ್ವರ, ಗೋರ್ಟಾ, ಮುಚಳಂಬ, ಪ್ರತಾಪೂರ ...... ಹೀಗೆ ಅನೇಕ ಗ್ರಾಮಗಳಲ್ಲಿ ವೀರಶೈವ ಮಠಗಳು ಕಂಡು ಬಂದರೂ, ಹೂಲಸೂರ ಶ್ರೀಗುರು ಬಸವೇಶ್ವರ ಸಂಸ್ಥಾನ ಮಠ, ಹಾಗೂ ಹಾರಕೂಡ ಬೃಹನ್ಮಠಗಳು ಈ ಭಾಗದ ಧಾರ್ಮಿಕ ಕೇಂದ್ರ ಬಿಂದುಗಳಾಗಿ ಕ್ರಿಯಾಶೀಲವಾಗಿದ್ದು ಕಂಡು ಬರುತ್ತದೆ.

ಧಾರ್ಮಿಕ ಮತ್ತು ಸಾಮಾಜಿಕ ಪರಿಸರದಲ್ಲೆಯೇ ಹುಟ್ಟಿಕೊಂಡ ಹುಲಸೂರ ಶ್ರೀ ವಿರಕ್ತಮಠವು ಭವ್ಯ ಪರಂಪರೆ ಹಾಗೂ ಇತಿಹಾಸಗಳನ್ನೊಳಗೊಂಡಿದೆ. ಮಠದ ಪರಂಪರೆಯಲ್ಲಿ ಹತ್ತೊಂಬತ್ತು ಮಠಾಧೀಶರು ಕಾರ್ಯನಿರ್ವಹಿಸಿಕೊಂಡು ಬಂದಿದ್ದಾರೆ. ಇಂದು ನೂತನ ಶ್ರೀಗಳಾದ ಮ.ನಿ. ಪ್ರ.ಶಿವಾನಂದ ಮಹಾಸ್ವಾಮಿಗಳು ಬಸವ ಧರ್ಮದ ಬೆನ್ನೆಲುಬಾಗಿದ್ದಾರೆ. ಹಲವಾರು ಗ್ರಾಮಪಟ್ಟಣಗಳಿಗೆ ಅಲೆದಾಡಿ ಪಾಠ – ಪ್ರವಚನಗಳ ಮುಖಾಂತರ ಧರ್ಮದ ಸಂಘಟನೆ ಮಾಡಿದ್ದಾರೆ. ಅಲ್ಲದೆ ಅಂತರ್ಜಾತಿಯ ವಿವಾಹಕ್ಕೆ ಪ್ರೋತ್ಸಾಹ ಕೊಟ್ಟಿದ್ದಾರೆ. ಭಕ್ತರೊಡನೆ ನಿಕಟವಾದ, ಸಂಬಂಧವನ್ನು ಬೆಳೆಸಿಕೊಂಡು ಬರುತ್ತಿದ್ದಾರೆ. ಮಠದಲ್ಲಿ ಸಾಮಾಜಿಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸದಾ ನಡೆಸಿಕೊಂಡು ಬರುತ್ತಾರೆ. ಅಚ್ಚ ಶರಣರ ನಡೆ – ನುಡಿಗಳನ್ನೆ ಪರಿ ಪಾಲಿಸಿಕೊಂಡು ಬರುತ್ತಿದ್ದಾರೆ. ಶೈಕ್ಷಣಿಕ ಸಂಸ್ಥೆಯನ್ನು

ಸ್ಥಾಪಿಸಿ ಬಡ ವಿದ್ಯಾರ್ಥಿಗಳಿಗಾಗಿಯೇ ಪ್ರವೇಶ ಸಿಗುವಂತೆ ಪ್ರಯತ್ನಿಸಿದ್ದಾರೆ. ಸದಾ '' ಜನ ಸೇವೆಯೇ ಜನಾರ್ಧನ ಸೇವೆ'' ಯೆಂದು ಹಗಲಿರುಳು ದುಡಿಯುತ್ತಿದ್ದಾರೆ. ಅನ್ನದಾಸೋಹ ಸತತವಾಗಿ ನಡೆಸಿಕೊಂಡು ಬರುತ್ತಿದ್ದಾರೆ.

ಹಾರಕೂಡ ಬೃಹನ್ಮಠವು ಧಾರ್ಮಿಕ ಸಂಸ್ಥೆಯೆಂಬ ಬಿರುದಾಂಕಿತ ಪಡದಿದೆ. ಸಾವಿರಾರು ವರ್ಷಗಳ ಭವ್ಯ ಇತಿಹಾಸವನ್ನು ಹೊತ್ತು ಶ್ರೀ ಮಠವು ನಿಂತಿದೆ. ಐದನೆ ಪೀಠಾಧಿಪತಿಯಾದ ಲಿಂ. ಶ್ರೀ ಚನ್ನವೀರ ಶಿವಯೋಗಿಗಳು ಪವಾಡ ಪುರುಷರು ಸಿದ್ಧಿಪುರುಷರು, ದೇವಸ್ವರೂಪಿಯುಳ್ಳವರು. ಶ್ರೀಗಳ ಕಾಲದಲ್ಲಿ ದೇಶದ ಮೂಲೆ ಮೂಲೆಗಳಿಂದ ಭಕ್ತರು ಧಾವಿಸಿ ಬರುತ್ತಿದ್ದರು. ಬೇಡಿದ ಭಕ್ತರಿಗೆ ಬೇಡಿದ ವರವನ್ನು, ಫಲವನ್ನು ಕೊಡುತ್ತಿದ್ದರು. ಅವರನ್ನು ಸಾಕ್ಷಾತ್ ದೇವರೆಂದೇ ಜನ ಭಾವಿಸುತ್ತಿದ್ದರು. ಇಂದು ನೂತನ ಶ್ರೀಗಳಾದ ಪೂಜ್ಯ ಶ್ರೀ ಚನ್ನವೀರ ಶಿವಾಚಾರ್ಯ ಸ್ವಾಮಿಗಳು ಮಠದ ಹಾಗೂ ತಮ್ಮ ಹಿಂದಿನ ಪೂಜ್ಯರ ಫಲಗಳಿಂದ ಮಠದ ಉಸ್ತುವಾರಿಯನ್ನು ಉತ್ತಮ ರೀತಿಯಲ್ಲಿ ನಡೆಸಿಕೊಂಡು ಬರುತ್ತಿರುವುದನ್ನು ನೋಡಬಹುದು.

ಹುಮನಾಬಾದ ತಾಲೂಕಿನ ಹುಡಗಿ ಗ್ರಾಮದ ಹಿರೇಮಠವು ಅತ್ಯಂತ ಪ್ರಾಚೀನ ಮಠವಾಗಿದೆ. ಹದಿನೆಂಟನೆ ಶತಮಾನದಲ್ಲಿದ್ದ ಪೀಠಾಧಿಪತಿಯು ಶ್ರೀ ದಿಗಂಬರ ಕರಿಬಸವೇಶ್ವರರು. ಅವರು ಸಿದ್ಧಿಪುರುಷರಾಗಿದ್ದರು. ಇಂದು ಶ್ರೀ ವಿರೂಪಾಕ್ಷಪ್ಪ ಶಿವಾಚಾರ್ಯರು ಮಠವನ್ನು ಸುವ್ಯೆವಸ್ಥಿತ ರೀತಿಯಲ್ಲಿ ನಡೆಸಿಕೊಂಡು ಬರುತ್ತಿದ್ದಾರೆ. ಅಲ್ಲದೆ ಬೆಮಳಖೇಡ ಗ್ರಾಮವು ಮಠದಿಂದಲೇ ಬೆಳಕಿಗೆ ಬಂದಂತ್ತಿದೆ. ನಿಡವಂಚಾ ಗ್ರಾಮದ ಚೌಕಿ ಮಠವು ಶ್ರೀ ಭದ್ರೇಶ್ವರರಿಂದ ಸ್ಥಾಪನೆಗೊಂಡಿತ್ತೆಂದು ತಿಳಿದು ಬಂದಿದೆ. ಅವರು ಸ್ವತಃ ತತ್ವಪದಕಾರರಾಗಿದ್ದರು. ಇಂದು ಶ್ರೀ ಮಾತೆ ಮೈತ್ರಾದೇವಿಯವರು ಮಠದ ಅಧಿಕಾರವನ್ನು ವಹಿಸಿಕೊಂಡು ಜವಾಬ್ದಾರಿಯಿಂದ ನಡೆಸಿಕೊಂಡು ಬರುತ್ತಿದ್ದಾರೆ. ಹುಮನಾಬಾದ ನಗರದ ಕೆಂಪಯ್ಯನ ಮಠ, ಕುಂಬಾರ ಮಠ, ಬಸವತೀರ್ಥ ಮಠ, ಹಿರೇಮಠ, ವಿರಕ್ತ ಮಠ, ಕಾಶಿ ಮಠ, ಅನ್ನದಾನೇಶ್ವರ ಮಠ, ಗುಂಡದ ಮಠ, ಫಲಹಾರ ಮಠ, ಪತ್ರಿ ಮಠ, ಗವಿ ಮಠ, ಸ್ವಂತ ಮಠ, ಕಾಶಿಮಠ, ......... ಹೀಗೆ ೧೦೧ ಮಠಗಳು ಇದ್ದವೆಂದು ತಿಳಿದು ಬಂದಿದೆ. ಅವುಗಳೆಲ್ಲ ಈಗ ಮನೆಗಳಂತಾಗಿ ಪರಿವರ್ತನೆಗೊಂಡಿವೆ.

ಔರಾದ ತಾಲೂಕಿನಲ್ಲಿ ಕಂಡು ಬರುವ ವೀರಶೈವ ಮಠಗಳೆಂದರೆ ಠಾಣಾ ಕುಶನೂರು, ಹೆಡಗಾಪೂರ, ಸಂತಪೂರ, ವಡಗಾಂವ, ಜೊನ್ನಿಕೇರಿ, ಹಾವಗಿ ಡೊಣಗಾಂವ, ಮುಧೋಳ, ಚಿಕ್ಕ

ಆಲೂರ, ಬೆಡಕುಂದಾ, ಸಂಗಮ, ಕಮಲನಗರ ......ಹೀಗೆ ಮುಂತಾದ, ಗ್ರಾಮಗಳಲ್ಲಿ ವೀರಶೈವ ಮಠಗಳು ತಮ್ಮದೆಯಾದ ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಸಲ್ಲಿಸುತ್ತಿರುವುದನ್ನು ಅರಿಯಬಹುದು. ಬೀದರ ತಾಲೂಕಿನ ಮಾಡಿವಾಳೇಶ್ವರ ಮಠ ಲಾಡಗೇರಿಯ ರುದ್ರಮುನಿ ಸ್ವಾಮಿ ಮಠ, ಚಿದ್ರಿಯ ಇರಂತಿ ಮಠ, ಮುಪ್ಪೈನ ಮಠ, ಯದಲಾಪೂರ ಹಿರೇಮಠ, ಅಲಿಯಂಬರ ಹಿರೇಮಠ, ಚಾಂಬೊಳ ಹಿರೇಮಠ, ಬಸವ ಮುಕ್ತಿ ಮಂದಿರ ......... ಮುಂತಾದ ಮಠಗಳಿದ್ದರೂ, ಬೀದರ ಸಿದ್ಧಾರೂಢ ಮಠ ಧಾರ್ಮಿಕ ಕ್ಷೇತ್ರಗಳಲ್ಲಿ ಹಾಗೂ ಇನ್ನುಳಿದ ಕ್ಷೇತ್ರಗಳಲ್ಲಿ ಪ್ರಮುಖ ಪಾತ್ರವಹಿಸುತ್ತಿವೆ. ಗಣನೀಯ ಪ್ರಮಾಣದಲ್ಲಿ ಸೇವೆ ಸಲ್ಲಿಸುತ್ತಿವೆ. ಶ್ರೀ ಮಠದ ಪೀಠಾಧಿಪತಿಯಾದ ಶ್ರೀ ಶ್ರೀ ಶ್ರೀ ಪೂಜ್ಯ ಶಿವಕುಮಾರ ಮಹಾಸ್ವಾಮಿಗಳು ವೇದಾಂತ ಸಂಸ್ಕೃತ ಪಂಡಿತರಾಗಿದ್ದಾರೆ. ಪಾಠ– ಪ್ರವಚನಗಳು ಜನರ, ಭಕ್ತರ್ಮನಸಸ್ಸು ಹಿಡಿದಿಟ್ಟಿದ್ದಾರೆ. ಸದಾ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯ ಚಟುವಟಿಕೆಗಳನ್ನು ಶ್ರೀ ಮಠದಲ್ಲಿಯೇ ನೆರವೇರಿಸಿಕೊಂಡು ಬರುತ್ತಿರುವುದನ್ನು ಗಮನಿಸಬಹುದು. ಶ್ರೀಗಳು ಕನ್ನಡ, ಮರಾಠಿ, ಸಂಸ್ಕೃತ, ತೆಲಗು, ಹಿಂದಿ, ಹೀಗೆ ಐದು ಭಾಷೆಗಳಲ್ಲಿ ನಿರರ್ಗಳವಾಗಿ ಪ್ರವಚನವನ್ನು ಮಾಡಬಲ್ಲವರಾಗಿದ್ದಾರೆ.

ಹೀಗೆ ಬೀದರ ಜಿಲ್ಲೆಯ ವಿವಿಧ ವೀರಶೈವ ಮಠಗಳು ನಿಟ್ಟಿನಲ್ಲಿ ಪ್ರಗತಿ ಸಾಧಿಸುತ್ತಿರುವುದು ... ಶಾ ಅಭ್ಯಾಸಾರ್ಹವಾದುದು.

## ಗುಲಬರ್ಗಾ

ಗುಲಬರ್ಗಾ ನಗರದಲ್ಲಿರುವ ಶ್ರೀ ಶರಣಬಸವೇಶ್ವರ ಸಂಸ್ಥಾನ ಮಠವು ದಾಸೋಹ ಮಠವೆಂದೆ ಪ್ರಖ್ಯಾತಿ ಪಡೆದುಕೊಂಡಿದೆ. ಶ್ರೀ ಮಠದ ಪ್ರಾಚೀನತೆಯ ಭವ್ಯ ಇತಿಹಾಸವನ್ನು ಎತ್ತಿ ಹೇಳುತ್ತಿದೆ. ಶ್ರೀ ಶರಣಬಸವೇಶ್ವರ ಕಾಲದಲ್ಲಿ " ಮಹಾ ದಾಸೋಹ ಪೀಠ " ಮಠವೆಂದು ಜನ ಕರೆಯುತ್ತಿದ್ದರು. ಅದರೆ ಇಂದು ಮೊದಲಿನ ರೀತಿಯಲ್ಲಿ ದಾಸೋಹ ನಡೆದುಕೊಂಡು ಬರುತ್ತಿಲ್ಲ. ಅಂದಿನ ದಾಸೋಹ ಮಠಕ್ಕೆ ಇಂದಿನ ದಾಸೋಹ ಮಠಕ್ಕೂ ವ್ಯಾತ್ಯಾಸ ಬಹಳವಿದೆ. ನೂತನ ಶ್ರೀಗಳಾದ ಡಾ. ಶರಣಬಸಪ್ಪ ಅಪ್ಪನವರು ಶೈಕ್ಷಣಿಕ ಕ್ಷೇತ್ರದ ಕಡೆಗೆ ಹೆಚ್ಚಿನ ಗಮನ ಹರಿಸಿದ್ದು ಕಂಡು ಬರುತ್ತದೆ. ಅಲ್ಲದೆ ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ, ಕ್ಷೇತ್ರಗಳಲ್ಲಿ ಸಾಂಸ್ಕೃತಿಕವಾಗಿ ಮಹತ್ವದ ಕಾಣಿಕೆಯನ್ನು ಇದು ನೀಡುತ್ತಿದೆ.

ಗುಲಬರ್ಗಾ ನಗರದ ಚವದಾಪುರಿ ಹಿರೇಮಠವು ರಂಭಾಪೂರಿ ಪೀಠದ ಶಾಖಾ ಮಠವಾಗಿದೆ. ಈ ಮಠದ ಕೆಳಗೆ ಹದಿನಾಲ್ಕು ವೀರಶೈವ ಮಠಗಳು ಇರುವುದರಿಂದ ಈ ಮಠಕ್ಕೆ ಚವದಾಪುರಿ ಹಿರೇಮಠ ವೆಂದು ಕರೆಯುವುದು ಜನವಾಡಿಕೆ ಇದೆ. ಬಹುಮನಿ ಅರಸರ ಆಡಳಿತ ಕಾಲದಲ್ಲಿ ಈ ಹಿರೇಮಠವು ಜಿಲ್ಲೆಯ ಹೃದಯಭಾಗದಿಂದ ಬ್ರಹ್ಮಾಪೂರ ಪ್ರದೇಶಕ್ಕೆ ಸ್ಥಳಾಂತರಿಸಲಾಯಿತು. ಶ್ರೀ ಮಠ ಹಾಗೂ ಇದೆ ಗ್ರಾಮದ ಶ್ರೀ ಗುರುಬಸವನ ವಿರಕ್ತ ಮಠಗಳು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಸಾಹಿತ್ಯಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿವೆ. ಪಾಠ – ಪ್ರವಚನಗಳನ್ನು ಹಮ್ಮಿಕೊಂಡು ಜನರಿಗೆ ಅನುಕೂಲವಾಗುವಂತೆ ಧರ್ಮೋಪದೇಶ ತತ್ವಗಳನ್ನು ಬೀರುತ್ತಿದ್ದಾರೆ. ಭಕ್ತರೊಡನೆ ನಿಕಟವಾದ ಸಂಬಂಧ ಹಾಗೂ ಸಂಪರ್ಕಗಳನ್ನು ಹೊಂದಿ ನೂರಾರು ಕಾರ್ಯಕ್ರಮ ಮಾಡುತ್ತಿದ್ದಾರೆ. ನಗರದ ಮುಕ್ತಂಪುರ ಓಣಿಯಲ್ಲಿರುವ ಇನ್ನೊಂದು ಗದ್ದುಗೆಯ ವಿರಕ್ತ ಮಠವು ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಚಟುವಟಿಕೆಗಳ ಕೇಂದ್ರ ಬಿಂದುವಾಗಿದೆ. ಈ ಮಠದ ಪೀಠಾಧಿಪತಿಯಾದ ಶ್ರೀ. ಮ. ನಿ. ಪ್ರ. ರೇವಣಸಿದ್ದ ಸ್ವಾಮಿಗಳು ಪಾಠ – ಪ್ರವಚನಗಳನ್ನು ಹಮ್ಮಿಕೊಂಡು ಸದಾ ಸಾಂಸ್ಕೃತಿಕ ಸೌರಭದ ಸವಿಯುಣಿಸುತ್ತಿರುತ್ತಾರೆ. ಶ್ರೀಗಳು ಸಾಹಿತ್ಯದಲ್ಲಿ ಹೆಚ್ಚಿನ ಅಭಿರುಚಿಯುಳ್ಳವರಾಗಿದ್ದಾರೆ.

ಹೊನ್ನಕಿರಣಗಿ ರಾಚೋಟೇಶ್ವರ ಮಠ, ರಾಮಕೋಡ ಗ್ರಾಮದ ಹಿರೇಮಠ, ಮಾದನ ಹಿಪ್ಪರಗಿಯ ಶಿವಲಿಂಗೇಶ್ವರ ಮಠಗಳು ವೀರಶೈವ ಧರ್ಮದ ಜ್ಯೋತಿ ಬೆಳಗಿಸಲು ಪ್ರಯತ್ನ ಪಡುತ್ತಿವೆ. ಶ್ರೀ ಗುರು ನಂಜೇಶ್ವರ ಮಠ, ಭರತನೂರ ಗ್ರಾಮದ ಹಾಗೂ ಆ ಭಾಗದಲ್ಲಿ ಧಾರ್ಮಿಕ ಕೇಂದ್ರದಂತೆ ಕಾರ್ಯಚಟುವಟಿಕೆಯಲ್ಲಿ ತೊಡಗಿದೆ. ಶೈಕ್ಷಣಿಕ ಸಂಸ್ಥೆಯನ್ನು ಪ್ರಾರಂಭಿಸಿ ಅದರ ಮುಖಾಂತರ ನೂರಾರು ಬಡ ವಿದ್ಯಾರ್ಥಿಗಳಿಗೆ ಅಕ್ಷರದ ಅನುಕೂಲ ಮಾಡಿಕೊಟ್ಟಿರುತ್ತಾರೆ. ನಂದೂರ ಗ್ರಾಮದ ತೋಪನ ಕಟ್ಟಿ ಹಿರೇಮಠದ ಸ್ವಾಮಿಗಳು ಗುಲಬರ್ಗಾ ನಗರದಲ್ಲಿ ಬಂದು ನೆಲೆಸಿ ಗಿಡಮೂಲಿಕೆ ಔಷಧ ಕೊಡುವಲ್ಲಿ ಪ್ರಸಿದ್ದರಾಗಿದ್ದಾರೆ.

ಬೆಳಗುಂಡಿಯ ಹಿರೇಮಠ, ಪಾಳಾದ ಪಂಚಪೃತ್ತಿ ಕಟ್ಟಿಮನಿ ಮಠ, ಸುಲೇಪೇಟೆಯ ಖಟ್ವಾಂಗೇಶ್ವರ ಮಠ, ಸೊನ್ನದ ಸಿದ್ಧಲಿಂಗೇಶ್ವರ ಮಠ, ಕಡಕೋಳ ಗ್ರಾಮದ ಮಡಿವಾಳೇಶ್ವರ ಮಠ, ಗುಡ್ಡದ ಮಹಾತಪಸ್ವಿ ಶ್ರೀ ಮಹಾಂತೇಶ್ವರ ಮಠ, ನಾಲವಾರ ಗ್ರಾಮದ ಶ್ರೀ ಕೋರಿ ಸಿದ್ದೇಶ್ವರ ಮಠ, ಜೇವರ್ಗಿ ಗ್ರಾಮದ ಷಣ್ಮುಖ ಸ್ವಾಮಿಗಳ ಮಠ ......... ಹೀಗೆ ಮುಂತಾದ ವೀರಶೈವ ಮಠಗಳು ಧರ್ಮದ ಕೇಂದ್ರ ಬಿಂದುವಾಗಿ

ಬೆಳೆಯತೊಡಗಿವೆ. ಇವುಗಳಲ್ಲಿಯೇ ಶ್ರೀ ನಾಲವಾದ ಗ್ರಾಮದ ಶ್ರೀ ಕೋರಿಸಿದ್ದೇಶ್ವರ ಮಠವು ಹೆಚ್ಚು ಪ್ರಖ್ಯಾತಿ ಗಳಿಸಿದೆ. ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಂಡು ನಾಡಿನ ವಿವಿಧ ವಿದ್ವಾಂಸರನ್ನು ಪಂಡಿತರನ್ನು ಸಾಹಿತಿಗಳನ್ನು ಕರೆಯಿಸಿ, ಅವರ ಮುಖಾಂತರ ಧರ್ಮೋಪದೇಶ ಉಪನ್ಯಾಸ ಕಾರ್ಯಕ್ರಮಗಳನ್ನು ಗೋಷ್ಠಿಗಳನ್ನು ಏರ್ಪಡಿಸುತ್ತಾರೆ. ಭಕ್ತರಲ್ಲಿ ಅಪಾರ ಭಕ್ತಿ ಶ್ರದ್ಧೆ ಎದ್ದು ಕಾಣುತ್ತದೆ. ಶ್ರೀಗಳು ಸಾಹಿತ್ಯದಲ್ಲಿ ಹೆಚ್ಚಿನ ಅಭಿರುಚಿಯನ್ನು ಹೊಂದಿದ್ದಾರೆ. ಸೊನ್ನದ ಶ್ರೀ ಸಿದ್ಧಲಿಂಗೇಶ್ವರ ಮಠವು ಧಾರ್ಮಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತನ್ನದೆಯಾದ ಇತಿ ಮಿತಿಯಲ್ಲಿ ಕೆಲಸ ಮಾಡುತ್ತಲ್ಲಿದೆ.

ಜೇವರ್ಗಿ ಗ್ರಾಮದ ಷಣ್ಮುಖ ಶಿವಯೋಗಿಗಳ ಮಠವು ಇತ್ತಿಚಿಗೆ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಹೆಚ್ಚಿನ ಒಲವು ತೋರುತ್ತಿರುವುದು ಎದ್ದು ಕಾಣುತ್ತದೆ. ಧರ್ಮಗೋಷ್ಠಿಗಳನ್ನು ಏರ್ಪಡಿಸಿ ನಾಡಿನಾದ್ಯಂತ ಮಠಾಧೀಶರನ್ನು, ಭಕ್ತರನ್ನು, ಕರೆಯಿಸಿ ಧರ್ಮೋಪದೇಶ ಉಪನ್ಯಾಸಗಳನ್ನು ಕೊಡಿಸುತ್ತಾರೆ. ಖಜೂರಿ ಮಠದಲ್ಲಿ ಧಾರ್ಮಿಕ ಕಾರ್ಯಕ್ರಮದ ಜತೆಗೆ ಲಿಂಗದೀಕ್ಷೆ ಧಾರಣೆ ಮಾಡುವ ಸಂಪ್ರದಾಯ ಹೆಚ್ಚಾಗಿ ಕಂಡುಬರುತ್ತದೆ. ಸಾಮಾಜಿಕ ಕಳಕಳಿಯುಳ್ಳ ಈ ಮಠವು ಭಕ್ತರೊಡನೆ ನಿಕಟವಾದ ಸಂಬಂಧವನ್ನು ಇಟ್ಟುಕೊಂಡಿದೆ. ಚಿಣಮಗೇರಿ ಹಿರೇಮಠ, ಸುರಪೂರ ಹಿರೇಮಠ, ಮಾದ್ದರಗಿ ಹಿರೇಮಠ, ಅಚ್ಚೆಟುಮ ಕೂರು ಮಠ, ಜಡಗಾ ವಿರಕ್ತ ಮಠ, ದೊಡ್ಡ ಸಗರ ಹಿರೇಮಠ. ಹೀಗೆ ಮುಂತಾದ ಮಠಗಳು ದೊರೆಯುತ್ತವೆ.

## ರಾಯಚೂರ

ದೇವದುರ್ಗ ತಾಲೂಕಿನಲ್ಲಿ ಸಿದ್ದರಾಮೇಶ್ವರ ಶಿಖರ ಮಠ ಪ್ರಾಚೀನ ಮಠಗಳಲ್ಲೊಂದಾಗಿದೆ. ಈ ಮಠಕ್ಕೆ ಹಿರೇಮಠ ವೆಂದು ಕರೆಯುತ್ತಾರೆ. ಶ್ರೀ ಮಠದ ಐದನೇ ಪೀಠಾಧಿಪತಿಯಾದ ಶ್ರೀ ಸಿದ್ಧರಾಮೇಶ್ವರ ಮಹಾಸ್ವಾಮಿಗಳು, ಸಿದ್ಧಿ ಪುರುಷ, ಪವಾಡ ಪರುಷರು, ಆಗಿದ್ದರು. ಬೇಡಿದ ಭಕ್ತರಿಗೆ ವರವನ್ನು ನೀಡಿದವರು, ಇವರ ಕಾಲದಲ್ಲಿ ಶ್ರೀ ಮಠವು ಅಭಿವೃದ್ಧಿಯಾಗಿದೆ. ಧಾರ್ಮಿಕ ಗೋಷ್ಠಿಗಳನ್ನು ಏರ್ಪಡಿಸಿಕೊಂಡು ಭಕ್ತರನ್ನು ರಕ್ಷಿಸಿದ ಕೀರ್ತಿ ಶ್ರೀ ಮಠಕ್ಕಿದೆ. ನೂತನ ಪೀಠಾಧೀಪತಿಯಾದ ಷ. ಬ್ರ. ಶ್ರೀ ಕಪೀಲಸಿದ್ಧರಾಮ ಶಿವಚಾರ್ಯ ಸ್ವಾಮಿಗಳು ಸಾಮಾಜಿಕ, ಧಾರ್ಮಿಕ, ಹಾಗೂ ಸಾಂಸ್ಕೃತಿಕ ಕಾರ್ಯಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿರುವುದು ಕಂಡು ಬರುತ್ತದೆ.

ಗೆಜ್ಜೆಭಾವಿ ಗ್ರಾಮದ ಹಿರೇಮಠವು ಧಾರ್ಮಿಕ ಪರಿಸರದಲ್ಲಿಯೇ ಹುಟ್ಟಿಕೊಂಡಂಥಹ ಶ್ರೀ ಮಠವು ಪುರಾತನ ಮಠವಿದ್ದಂತೆ ಕಂಡು ಬರುತ್ತದೆ. ಮಸರಕಲ್ಲು ಗ್ರಾಮದ ಶ್ರೀ ಮುರುಘೇಂದ್ರ ಸ್ವಾಮಿಯ ಮಠವು ಈ ಭಾಗದ ಕಾರ್ಯ ಕ್ಷೇತ್ರದಲ್ಲಿ ಸಮಾಜ ಸೇವೆಯಲ್ಲಿ ತೊಡಗಿದೆ. ಗಬ್ಬೂರ ಗ್ರಾಮದ ಬೂದಿ ಬಸವೇಶ್ವರ ಮಠ, ಹಾಗೂ ಶ್ರೀ ಸಾವಿರದೇವರ ಮಠ ಮುಂತಾದವುಗಳು, ನಿಲಗಲ್ಲು ಗ್ರಾಮದ ಹಿರೇಮಠವು ತನ್ನದೆಯಾದ ಧರ್ಮಪ್ರಚಾರದಲ್ಲಿ ತೊಡಗಿರುವುದನ್ನು ಕಾಣಬಹುದು.

ಜಾಲಹಳ್ಳಿ ಗ್ರಾಮದ ಸಂಸ್ಥಾನ ಹಿರೇಮಠವು ಈ ತಾಲೂಕಿನ ವೀರಶೈವ ಮಠಗಳಲ್ಲಿ ಕೇಂದ್ರ ಮಠವೆಂದು ಪ್ರಖ್ಯಾತಿ ಪಡೆದುಕೊಂಡಿದೆ ಗ್ರಾಮದ ಹೃದಯ ಭಾಗದಲ್ಲಿ ಸ್ಥಾಪನೆಗೊಂಡಿರುವ ಮಠಕ್ಕೆ ಜಯಶಾಂತಲಿಂಗೇಶ್ವರ ಸಂಸ್ಥಾನ ಮಠವೆಂದು ಸಹ ಕರೆಯುತ್ತಾರೆ. ಶ್ರೀ ಮಠಕ್ಕೆ ಸುಮಾರು ಮೂವತ್ತಾರು ಸ್ವಾಮಿಗಳು ಅಧಿಕಾರಸ್ಥರಾಗಿ ಬಂದು ಹೋಗಿದ್ದಾರೆ. ಮಠದ ಪರಂಪರೆಯಲ್ಲಿ ಮೂರು ಭಾಗಗಳನ್ನು ಮಾಡಿ ಅಭಿದಾನ ಪಡೆದಿರುವುದು ಕಂಡುಬರುತ್ತದೆ. ಉದಾಃ " ಶ್ರೀ ದೇವಮಾನ್ಯ ಯೋಗಾಭಿನವ, ಶ್ರೀ ವಿದ್ಯಾಮಾನ್ಯ ಶಿವಾಭಿನವ, ಹಾಗೂ ಶ್ರೀ ವಿಶ್ವಮಾನ್ಯ ಪೂಜಾಭಿನವ " ಎಂಬ ಮೂರು ಹಂತಗಳು. ಈ ಮಠದ ಪರಂಪರೆ ಬಹಳ ಪ್ರಾಚೀನವಾದದ್ದು. ಶ್ರೀ ಮಠದಲಿ ಅಡ್ಡಪಲ್ಲಕ್ಕಿ ಉತ್ಸವಕ್ಕೆ ಪ್ರೋತ್ಸಾಹ ಇರುವುದು. ಅನೇಕ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದೆ. ನೂತನ ಪೀಠಾಧಿಪತಿಯಾದ ಶ್ರೀ ವಿದ್ಯಾನಂದರು ಶ್ರೀ ವಿದ್ಯಾಮಾನ್ಯ ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಚಾರ್ಯ ಸ್ವಾಮಿಗಳು, ಮಠದ ಅಭಿವೃದ್ಧಿಯ ಜತೆಗೆ ಭಕ್ತರೊಡನೆ ನಿಕಟ ಸಂಬಂಧ ಸಂಪರ್ಕಗಳನ್ನಿಟ್ಟುಕೊಂಡಿರುವುದು ಕಾಣುತ್ತದೆ.

ಲಿಂಗಸೂರು ತಾಲೂಕಿನಲ್ಲಿರುವ ಮಸ್ಕಿ ಗ್ರಾಮದ ಹಿರೇಮಠವು ಊರಿನ ಮಧ್ಯಭಾಗದಲ್ಲಿ ಎದ್ದು ಕಾಣುತ್ತದೆ. ಪ್ರಾಚೀನ ವಸ್ತುಗಳಾದ ಬೆಳ್ಳಿ, ಹಿತ್ತಾಳೆ, ಕಂಚಿನ ಸಾಮಾಗ್ರಿಗಳು ಶ್ರೀ ಮಠದಲ್ಲಿ ದೊರೆಯುತ್ತವೆ. ಈ ಮಠವು ಹೊಸದಾಗಿ ಪುನಃನಿರ್ಮಾಣಗೊಂಡ ಕಾರಣ ಇದಕ್ಕೆ ಗಚ್ಚಿನ ಮಠವೆಂದು ಕರೆಯುತ್ತಾರೆ. ಶ್ರೀಮಠದಲ್ಲಿ ನೂತನ ಪೀಠಾಧಿಪತಿಯಾದ ಷ. ಬ್ರ. ಶ್ರೀ ರುದ್ರದೇವ ಶಿವಚಾರ್ಯ ಸ್ವಾಮಿಗಳು ಧಾರ್ಮಿಕ ಹಾಗೂ ಸಾಂಸ್ಕೃತಿಕ ಗೋಷ್ಠಿಗಳನ್ನು ಏರ್ಪಡಿಸಿಕೊಂಡು ಬರುತ್ತಾರೆ. ನಾಡಿನ ಭಕ್ತರು ಬಂದು ಸ್ವಾಮಿಗಳ ದರ್ಶನ ಪಡೆಯುತ್ತಾರೆ. ದೇವರ ಭೂಪುರ ಗ್ರಾಮದ ಹಿರೇಮಠವು ಧಾರ್ಮಿಕ ಪ್ರಗತಿಯ ಕೇಂದ್ರ ಬಿಂದುವಾಗಿ ಈ ಭಾಗದಲ್ಲಿ ಕಂಗೊಳಿಸುತ್ತಿದೆ. ಈ ಮಠಕ್ಕೆ ಬೃಹನ್ಮಠವೆಂದು ಕರೆಯುವ ಸಂಪ್ರದಾಯವಿದೆ.

ಪಂಚಪೀಠಾಧೀಶರಿಂದ ಸ್ಥಾಪನೆಗೊಂಡ ಈ ಮಠವು ಅಮರೇಶ್ವರ ಸ್ವಾಮಿ ಮಠವೆಂದೇ ಪ್ರಖ್ಯಾತಿ ಪಡೆದುಕೊಂಡಿದೆ. ಪಾಠ – ಪ್ರವಚನಗಳಲ್ಲಿ ಶ್ರೀ ಮಠದ ಪಾತ್ರ ಮಹತ್ವದ್ದಾಗಿದೆ. ಈ ಮಠವು ಅತ್ಯಂತ ಪ್ರಾಚೀನವಾದುದು ಎಂದು ಹೇಳಲಾಗುತ್ತದೆ. ಈ ಮಠದ ಮಹತ್ವತೆಯೇನೆಂದರೆ ಹದಿನೆಂಟನೆ ಶತಮಾನದಿಂದ ಶ್ರೀ ಗಜದಂಡ ಶಿವಾಚಾರ್ಯ ಸ್ವಾಮಿಗಳು ಎಂಬ ಹೆಸರನ್ನೇ ಅಭಿದಾನ ಪಡೆದು ಮಠಕ್ಕೆ ಪಟ್ಟಾಧಿಕಾರ ವಹಿಸಿರುವುದು ಪರಂಪರೆಯಲ್ಲಿ ಕಂಡು ಬರುತ್ತದೆ. ಶ್ರೀ ಷ. ಬ್ರ. ಗಜದಂಡ ಶಿವಚಾರ್ಯ ಸ್ವಾಮಿಗಳು ಶ್ರೀಮಠದಲ್ಲಿ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಚಟುವಟಿಕೆಗಳನ್ನು ಅಭಿವೃದ್ಧಿ ಪಡೆಸಿದ್ದಾರೆ. ಶ್ರೀಮಠದಲ್ಲಿ ಅಡ್ಡಪಲ್ಲಕ್ಕಿ ಉತ್ಸವ ಕಾರ್ಯಕ್ರಮ ಜರುಗುತ್ತದೆ. ಸಮಾಜ ಒಳಿತಿಗಾಗಿ ಶ್ರೀಗಳು ಹಗಲಿರುಳು ಶ್ರಮಿಸುತ್ತಾರೆ.

ಲಿಂಗಸೂರು ತಾಲೂಕಿನ ನಗರದಲ್ಲಿ ವಿಜಯ ಮಹಾಂತೇಶ್ವರ ಮಠ, ಶ್ರೀ ತೋಂಟದಾರ್ಯ ಮಠ, ಅಸ್ತಿತ್ವದಲ್ಲಿದ್ದರೂ ಅಲ್ಲಿ ಯಾವುದೇ ರೀತಿಯ ಧಾರ್ಮಿಕ ಕಾರ್ಯಗಳು ನಡೆಯುವುದಿಲ್ಲ ''ಗುರುಗುಂಟ'' ಗ್ರಾಮದ ಹಿರೇಮಠದಲ್ಲಿ ಧಾರ್ಮಿಕ ಸಾಮಾಜಿಕ, ಹಾಗೂ ಸಾಂಸ್ಕೃತಿಕ ಕಾರ್ಯ ಚಟುವಟಿಕೆಗಳು ನಡೆದುಕೊಂಡು ಬರುತ್ತಿವೆ. ಈ ಮಠಕ್ಕೆ ಶ್ರೀ '' ತೋಪಿನ ಕಟ್ಟಿ ಸಂಸ್ಥಾನ ಮಠ '' ವೆಂದು ಕರೆಯುತ್ತಾರೆ. ನೂತನ ಶ್ರೀಗಳಾದ ಷ. ಬ್ರ. ಶ್ರೀ ಸದಾನಂದ ಶಿವಚಾರ್ಯ ಸ್ವಾಮಿಗಳು ಶ್ರೀ ಮಠದಲ್ಲಿ ಪಾಠ – ಪ್ರವಚನ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಾರೆ. ಭಕ್ತರೊಡನೆ ನಿಕಟವಾದ ಸಂಬಂಧವನ್ನು ಬೆಳೆಸಿದ್ದಾರೆ. ಇದೇ ಗ್ರಾಮದಲ್ಲಿರುವ ವಿರಕ್ತ ಮಠವೂ ಎದ್ದು ಕಾಣುವಂಥದ್ದು. ಇದಕ್ಕೆ '' ರಾಜಗುರು ಮಠ '' ವೆಂದು ಕರೆಯುತ್ತಾರೆ. ಈ ಮಠದಲ್ಲಿ ಮಠಾಧೀಶರಿಲ್ಲದೆ ಖಾಲಿ ಉಳಿದಿದೆ.

ಸಿಂಧನೂರು ತಾಲೂಕಿನ ನಗರದಲ್ಲಿ ಶ್ರೀ ಕಲ್ಮಠ, ಶ್ರೀ ಕಂಚಿ ಮಠ, ಶ್ರೀ ಸಿದ್ಧಾಂತ ಮಠ, ಶ್ರೀ ಗುಗ್ಗಳ ಮಠ, ಹಿರೇಮಠ, ವಿರಕ್ತ ಮಠ, ಸಗರದ ಮಠ, ಬಜಾರ ಮಠ, ಗಣಾಚಾರಿ ಮಠ, ಗಳೆಂಬ ಮುಂತಾದ ವೀರಶೈವ ಮಠಗಳು ದೊರೆತರೂ, ಅವುಗಳಲ್ಲಿ ಕಲ್ಮಠವು ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡು ವೀರಶೈವ ಧರ್ಮ ಸಂಘಟನೆ ಹಾಗೂ ಧರ್ಮ ಪ್ರಸಾರದ ಕೇಂದ್ರ ಬಿಂದುವಾಗಿ ಬೆಳೆಯುತ್ತಿದೆ. ಅದೇ ರೀತಿ ''ತೂರಬಿಹಾಳು'' ಗ್ರಾಮದ ಹಿರೇಮಠ, ಗೋಪುರ ಕಲ್ಲು ಗ್ರಾಮದ ಹಿರೇಮಠ, ಮುಳ್ಳೂರ ಗ್ರಾಮದ ಶ್ರೀ ಶಂಭುಲಿಂಗೇಶ್ವರ ಮಠಗಳು ವೀರಶೈವ ಧರ್ಮದ ಬೆನ್ನೆಲುಬಾಗಿ ರಚನಾತ್ಮಕ ಕಾರ್ಯ ಪ್ರವೃತ್ತಿಯಲ್ಲಿ ತೊಡಗಿವೆ.

ಮಾನವಿ ತಾಲೂಕಿನಲ್ಲಿ ಕಂಡುಬರುವ ಶ್ರಿ ಕಲ್ಮಠಕ್ಕೆ ಮುತ್ತಿನ ಪೆಂಡೆ ಮಠ ವೆಂದು ಕರೆಯುತ್ತಾರೆ. ಊಡಕನೂರ ಗ್ರಾಮದ ಶ್ರೀ ಅಡವಿಸಿದ್ಧೇಶ್ವರ ಮಠ, ಚಿಕ್ಕಲಪರ್ವಿ ಗ್ರಾಮದ ಶ್ರೀ ರುದ್ರದೇವರ ಮಠ, ಅಡವಿ ಅಮರೇಶ್ವರ ಮಠ ಹಾಗೂ ನವಿಲಕಲ್ಲ ಗ್ರಾಮದ ಹಿರೇಮಠ ........... ಹೀಗೆ ಮುಂತಾದ ವೀರಶೈವ ಮಠಗಳು ಧರ್ಮದ ಪ್ರತೀಕವಾಗಿ ಹುಟ್ಟಿಕೊಂಡಿವೆ. ತಮ್ಮ ತಮ್ಮ ಮಠಗಳಲ್ಲಿ ಪಾಠ – ಪ್ರವಚನಗಳ ಮುಖಾಂತರ ಜನರಲ್ಲಿರುವ ಅಂಧಕಾರ ಕಲ್ಮಶಗಳನ್ನು ಕಿತ್ತೊಗೆಯಲು ಹಗಲಿರುಳು ಶ್ರಮಿಸುವುದನ್ನು ಮನಗಾಣಬಹುದಾಗಿದೆ. ಇಲ್ಲಿಯ ಗುರುಗಳಾದ ಶ್ರೀ ಷ. ಬ್ರ. ಶಿವಚಾರ್ಯ ಸ್ವಾಮಿಗಳು ಧಾರ್ಮಿಕ ಜಾಗೃತಿಯನ್ನುಂಟು ಮಾಡುವವರಾಗಿದ್ದಾರೆ. ಧರ್ಮ ಸಂಘಟನೆಯಲ್ಲಿ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಗಣನೀಯವಾದ ಸೇವೆ ಸಲ್ಲಿಸುತ್ತಿದ್ದಾರೆ. ಹೀಗೆ ವೀರಶೈವ ಮಠಗಳು ಸಮಾಜದ ಸರ್ವತೋಮುಖ ಅಭಿವೃದ್ಧಿಗಾಗಿಯೇ ಹುಟ್ಟಿಕೊಂಡಿವೆ. ಭಕ್ತರೊಡನೆ ನೇರವಾದ ಸಂಪರ್ಕವನ್ನು ಹೊಂದಿವೆ.

**ಕೊಪ್ಪಳ**

ಕೊಪ್ಪಳ ತಾಲೂಕಿನ ಆಳವಂಡಿ ಗ್ರಾಮದ ಸಿದ್ದೇಶ್ವರ ಮಠ, ಎತ್ತಿನ ಹಟ್ಟಿ ಗ್ರಾಮದ ವಿರಕ್ತ ಮಠಗಳು ಧಾರ್ಮಿಕ ಪ್ರಸಾರದ ಕೇಂದ್ರ ಬಿಂದುವಾಗಿ ಹುಟ್ಟಿಕೊಂಡಿವೆ. ವಿರಕ್ತ ಮಠಕ್ಕೆ ''ಬಸವರಾಜೇಂದ್ರ ಸ್ವಾಮಿ ಮಠ'' ವೆಂದು ಕರೆಯುತ್ತಾರೆ. ಇಲ್ಲಿಯ ನೂತನ ಶ್ರೀಗಳಾದ ಮ. ನಿ. ಪ್ರ. ಗಂಗಾಧರ ಮಹಾಸ್ವಾಮಿಗಳು ಮಠದಲ್ಲಿ ಸರ್ವ ಧರ್ಮ ಸಮಾನತೆಯನ್ನು ಕಾಪಾಡಿಕೊಂಡು ಬರುತ್ತಿದ್ದಾರೆ. ಶ್ರೀ ಮಠದಲ್ಲಿ ಕಲ್ಯಾಣಮಂಟಪವನ್ನು ಪ್ರಾರಂಭಿಸಿ ಸರ್ವಧರ್ಮದವರಿಗೆ ಅವಕಾಶವನ್ನು ಕಲ್ಪಿಸಿಕೊಟ್ಟಿರುವುದನ್ನು ಕಾಣಬಹುದು. ಹಿರೇಸಿಂದಗಿ ಗ್ರಾಮದ ವಿರಕ್ತ ಮಠವು ತನ್ನದೆಯಾದ ಮಿತಿಯಲ್ಲಿ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕೊಡುಗೆಗಳನ್ನು ಸಲ್ಲಿಸುತ್ತಿದೆ. ಶ್ರೀ ಮಠದ ಮೂಲ ಸಂಸ್ಥಾಪಕರಾದ ಶ್ರೀ ಮ.ನಿ.ಪ್ರ ಚೆನ್ನಬಸವೇಶ್ವರ ಸ್ವಾಮಿಗಳು ಕಾಲದಲ್ಲಿ ಶ್ರೀ ಮಠವು ಸರ್ವತೋಮುಖ ಅಭಿವೃದ್ಧಿ ಸಾಧಿಸಿತ್ತು. ಶ್ರೀಗಳು ತಪೋನಿಧಿಗಳು ಸಿದ್ಧಿಪುರುಷರಾಗಿದ್ದರು. ಭಕ್ತರನ್ನು ಸರಿಸಮಾನ ದೃಷ್ಟಿಯಿಂದ ನೋಡುತ್ತಿದ್ದರು. ಈ ಭಾಗದಲ್ಲಿ ಜನರ ಧಾರ್ಮಿಕ ತಾಣವಾಗಿ ಸದರಿ ಮಠವು ಕಂಗೊಳಿಸುತ್ತಿದೆ. ಶ್ರೀಮಠದ ನೂತನ ಶ್ರೀಗಳು ಗುರುಗಳ ಹಜ್ಜೆಯ ಮೇಲೆ ಹೆಜ್ಜೆಯನ್ನಿಡುತ್ತ ಮಠವನ್ನು ಅಭಿವೃದ್ಧಿ ಪಡಿಸುತ್ತಿದ್ದಾರೆ. ಕೊಪ್ಪಳ ನಗರದ ಬೆಟ್ಟ ಗುಡ್ಡದಲ್ಲಿ ಕಂಗೊಳಿಸುತ್ತಿರುವ ಗವಿ ಮಠವು ಈ ಜಿಲ್ಲೆಯ ಧಾರ್ಮಿಕ ಕೇಂದ್ರ ಸ್ಥಳವಾಗಿದೆ. ವಿರಕ್ತ

ಸಂಪ್ರದಾಯದ ಈ ಮಠ ಪ್ರಾಚೀನತೆಯ ಇತಿಹಾಸವನ್ನು ಹೊತ್ತು ನಿಂತಿದೆ. ಶ್ರೀ ಮಠದ ಎರಡನೆ ಪೀಠಾಧಿಪತಿಯಾದ ಶ್ರೀ ಗವಿಸಿದ್ಧೇಶ್ವರ ಸ್ವಾಮಿಗಳು ಮಠವನ್ನು ಉನ್ನತ ರೀತಿಯಲ್ಲಿ ಅಭಿವೃದ್ಧಿ ಪಡಿಸಿದರು. ಸದಾ ಮಠದಲ್ಲಿ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುತ್ತವೆ. ಈ ಮಠಕ್ಕೆ ಶ್ರೀ ಗವಿಸಿದ್ಧೇಶ್ವರ ಮಠವೆಂದು ಕರೆಯುತ್ತಾರೆ. ಪಾಠ – ಪ್ರವಚನ ಕಾರ್ಯಚಟುವಟಿಕೆಗಳನ್ನು ಏರ್ಪಡಿಸಿ ನಾಡಿನ ವಿವಿಧ ವಿದ್ವಾಂಸರನ್ನು ಪಂಡಿತರನ್ನು ಸಾಹಿತಿಗಳನ್ನು ಕರೆಯಿಸಿ ಅವರಿಂದ ಉಪನ್ಯಾಸ ಉಪದೇಶಗಳನ್ನು ನೀಡುತ್ತಾರೆ. ಶ್ರೀ ಮಠದಲ್ಲಿ ಅನ್ನದಾಸೋಹವನ್ನು ಸತತವಾಗಿ ನಡೆಸಿಕೊಂಡು ಬರುತ್ತಾರೆ. ಗವಿಸಿದ್ಧೇಶ್ವರ ಶಿಕ್ಷಣ ಸಂಸ್ಥೆಯನ್ನು ತೆರೆದು ಅದರ ಮುಖಾಂತರ ಶೈಕ್ಷಣಿಕ ಸೇವೆಯಲ್ಲಿ ತಲ್ಲಿನರಾಗಿದ್ದಾರೆ. ಜತೆಗೆ ಸಾಹಿತ್ಯಿಕ ಅಭಿರುಚಿ ಇರುವ ಇಂದಿನ ನೂತನ ಪೀಠಾಧಿಪತಿಯಾದ ಶ್ರೀ ಶಾಂತವೀರ ಸ್ವಾಮಿಗಳು ಶ್ರೀ ಮಠದ ವತಿಯಿಂದ ಪ್ರಕಾಶನವನ್ನು ತೆರೆದು ಧಾರ್ಮಿಕ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಸಮಾಜದೊಡನೆ ನೇರ ಸಂಪರ್ಕವನ್ನು ಇಟ್ಟುಕೊಂಡಿರುತ್ತಾರೆ.

ಕೊಪ್ಪಳ ಜಿಲ್ಲೆಯ ಕುಷ್ಟಗಿ ನಗರದಲ್ಲಿ ಮದ್ದಾನೆ ಹಿರೇಮಠವು ಸ್ಥಾಪನೆಯಾದ ಐತಿಹಾಸಿಕ ಕತೆಯನ್ನು ಕಟ್ಟಲಾಗಿದೆ. ಕರ್ತೃ ಗುರುಗಳ ಹೆಸರನ್ನೇ ಅಭಿದಾನ ಪಡೆದುಕೊಂಡು ಪಟ್ಟಾಧಿಕಾರಿಗಳು ಬರುತ್ತಿರುವುದು ಈ ಮಠದ ಪರಂಪರೆಯಲ್ಲಿ ಕಂಡು ಬರುತ್ತದೆ. ಈ ಮಠದ ಮೂಲ ಪುರುಷರು, ಪವಾಡ ಪುರುಷರು, ಸಿದ್ಧಿ ಪುರುಷರೆಂದೆ ಪ್ರಖ್ಯಾತಿ ಪಡೆದವರಾಗಿದ್ದರು. ಹಲವಾರು ಧಾರ್ಮಿಕ ಹಾಗೂ ಸಾಂಸ್ಕೃತಿಕ ಗೋಷ್ಠಿಗಳನ್ನು ಏರ್ಪಡಿಸಿ ಧರ್ಮೋಪದೇಶ ಕಾರ್ಯಚಟುವಟಿಕೆಗಳು ಹಮ್ಮಿಕೊಳ್ಳುತ್ತಾರೆ. ಶ್ರೀ ಮಠದಲ್ಲಿ ಅನ್ನದಾಸೋಹ ಸತತವಾಗಿ ನಡೆಸಿಕೊಂಡು ಬಂದಿರುತ್ತಾರೆ. ಈ ಭಾಗದ ಧಾರ್ಮಿಕ ಕಾರ್ಯ ಚಟುವಟಿಕೆಗಳು ಚಿಂತನ ಮಂಥನ ಕಾರ್ಯಕ್ರಮಗಳು ಮಠದ ಮೂಲಕ ನಡೆಯುತ್ತಿವೆ. ಕುಷ್ಟಗಿ ಪಟ್ಟಣದಲ್ಲಿ ಪಟ್ಟಕಂತೆ ಹಿರೇಮಠವು ಕಂಡು ಬರುತ್ತದೆ. ಧಾರ್ಮಿಕ ಕ್ರಿಯೆಗಳನ್ನು ಸತತವಾಗಿ ನಡೆಸಿಕೊಂಡು ಭಕ್ತರೊಡನೆ ನಿಕಟವಾದ ಸಂಬಂಧವನ್ನಿಟ್ಟುಕೊಂಡಿದೆ. ಕೇಸೂರು ಗ್ರಾಮದ ಮಹಾಂತೇಶ್ವರ ಕಲ್ಮಠ ಗುಡದೂರ ಗ್ರಾಮದ ದೊಡ್ಡ ಬಸವೇಶ್ವರ ಮಠಗಳು ವೀರಶೈವ ಧರ್ಮ ಸಂಘಟನೆ ಹಾಗೂ ಧಾರ್ಮಿಕ ರಕ್ಷಣೆಯ ಕಾರ್ಯದಲ್ಲಿ ತೊಡಗಿವೆ. ಅದರಂತೆಯೇ ಚಳಗೇರಿ ಗ್ರಾಮದ ಹಿರೇಮಠವು ಧಾರ್ಮಿಕ ಕ್ಷೇತ್ರದಲ್ಲಿ ಗಣನೀಯವಾದ ಸೇವೆ ಸಲ್ಲಿಸುತ್ತಿದೆ. ನೂತನ ಶ್ರೀಗಳಾದ ಷ. ಬ್ರ. ಶ್ರೀ ವೀರಸಂಗಮೇಶ್ವರ ಶಿವಚಾರ್ಯ ಸ್ವಾಮಿಗಳು ಧರ್ಮೋಪದೇಶಗಳನ್ನು ಸಾರುತ್ತ ಜನರಿಗೆ ಹತ್ತಿರವಾಗಿದ್ದಾರೆ. ಶ್ರೀ ಮಠವನ್ನು

ಅಭಿವೃದ್ಧಿಪಡಿಸಿ ಜೀರ್ಣೋದ್ಧಾರ ಮಾಡಿದ್ದಾರೆ. ಶ್ರೀ ಮಠದಲ್ಲಿ ದೀಕ್ಷೆಯನ್ನು ಕೊಡುವ ಸಂಪ್ರದಾಯ ಬೆಳೆಸಿಕೊಂಡು ಬಂದಿರುತ್ತಾರೆ. ನಾಡಿನ ವಿದ್ವಾಂಸರಾದ ಸಂಗೀತಗಾರರನ್ನು ಸಾಹಿತಿಗಳನ್ನು ಪಂಡಿತರನ್ನು ಮಠಾಧೀಶರನ್ನು ಕರೆಯಿಸಿ ಧಾರ್ಮಿಕ ಗೋಷ್ಠಿಗಳನ್ನು ಏರ್ಪಡಿಸುತ್ತಾರೆ.

ಈ ಭಾಗದ ನಿಡಸೇಸಿ ಹಿರೇಮಠಕ್ಕೆ ಪಟ್ಟಕಂತೆ ಮಠವೆಂದು ಕರೆಯುವ ವಾಡಿಕೆ ಇದೆ. ಇಲ್ಲಿ ಧಾರ್ಮಿಕ ಕಾರ್ಯಚಟುವಟಿಕೆಗಳು ನಡೆಯುತ್ತಿವೆ. ಪುರ್ತಗೇರಿ ಗ್ರಾಮದ ಹಿರೇಮಠ, ಮುದನೂರು ಚಂದ್ರಶೇಖರ ಸ್ವಾಮಿಗಳ ಮಠಗಳು ವೀರಶೈವ ಧರ್ಮದ ತತ್ವ ಸಂರಕ್ಷಣೆಗಾಗಿ ಪ್ರಚಾರಕ್ಕಾಗಿ ಹಗಲಿರುಳು ಶ್ರಮಿಸುತ್ತಿವೆ. ಜತೆಗೆ ಸಾಹಿತ್ಯಿಕವಾದ ಸೇವೆಯನ್ನು ಸಲ್ಲಿಸುತ್ತಿರುವುದು ಕಾಣಬಹುದು.

ಗಂಗಾವತಿ ತಾಲೂಕಿನಲ್ಲಿ ಅರಳಹಳ್ಳಿ ವಿರಕ್ತ ಮಠ, ಆರಾಳ ಹಿರೇಮಠ, ಕನಕಗಿರಿ ವಿರಕ್ತ ಮಠಗಳು,ಹಾಗೂ ಹಿರೇಮಠಗಳು ಸಮಾಜ ಮುಖಿಯಾದ ಚಲನೆಯನ್ನು ಹೊಂದಿವೆ. ಆದರೂ ಗಂಗಾವತಿ ತಾಲೂಕಿನ ಹೃದಯಭಾಗದಲ್ಲಿ ಎದ್ದು ತೋರುವ ಕೊಟ್ಟುರೇಶ್ವರ ಕಲ್ಮಠ ಈ ಭಾಗದ ಧಾರ್ಮಿಕ ಕೇಂದ್ರ ಬಿಂದುವಾಗಿ ಬೆಳೆಯತೊಡಗಿದೆ. ಹಲವಾರು ಧಾರ್ಮಿಕ ಗೋಷ್ಠಿಗಳನ್ನು ಏರ್ಪಡಿಸಲಾಗುತ್ತಿದೆ. ನೂತನ ಶ್ರೀಗಳಾದ ಕೊಟ್ಟುರು ಸ್ವಾಮಿಗಳು ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಉತ್ತಮವಾದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಅಲ್ಲದೆ ಮಠವನ್ನು ಉನ್ನತ ರೀತಿಯಲ್ಲಿ ಅಭಿವೃದ್ಧಿ ಗೊಳಿಸುತ್ತಿದ್ದಾರೆ. ಇದೇ ಗ್ರಾಮದಲ್ಲೊಂದು ಮಲ್ಲಿಕಾರ್ಜುನ ಮಠವು ಸ್ಥಾಪನೆಯಾದುದು ಕಂಡು ಬರುತ್ತದೆ.

ಸೂಳೇಕಲ್ಲು ಗ್ರಾಮದ ಬೃಹನ್ಮಠ, ಬೂದಗುಂಪಾ ವಿರಕ್ತ ಮಠ, ಹೆಬ್ಬಾಳ ಗ್ರಾಮ ಬೋಳೊಡಿ ಬಸವೇಶ್ವರ ಶಿವಯೋಗಿಗಳ ಸಂಸ್ಥಾನ ಮಠಗಳು ಸತತ ವೀರಶೈವ ಧರ್ಮದ ತತ್ವ ಪರಿಪಾಲನೆ ಧರ್ಮೋಪದೇಶ ಹಾಗೂ ಕಾರ್ಯಚಟುಟಿಕೆಗಳಲ್ಲಿ ತನ್ನದೆಯಾದ ಮಿತಿಯಲ್ಲಿ ಪಾತ್ರವನ್ನು ವಹಿಸಿವೆ. ಸಾಂಸ್ಕೃತಿಕವಾಗಿ, ಸಾಹಿತ್ಯಿಕ, ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಅಲ್ಪ ಪ್ರಮಾಣದ ಕಾರ್ಯದಲ್ಲಿ ತೊಡಗಿವೆ.

ಯಲಬರ್ಗಾ ತಾಲೂಕಿನ ಶ್ರೀಧರ ಮುಡಿ ಮಠ, ಸಿದ್ಧರಾಮೇಶ್ವರ ಸಂಸ್ಥಾನ ಹಿರೇಮಠ, ಮಂಗಳೂರು ಹಿರೇಮಠ, ಬೆದವಟ್ಟಿಯ ಹಿರೇಮಠ, ಕುದರೆ ಮೊತಿ ಗ್ರಾಮದ ಮೈಸೂರ ಸಂಸ್ಥಾನ ವಿರಕ್ತ

ಮಠ, ಕುಕನೂರ ಹಿರೇಮಠ, ತಳಕಲ್ಲು ಹಿರೇಮಠ ..... ಹೀಗೆ ಮುಂತಾದ ಗ್ರಾಮದಲ್ಲಿ ವೀರಶೈವ ಮಠಗಳು ತನ್ನದೆಯಾದ ಮಿತಿಯಲ್ಲಿ ತಮ್ಮ ಕಾರ್ಯ ವ್ಯಾಪ್ತಿಯಲ್ಲಿ ತೊಡಗಿವೆ.

## ೩. ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನವನ್ನು ಏಳು ಅಧ್ಯಾಯಗಳಲ್ಲಿ ವಿಂಗಡಿಸಿಕೊಂಡಿದ್ದೆನೆ. ಈ ಏಳು ಅಧ್ಯಾಯಗಳು ಹೈದ್ರಾಬಾದ ಕರ್ನಾಟಕ ವೀರಶೈವ ಮಠಗಳ ವಿವಿಧ ರಚನಾತ್ಮಕ ಹಾಗೂ ಜನಮುಖಿ ಕಾರ್ಯಗಳ ಕುರಿತು ಸವಿಸ್ತಾರವಾಗಿ ವಿಶ್ಲೇಷಣೆಗೊಳಪಡಿಸುತ್ತವೆ.

ಈ ವಿಶ್ಲೇಷಣೆಗೆ ಸಹಾಯಕವಾಗುವಂತೆ ನಾನು ಕ್ಷೇತ್ರಕಾರ್ಯದ ಮೂಲಕ ವಿವಿಧ ಮಠಗಳು, ಮಠಾಧೀಶರು, ಭಕ್ತ ಸಮೂಹ, ಸಾಂಸ್ಕೃತಿಕ ಚಿಂತಕರುಗಳನ್ನು ಸಂದರ್ಶಿಸಿ, ಪಡೆದ ಮಾಹಿತಿಯನ್ನು ಬಳಸಿಕೊಂಡಿದ್ದೇನೆ. ಅಲ್ಲದೆ ಮಠಗಳಲ್ಲಿ ಅಳಿದುಳಿದ ಅವಶೇಷಗಳು, ಶಾಸನಗಳು, ಹಸ್ತಪ್ರತಿಗ್ರಂಥ ಪ್ರಾಚೀನ ಸಾಮಗ್ರಿಗಳನ್ನು ಸಹಾಯಕ ಸಾಹಿತ್ಯವನ್ನಾಗಿ ಬಳಸಿಕೊಳ್ಳುತ್ತೇನೆ. ಅಲ್ಲದೆ ಮಠಗಳ ಬಗ್ಗೆ ಇದೂವರೆಗೂ ಚರ್ಚಿತವಾದ ಸಾಹಿತ್ಯಿಕ ಹಾಗೂ ಚಾರಿತ್ರಿಕ ಬರವಣಿಗೆಯನ್ನು ಹಾಡಿನ ಧ್ವನಿ ಸುರುಳಿ (ಕ್ಯಾಸೆಟ್) ಗಳು ಮತ್ತು ಜನಪದ, ಸಾಹಿತ್ಯವನ್ನು ಪ್ರಧಾನವಾಗಿ ಬಳಸಿಕೊಂಡಿರುವೆನು.

ಒಟ್ಟು ಅಧ್ಯಯನದ ತಾತ್ವಿಕ ಮತ್ತು ಸೈದ್ಧಾಂತಿಕ ಸ್ವರೂಪವನ್ನು ಈ ಕೆಳಗಿನಂತೆ ನೋಡಬಹುದು. ಪ್ರಸ್ತುತ ಪ್ರಬಂಧದ ಮೊದಲು ಅಧ್ಯಾಯವು ಅಧ್ಯಯನದ ಉದ್ದೇಶ ವ್ಯಾಪ್ತಿ ಅಧ್ಯಯನಕ್ಕೊಳಪಡಿಸಿದ ಮಠಗಳ ಸಂಕ್ಷಿಪ್ತ ವಿವರಣೆಯನ್ನು ಚಿತ್ರಿಸಿಕೊಡುತ್ತದೆ ಹಾಗೂ ಇಂಥ ಮಠಗಳ ಸಾಂಸ್ಕೃತಿಕ ಮಹತ್ವವನ್ನು ಕುರಿತು ನಾನು ನಡೆಸಿದ ಅಧ್ಯಯನ ವಿಧಾನವನ್ನು ಒಳಗೊಂಡಿದೆ.

ಎರಡನೆಯ ಅಧ್ಯಾಯದಲ್ಲಿ ''ಹೈದ್ರಾಬಾದ – ಕರ್ನಾಟಕ ಚಾರಿತ್ರಿಕ ಅವಲೋಕನ'' ಮಾಡಲಾಗಿದೆ. ಈ ಭಾಗವನ್ನಾಳಿದ ಆಳರಸರ ಸಂಕ್ಷಿಪ್ತ ರಾಜಕೀಯ ಚರಿತ್ರೆಯನ್ನು ಇಲ್ಲಿ ಹೇಳಲಾಗಿದೆ. ಈ ಭಾಗವು ಆಳರಸರ ಬ್ರಿಟಿಷರಿಂದ ವಿಮೋಚನೆಗೊಂಡದನ್ನೂ ಚಿತ್ರಿಸಲಾಗಿದೆ. ಧಾರ್ಮಿಕ ಹಾಗೂ ಸಾಹಿತ್ಯಿಕವಲ್ಲದ ಸಾಂಸ್ಕೃತಿಕ ಚರಿತ್ರೆಯ ಒಟ್ಟ ಇತಿಹಾಸವನ್ನು ಎತ್ತಿ ಹೇಳಲಾಗಿದೆ. ಈ ಭಾಗದಲ್ಲಿ ಹುಟ್ಟಿ ಬೆಳೆದ ವಚನಕಾರರನ್ನು, ನದಿಗಳನ್ನು ಪರಿಚಯಿಸುವ ಮೂಲಕ ಮುಂದಿನ ನನ್ನ ಅಧ್ಯಯನಕ್ಕೆ ವಿಸ್ತಾರವಾದ ಮತ್ತು ತಾತ್ವಿಕವಾದ ಭೂಮಿಕೆಯನ್ನು ಸಿದ್ದಪಡಿಸಿಕೊಂಡಿದ್ದೇನೆ.

'' ಮಠ ಮಠಾಧೀಪತಿ'' ಎಂಬ ಶೀರ್ಷಿಕೆಯ ಮೂರನೆಯ ಅಧ್ಯಾಯನದಲ್ಲಿ ಮಠ ವೆಂಬ ಪದದ ಅರ್ಥ, ಸ್ವರೂಪ, ವಿಕಾಸದ ಕುರಿತು ಹೇಳಲಾಗಿದೆ. ವೀರಶೈವ ಮಠಗಳಲ್ಲಿ ಕಂಡುಬರುವ ಪ್ರಭೇಧಗಳನ್ನು ಗುರುತಿಸಿ, ಅವುಗಳ ರಾಚನೀಕ ಸ್ವರೂಪಗಳನ್ನು ಸೈದ್ಧಾಂತಿಕ ಮನೋಧರ್ಮದ ಮಹತ್ವತೆಯ ಸಂಗತಿಗಳನ್ನು ಗುರುತಿಸಲಾಗಿದೆ. ಮಠಗಳಲ್ಲಿರುವ ಮಠಾಧೀಪತಿಯ ಸ್ಥಾನ – ಮಾನಗಳನ್ನು ಸೂಕ್ಷ್ಮವಾಗಿ ಅವಲೋಕಿಸಲಾಗಿದೆ.

'' ಹೈದ್ರಾಬಾದ – ಕರ್ನಾಟಕ ವೀರಶೈವ ಮಠಗಳು'' ಎಂಬುದು ನಾಲ್ಕನೆಯ ಅಧ್ಯಾಯವಾಗಿದೆ. ನಾಲ್ಕು ಜಿಲ್ಲೆಯಲ್ಲಿ ದೊರೆಯುವ ಸುಮಾರು ಎಂಬತ್ತೇಳು ವೀರಶೈವ ಮಠಗಳು ಸ್ಥೂಲ ಚಿತ್ರಣವನ್ನು ಹಾಗೂ ಮಠದ ಪರಂಪರೆ ಹಾಗೂ ಶಾಖಾ ಮಠಗಳನ್ನು ಹೆಸರಿಸಲು ಪ್ರಯತ್ನಿಸಲಾಗಿದೆ.

''ಹೈದ್ರಾಬಾದ – ಕರ್ನಾಟಕ ವೀರಶೈವ ಮಠಗಳ ಕೊಡುಗೆ'' ಎಂಬುದು ಐದನೆಯ ಅಧ್ಯಾಯನವಾಗಿದೆ. ಇಲ್ಲಿ ಮಠಗಳ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ,ಹಾಗೂ ಸಾಂಸ್ಕೃತಿಕವಾಗಿ ಅವು ಚಲನಶೀಲನೆಗೊಂಡ ಬಗೆಗಳನ್ನು, ಕೊಡುಗೆಯನ್ನು ವಿವಿಧ ರೀತಿಯಲ್ಲಿ ವಿಂಗಡಿಸಲಾಗಿದೆ. ಅವುಗಳ ಮಹತ್ವತೆಯನ್ನು ವಿಶ್ಲೇಷಿಸಲಾಗಿದೆ. ಹಾಗೆ ಸಾಂಸ್ಥಿಕರಣದ ಮೂಲಕ ಮಠಗಳು ಜಡಗೊಂಡ ನೆಲೆಗಳನ್ನು, ಸಮಾಜ ವಿಮುಖಿ ಧೋರಣೆಗಳನ್ನು ಕುರಿತೂ ವಿಶ್ಲೇಷಿಸಲಾಗಿದೆ.

ವೀರಶೈವ ಮಠಗಳಲ್ಲಿ ದೊರೆಯುವ ಗುರುವರ್ಗದ ಮಠಗಳು ಹಾಗೂ ವಿರಕ್ತ ವರ್ಗದ ಮಠಗಳು ತೌಲನಿಕ ಅಧ್ಯಯನ ಆರನೇ ಅಧ್ಯಾಯದ ವಸ್ತುವಾಗಿದೆ. ಈ ಎರಡು ಮಠಗಳಲ್ಲಿ ದೊರೆಯುವ ಭಿನ್ನ ಹಾಗೂ ಸಮಾನ ಅಂಶಗಳು, ವಿಶಿಷ್ಟ ಅಂಶಗಳನ್ನು ಪಟ್ಟಿಮಾಡಿ ಇಲ್ಲಿ ಅರ್ಥಪೂರ್ಣವಾಗಿ ಚರ್ಚಿಸಲಾಗಿದೆ. ಕೊನೆಯ ಹಾಗೂ ಏಳನೇ ಅಧ್ಯಾಯವು ಸಮಾರೋಪ ಭಾಗವಾಗಿರುತ್ತದೆ. ಅಧ್ಯಯನದ ಫಲಿತಗಳನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

ಹೀಗೆ ಹೈದ್ರಾಬಾದ – ಕರ್ನಾಟಕ ವೀರಶೈವ ಮಠಗಳ ಕುರಿತು ಅಧ್ಯಯನವನ್ನು ವಿವಿಧ ಸಾಂಸ್ಕೃತಿಕ ಚಾರಿತ್ರಿಕ ದಾಖಲೆಗಳನ್ನು, ಗಮನದಲ್ಲಿರಿಸಿಕೊಂಡು ನಡೆಸಲಾಗಿದೆ. ಅಲ್ಲದೆ ಹೈದ್ರಾಬಾದ – ಕರ್ನಾಟಕ ಭೌಗೋಳಿಕ ಚಾರಿತ್ರಿಕ ಸಂಗತಿಗಳನ್ನು ಗಮನದಲ್ಲಿರಿಸಿಕೊಂಡು ವೀರಶೈವ ಮಠಗಳ ಬೆಳವಣಿಗೆ ಪ್ರೇರಣೆ, ಪ್ರಭಾವ, ಪರಂಪರೆಯ, ಇತಿಹಾಸವನ್ನು ಸಂಶೋಧನಾತ್ಮಕವಾಗಿ ವಿಶ್ಲೇಷಿಸಲಾಗಿದೆ. ಪ್ರತಿಯೊಂದು ಅಧ್ಯಯನಗಳಲ್ಲಿ ವಿವಿಧ ರೀತಿಯ ವಿಷಯಗಳನ್ನು ಪ್ರಸ್ತಾಪ ಮಾಡಲಾಗಿದೆ. ಆ ಮೂಲಕ ಧನಾತ್ಮಕ ಮತ್ತು ಋಣಾತ್ಮಕ ಬೆಳವಣಿಗೆಗಳನ್ನು ಅವುಗಳ ಸಾಮಾಜಿಕ ಹಾಗೂ ಸಾಂಸ್ಕೃತಿಕ ಉಪಯುಕ್ತತೆಗಳನ್ನು ಜವಾಬ್ದಾರಿಗಳನ್ನು ಕಂಡುಕೊಳ್ಳಲು ಇಲ್ಲಿ ಪ್ರಾಮಾಣಿಕವಾಗಿ ಪ್ರಯತ್ನಿಸಿದ್ದೇನೆ.



✿✿

# ಅಧ್ಯಾಯ ಃ ಎರಡು

## ಹೈದ್ರಾಬಾದ – ಕರ್ನಾಟಕ ಚಾರಿತ್ರಿಕ ಅವಲೋಕನ

೧. ಹಿನ್ನಲೆ

೨. ವಿಮೋಚನಾ ಚಳುವಳಿ

೩. ಧಾರ್ಮಿಕ ಚರಿತ್ರೆ

೪. ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಚರಿತ್ರೆ

೫. ಹೈದ್ರಾಬಾದ – ಕರ್ನಾಟಕ ಭಾಗದ ವಚನಕಾರರು

೬. ಹೈದ್ರಾಬಾದ – ಕರ್ನಾಟಕ ಭಾಗದ ನದಿಗಳು

## ೧. ಹಿನ್ನಲೆ

''ಕಾವೇರಿಯಿಂದ ಮಾ ಗೋದಾವರಿ ವರಮಿರ್ದ ನಾಡಾದ ಕನ್ನಡದೊಳ್'' ಎಂದು ಕವಿರಾಜ ಮಾರ್ಗಕಾರನು ಹೇಳಿರುವಂತೆ ಹೈದ್ರಾಬಾದ ಕರ್ನಾಟಕ ವ್ಯಾಪ್ತಿಯು ಬಹಳ ವಿಶಾಲವಾಗಿದೆ. ಭಾರತ ಸ್ವಾತಂತ್ರ್ಯ ಪೂರ್ವದಲ್ಲಿ ಹದಿನಾರು ಜಿಲ್ಲೆಗಳ ವ್ಯಾಪ್ತಿಯು ಹರಡಿತ್ತು. ಭೌಗೋಳಿಕವಾಗಿ ದಖನ ಪ್ರಸ್ಥ ಭೂಮಿಯಲ್ಲಿರುವ ಉತ್ತರ ಕರ್ನಾಟಕದ ಭಾಗದಲ್ಲಿ ಬೀದರ, ಗುಲಬರ್ಗಾ, ರಾಯಚೂರು, ಎಂಬ ಮೂರು ಜಿಲ್ಲೆಗಳು ಕರ್ನಾಟಕದಲ್ಲಿ ಹರಡಿದವು. ಮಹಾರಾಷ್ಟ್ರದಲ್ಲಿ ಔರಂಗಾಬಾದ, ಉಸ್ಮಾನಾಬಾದ, ಭೀಡ, ಪರ್ಬನಿ, ನಾಂದೆಡ, ಗಳೆಂಬ ಐದು ಜಿಲ್ಲೆಗಳ ಒಳಗೊಂಡಿತ್ತು. ಆಂದ್ರ ಪ್ರದೇಶದ ಭಾಗದಲ್ಲಿ ಮೇದಕ, ನಿಜಾಮಬಾದ, ಮೇಹಬುಬನಗರ, ಕರಿಂನಗರ, ವರಂಗಲ, ಹಾಗೂ ಸಿಕಿಂದ್ರಾಬಾದ ಹೈದ್ರಾಬಾದ, ಗಳೆಂಬ ಏಳು ಜಿಲ್ಲೆಗಳು ಹೊಂದಿಕೊಂಡಿತ್ತು. ಹೀಗೆ ಹೈದ್ರಾಬಾದ ಕರ್ನಾಟಕ ವ್ಯಾಪ್ತಿಯೂ ಆಂದ್ರ ಪ್ರದೇಶ, ಮಹಾರಾಷ್ಟ್ರ, ಕರ್ನಾಟಕಗಳಾದ ಮೂರು ರಾಜ್ಯಗಳಲ್ಲಿ ಸೇರಿದನ್ನು ಇತಿಹಾಸದ ಮೂಲಕ ತಿಳಿದ ಸಂಗತಿಯಾಗಿದೆ. ಸದ್ಯಕ್ಕೆ ಹೈದ್ರಾಬಾದ ಕರ್ನಾಟಕ ಪ್ರದೇಶದಲ್ಲಿ ಬೀದರ, ಗುಲಬರ್ಗಾ,ರಾಯಚೂರ ಹಾಗೂ ಕೊಪ್ಪಳ, ಗಳೆಂಬ ನಾಲ್ಕು ಜಿಲ್ಲೆಗಳು ಮಾತ್ರ ಅಧ್ಯಯನದ ದೃಷ್ಟಿಯಿಂದ ನೋಡಲಾಗಿದೆ.

ಸುಮಾರು ಮೂರನೇ ಶತಮಾನದಲ್ಲಿ ಈ ಪ್ರದೇಶವು ಶಾತವಾಹನರ ಆಡಳಿತದಲ್ಲಿತ್ತು. ಕೆಲವು ಕಾಲದವರೆಗೆ ಮೌರ್ಯರು ಈ ಪ್ರದೇಶವನ್ನಾಳಿದರು. ಐದನೆ ಶತಮಾನದಲ್ಲಿ ಬನವಾಸಿಯ ಕದಂಬರು ಆಳಿದರು. ಸುಮಾರು ಕ್ರಿ.ಶ. ೭೫೩ ರಿಂದ ೯೭೩ ರವರೆಗೆ ರಾಷ್ಟ್ರಕೂಟರ ಮನೆತನದ ಆಳ್ವಿಕೆಯಲ್ಲಿತ್ತು. " ರಾಷ್ಟ್ರಕೂಟರ ಕಾಲದಲ್ಲಿ ಹೈದ್ರಾಬಾದ – ಕರ್ನಾಟಕ ಎರಡನೇ ಬಾರಿಗೆ ರಾಜಕೀಯ ಶಕ್ತಿಯ ಕೇಂದ್ರವಾಗಿ ತ್ತು. ಗುಲಬರ್ಗಾ ಜಿಲ್ಲೆಯ ಮಳಖೇಡದಿಂದ ಆಳಿದರು. ರಾಷ್ಟ್ರಕೂಟರ ಆನೆಗಳು ಗಂಗಾನದಿಯಲ್ಲಿ ಮಿಯುತ್ತಿದ್ದವೆಂಬ ಸಂಗತಿ ಕಡಿಮೆ ಅಗ್ಗಳಿಕೆಯುದಲ್ಲ. ರಾಷ್ಟ್ರಕೂಟರ ನೆಂಟಸ್ತಾನ (ಸಂಬಂಧ) ನೇಪಾಳ ದೊರೆಗಳ ಮನೆತನದೊಡನೆ ಆಗಿತ್ತು. ಅದಕ್ಕಾಗಿ ಅವರ ಕುದುರೆಗಳು ನೇಪಾಳದವರೆಗೆ ನಿರಾಂತಕ ಅಡೆತಡೆಗಳಿಲ್ಲದೆ ಹೋಗಿಬರುತ್ತಿದ್ದವು. ಎಂಬ ಸಂಗತಿ ಉಲ್ಲೇಖವಾಗಿದೆ. ರಾಷ್ಟ್ರಕೂಟರ ಕಾಲವೆಂದರೆ, ಎಲ್ಲ ದೃಷ್ಟಿಯಿಂದಲೂ ಸಮೃದ್ಧ ಕಾಲ".[೧] ಹೈದ್ರಾಬಾದ – ಕರ್ನಾಟಕ ಭಾಗದಲ್ಲಿ ಜನರು ಅಂದು ಶಾಂತಿ ಸಮೃದ್ಧಿಯಿಂದ ಜನ ಜೀವನ ನಡೆಸುತ್ತಿದ್ದರೆಂದು ತಿಳಿದು ಬರುತ್ತದೆ.

ಸುಮಾರು ಕ್ರಿ.ಶ.೯೭೩ ರಿಂದ ಕಲ್ಯಾಣ ಚಾಲುಕ್ಯರು ಈ ಪ್ರದೇಶವನ್ನು ಆಳಿದರು. ಕಲ್ಯಾಣ ರಾಜ್ಯ ಆದರ್ಶ ರಾಜ್ಯವೆಂದೇ ಪ್ರಸಿದ್ಧಿ ಪಡೆಸಿದ್ದರು. ಸುವ್ಯವಸ್ಥಿತವಾಗಿ ರಾಜ್ಯಭಾರವನ್ನಾಳಿದರು. ಕಲ್ಯಾಣ ಚಾಲುಕ್ಯರ ಆಳ್ವಿಕೆಯನಂತರ ಈ ಭಾಗವನ್ನು ಕೆಲಕಾಲ ಔರಂಗಜೇಬನು, ಕಾಕತೀಯರು ಆಳಿದರು. ಹಲವಾರು ರಾಜ್ಯ ಮನೆತನಗಳು ಆಳಿದ ಈ ಪ್ರದೇಶದ ಇತಿಹಾಸದ ಭವ್ಯ ಪರಂಪರೆ ಸಿಗುತ್ತದೆ.

ಭಾರತ ದೇಶದಲ್ಲಿ ವಿದೇಶಿಯರ ಆಕ್ರಮಣಗಳು ಪ್ರಾರಂಭವಾದಾಗ, ಹೈದ್ರಾಬಾದ – ಕರ್ನಾಟಕ ಭಾಗವಂತು ದಬ್ಬಾಳಿಕೆಯಲ್ಲಿಯೇ ಸವೆಯಿತು. ಬಹಮನಿ ಅರಸರು, ಅಧಿಲ್ ಶಾಹಿ ಅರಸರು, ಕುತುಬಶಾಹಿ ಅರಸರು, ಬರೀದ ಶಾಹಿ ಅರಸರು, ನಿಜಾಮ ಶಾಹಿ ಅರಸರು ಆಳಿದರು. " ಬ್ರಿಟಿಷರು ಭಾರತ ದೇಶವನ್ನು ಆಳುತ್ತಿದ್ದ ಸಮಯದಲ್ಲಿ ನಾಲ್ಕು ನೂರಕ್ಕೆ ಹೆಚ್ಚು ಸಂಸ್ಥಾನಗಳಲ್ಲಿ ಸ್ವದೇಶಿ ಆಳರಸರ ಆಡಳಿತವಿದ್ದಿತ್ತು. ಅಂತಹ ಆಡಳಿತದಲ್ಲಿ ನಿಜಾಂ ಶಾಹಿ ಆಡಳಿತವು ಒಂದು. "ನಿಜಾಂ ಎನ್ನುವುದು ಹೈದ್ರಾಬಾದಿನ ಮಹ್ಮದಿಯ ದೊರೆಗಳಿಗೆ ಇದ್ದ ಒಂದು ಬಿರುದು"[೨]. ಅವರ ಆಡಳಿತವು ಅಂದರೆ ಅಂದಿನ ಹೈದ್ರಾಬಾದ – ಕರ್ನಾಟಕ ವ್ಯಾಪ್ತಿಯೂ ಭಾರತ ಸ್ವಾತಂತ್ರ್ಯ ಪೂರ್ವದಲ್ಲಿ ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರಗಳೆಂಬ ಮೂರು ಜಿಲ್ಲೆಗಳನ್ನೊಳಗೊಂಡಿತ್ತು.

ಹೈದ್ರಾಬಾದ ನಿಜಾಮನು ಅಥವಾ ಅಸಫಶಾಹಿ ವಂಶದ ಸ್ಥಾಪನೆಯನ್ನು ಔರಂಗಜೇಬನ ನೆಚ್ಚಿನ ದಂಡನಾಯಕನಾಗಿ ಸೇವೆ ಸಲ್ಲಿಸುತ್ತಿದ್ದ. ನಿಜಾಂ ಉಲಮುಲ್ಕ ಅಸಫ್‌ಶಾಹಿ ೧೭೧೩ರಲ್ಲಿ ಸ್ಥಾಪಿಸಿದನೆಂದು ಹೇಳಲಾಗುತ್ತದೆ. ಅಸಫಶಾಹಿ, ಔರಂಗಜೇಬನು ನಿಧನವಾದ ತರುವಾಯ ದಖನ್ನಿನ ಸುಭೇದಾರನಾಗಿ ನೇಮಕಗೊಂಡ ಮೇಲೆ ದಕ್ಷಿಣ ಭಾಗದ ಆಡಳಿತದ ಹತೋಟಿಯಿಂದಾಗಿ ಹಲವು ಪರಿವರ್ತನೆಗಳು ಗೋಚರವಾದವು. ಈತನು ೧೭೯೯ರಲ್ಲಿ ಮಾಳ್ವದ ಸುಭೇದಾರನಾಗಿ ನೇಮಕ ಮಾಡಲಾಯಿತು. ನಿಜಾಂ ಉಲಮುಲ್ಕ ನನ್ನು ದೆಹಲಿಯಲ್ಲಿ ವಜೀರ ಆಗಿ ನೇಮಕ ಮಾಡಲಾಯಿತು. ಆತನಿಗೆ ಈ ಹುದ್ದೆಯಲ್ಲಿ ಆಸಕ್ತಿ ವಿಲ್ಲದ ಕಾರಣ ಅದಕ್ಕೆ ರಾಜೀನಾಮೆ ನೀಡಿ ಸ್ವತಂತ್ರವಾಗಿ ದಖನ್ನಿಗೆ ೧೭೨೪ ರಲ್ಲಿ ಮರಳಿ ಬಂದನು. ನಂತರ ಹೈದ್ರಾಬಾದವನ್ನು ತನ್ನ ವಶಕ್ಕೆ ತೆಗೆದುಕೊಂಡನು.

ಅಸಫಶಾಹನು ನಿಧನವಾದ ನಂತರ ಹೈದ್ರಾಬಾದಿನಲ್ಲಿ " ನಾಸಿರಜಂಗ " ಮತ್ತು ಆತನ ಅಕ್ಕನ ಮಗನಾದ ಮುನಾಫೀರಜಂಗ ಇಬ್ಬರ ನಡುವೆ ಸಿಂಹಾಸನಕ್ಕಾಗಿ ಕಲಹಗಳು ಉದ್ಭವಿಸಿದವು. ಈ ವೇಳೆಗಾಗಲೇ ದಕ್ಷಿಣ ಭಾರತದಲ್ಲಿ ತಮ್ಮ ವಸಾಹತುಗಳನ್ನು ಸ್ಥಾಪಿಸಿಕೊಂಡಿದ್ದ. ಫ್ರೆಂಚರು ಮತ್ತು ಬ್ರಿಟೀಷರು ಈ ಸಿಂಹಾಸನ ಕಲಹದಲ್ಲಿ ಪರ – ವಿರೋಧ ಪಕ್ಷಗಳು ವಹಿಸಿ ಪ್ರವೇಶ ಮಾಡಿದವು. ಫ್ರಾನ್ಸ ದೇಶವು ಮುಸಾಫೀರ ಜಂಗನಿಗೆ ಮತ್ತು ಬ್ರಿಟೀಷರು ನಾಸಿರ ಜಂಗನಿಗೆ ಬೆಂಬಲವಾಗಿ ನಿಂತರು. ಕೊನೆಗೆ ಬ್ರಿಟೀಷ ಸೈನ್ಯವು ಬೆಂಬಲ ನೀಡಿದ ಕಾರಣ ನಾಸಿರ ಜಂಗನು ೧೭೫೦ರಲ್ಲಿ ಹೈದ್ರಾಬಾದ ನಿಜಾಂ ಸ್ಥಾನವನ್ನು ಹೊಂದಿದ್ದನು. ಆದರೆ, ಮುಸಾಫೀರ ಜಂಗನು ತೆರವು ಮಾಡಿಸಲು ಮತ್ತೊಮ್ಮೆ ನಾಸಿರ ಜಂಗ ದಾಳಿ ಮಾಡಿದಾಗ, ನಾಸಿರ ಜಂಗನು ಭೀಕರ ಹೋರಾಟದಲ್ಲಿ ಯುದ್ಧ ಭೂಮಿಯಲ್ಲೇ ಮರಣ ಹೊಂದಿದನು. ಆದರಿಂದ ಮುನಾಫೀರ ಜಂಗನು ಹೈದ್ರಾಬಾದ ನಿಜಾಂ ನೆಂದು ಘೋಷಿಸಿಕೊಂಡನು. ನಾಸಿರ ಜಂಗನು ೧೭೫೧ರಲ್ಲಿ ನಿಧನವಾದ ನಂತರ ಅವರ ತಮ್ಮನಾದ ಸಬಲತ್ ಜಂಗನು ಬ್ರಿಟೀಷರೊಡನೆ ತಕ್ಷಣ ಸಂಧಾನ ಮಾಡಿದನು. ಇದೆ ಮುಂದೆ ಕ್ರಮೇಣವಾಗಿ ಇಂಗ್ಲೀಷರ ಪ್ರಭಾವವು ಹೈದ್ರಾಬಾದ ಸಂಸ್ಥಾನಗಳ ಮೇಲೆ ಉಂಟಾಗಲಿಕ್ಕೆ ಕಾರಣವಾಯಿತು.

ನಿಜಾಮನು ೧೭೬೬ ರಲ್ಲಿ ಬ್ರಿಟೀಷರಿಗೆ ಸೈನಿಕರ ನೆರವನ್ನು ಯಾವ ಸಮಯದಲ್ಲಾದರೂ, ಬದಲಾಗಿಸುವುದಾಗಿ ಒಪ್ಪಂದಕ್ಕೆ ಸಹಿ ಹಾಕಿದನು. ಮುಂದೆ ಹೈದ್ರಾಬಾದ ನಿಜಾಮನ ಸಂಸ್ಥಾನವು ಬ್ರಿಟೀಷರ ಅವಧಿಯಲ್ಲಿ ಮುಂದುವರೆಯುವಂತಾಯ್ತು. ೧೮೦೨ ರಲ್ಲಿ ನಿಜಾಮ ಸಬಲತ್ ಜಂಗನು

ನಿಧನನಾಗಲು ಅವನ ಮಗನಾದ ''ಸಿಕಂದರ ಶಾಹ ನಿಜಾಮ ''ನು ಪಟ್ಟಕ್ಕೆ ಬಂದನು. ಕೆಲವು ಕಾಲ ಆಳಿ ಮುಂದೆ ೧೮೨೯ ರಲ್ಲಿ ಇತನು ನಿಧನವಾದನು. ಇತನ ಮಗನಾದ '' ನಾಸಿರ ಉದದೌಲನು '' ನಿಜಾಮನ ಪಟ್ಟಕ್ಕೆ ಬಂದನು. ಇದೇ ಸಮಯದಲ್ಲಿ ನಿಜಾಮನು ಬ್ರಿಟೀಷರೊಡನೆ ನಿರಂತರ ಮೈತ್ರಿಯನ್ನು ಕಾಪಾಡಿಕೊಳ್ಳುವ ಹೊಸ ಕರಾರಿಗೆ ಸಹಿ ಮಾಡಿದನು. ಇದಕ್ಕೆ ಪ್ರತಿಯಾಗಿ ತಮ್ಮದೆ ಸೈನಿಕ ತುಕಡಿಯನ್ನು ನಿಜಾಮನ ನೆರವಿಗೆ ನೆಲೆಗೊಳಿಸಿದನು. ನಂತರ ಇತನು ೧೮೫೭ ರಲ್ಲಿ ನಿಧನವಾದನು. ಇವನ ಉತ್ತರಾಧಿಕಾರಿಯಾಗಿ '' ಅವರಸ್ ಉದದ್ೌಲನು '' ನೇಮಗೊಂಡು ಬ್ರಿಟೀಷರೊಡನೆ ಆತ್ಮೀಯ ಬಾಂಧವ್ಯವನ್ನು ಮುಂದುವರೆಸಿದನು. ಇವನು ೧೮೬೯ ರಲ್ಲಿ ನಿಧನವಾದನು. ನಿಜಾಮರ ಆಳ್ವಿಕೆಯಲ್ಲಿಯೇ ಈ ಪ್ರದೇಶ ಮುಂದುವರೆಸಿಕೊಂಡು ಬರುತ್ತಿದ್ದರು.

ನಂತರ '' ವೀರ ಮಹೇಬುಬ ಅಲಿಖಾನ'' ನಿಜಾಮನಾದನು. ಇವನು ಕೆಲಕಾಲ ಅಳಿ ೧೯೧೧ ರಲ್ಲಿ ಮರಣ ಹೊಂದಿದನು. ಇವನ ನಂತರ ಮಗ '' ವೀರ ಉಸ್ಮಾನ ಅಲಿಖಾನ '' ನಿಜಾಮನಾಗಿ ನೇಮಕಗೊಂಡನು. ಇವನು ೧೯೧೫ರಲ್ಲಿ ರಾಜಿನಾಮೆ ಕೊಟ್ಟನು. ಪ್ರಥಮ ಮಹಾಯುದ್ದದಲ್ಲಿ ಬ್ರಿಟೀಷರಿಗೆ ಆರ್ಥಿಕ ನೆರವು ನೀಡಿದರು. ಈ ಯುದ್ದದಲ್ಲಿ ಹೈದ್ರಾಬಾದ ಸಂಸ್ಥಾನದ ಆಡಳಿತ ಸಿಬ್ಬಂಧಿಯನ್ನು ಪೂರ್ಣವಧಿ ಭಾರತೀಯರಾಗಿ ಮಾಡಲಾಗಿತ್ತು. ನಂತರ ಭಾರತ ಸ್ವಾತಂತ್ರ್ಯ ಸಂಗ್ರಾಮದ ಪ್ರಭಾವ ಹೈದ್ರಾಬಾದ ಸಂಸ್ಥಾನದಾದ್ಯಂತ ವ್ಯಾಪಕವಾಗಿ ಹರಡಿತ್ತು. ಆಗ ನಿಜಾಮರು ಬ್ರಿಟೀಷರ ಬೆಂಬಲಿಗರಾದರು.

## ೨. ವಿಮೋಚನಾ ಚಳುವಳಿ

ಭಾರತ ದೇಶವು ಹಲವಾರು ಶತಮಾನಗಳ ಕಾಲ ಪರಕೀಯರ ಆಡಳಿತಕ್ಕೆ ದಾಸ್ಯವಾಗಿತ್ತು. ಭಾರತದ ವೀರಚೇತನಗಳ ಧೀರೊದಾತ್ತ ಹೋರಾಟ, ತ್ಯಾಗ ಬಲಿದಾನಗಳ ಮೂಲಕ ೧೫ನೇ ಆಗಸ್ಟ ೧೯೪೭ ರಂದು ದಾಸ್ಯದ ಸಂಕೋಲೆಯನ್ನು ಕಳಚಿಕೊಂಡು ಸ್ವಾತಂತ್ರ್ಯವಾಯಿತು. ಅದರೂ ನಿಜಾಮರು ನಾವು ಸ್ವತಂತ್ರ ವೀರರೆಂದು ಹೇಳಿಕೊಂಡು ಹೈದ್ರಾಬಾದ – ಕರ್ನಾಟಕದ ಭಾಗವು ಭಾರತದ ಗಣರಾಜ್ಯದಲ್ಲಿ ವಿಲೀನಗೊಳಿಸಲು ಬಿಡಲಿಲ್ಲ. ಈ ಭಾಗದ ಜನರು ಪೂರ್ವ ಹಾಗೂ ನಂತರದ ದಿನಗಳು ಅತ್ಯಂತ ಕ್ರೂರಮಯ ಹಗಲು ರಾತ್ರಿಗಳನ್ನು ಅನುಭವಿಸಿದರು. ''ದೇವರು ವರ ಕೊಟ್ಟರು ಪೂಜಾರಿವರ ಕೊಡಲಿಲ್ಲ''. ಎನ್ನುವಂತೆ ಈ ಭಾಗದ ಜನರಿಗಾಯ್ತು ಆಗಷ್ಟ ೧೫ರ ಮಧ್ಯರಾತ್ರಿ ಬ್ರಿಟೀಷರು ದೇಶಬಿಡುವಾಗ ನಮ್ಮಲ್ಲಿ ಒಳ ಜಗಳ ಹಚ್ಚಿಯೇ ಹೋದರೂ ಎಂಬ ಕಲ್ಪನೆ ಬರುತ್ತದೆ. ಕೊನೆಯ ನಿಜಾಮ

ತನ್ನ ಪಣವನ್ನು ಬಿಡಲಿಲ್ಲ. ಇದರಿಂದ ಬೆಸತ್ತ ಜನ ಇವನ ಅಧಿನಕ್ಕೆ ಒಪ್ಪದೆ ಸ್ವಾತಂತ್ರ್ಯದ ಕಹಳೆ ಊದಿದರು. ''ಕಾಶಿಂ ರಜವಿ ನೇತ್ರತ್ವದಲ್ಲಿ ರಜಾಕರರ '' ಪಡೆ ಮತ್ತು ಚಳುವಳಿಗಾರರ ನಡುವೆ ಸಂಘರ್ಷ ಜೋರಾಗಿಯೇ ನಡೆಯಿತು. ೧೯೪೭ ರ ಆಗಷ್ಟ ೧೫ ರಿಂದ ೧೯೪೮ ಸೆಪ್ಟೆಂಬರ ೧೭ರ ವರೆಗೆ ರಜಾಕರು ಈ ಭಾಗದ ವಿಮೋಚನಾ ಚಳುವಳಿಗಾರರನ್ನು ಬಗ್ಗು ಬಡಿಯಲು ಶತ ಪ್ರಯತ್ನ ಮಾಡಿದರು, ಸಿಕ್ಕವರನ್ನು ಅಮಾನುಷವಾಗಿ ಕೊಂದರು ಮುಗ್ಧ ಜನರ ಮಾನಹಾನಿ ಮಾಡಿದರು. ಆಸ್ತಿ – ಪಾಸ್ತಿ ಗಳನ್ನು ಲೂಟಿ ಮಾಡಿದರು. ನಿಜಾಮನ ದಬ್ಬಾಳಿಕೆ ವಿರುದ್ಧ ಹೋರಾಟ ಆರಂಭವಾಯಿತು. ಹೋರಾಟ ಚಳುವಳಿ ದಿನ ಕಳೆದಂತೆ ತಾರಕ್ಕೇರಿತು. ಈ ಭಾಗದ ಇತಿಹಾಸದಲ್ಲೆ ಅದೊಂದು ದುರಂತ ಅಧ್ಯಾಯವಾಗುಳಿಯಿತು.

''ಹೈದ್ರಾಬಾದ – ಕರ್ನಾಟಕ ಪ್ರದೇಶದಲ್ಲಿ ಜೀವನದ ಪ್ರತಿಯೊಂದು ಕ್ಷೇತ್ರದಲ್ಲಿಯಾ ಹಿಂದೂ ಮತ್ತು ಮುಸ್ಲಿಮರ ಒಡನಾಟ ಕಂಡು ಬಂದಿದೆ''.[೨] ಹೈದ್ರಾಬಾದ ಸಂಸ್ಥಾನದಲ್ಲಿ ನಡೆದ ಚಳುವಳಿ, ಹಳ್ಳಿ ಪಟ್ಟಣಗಳಲ್ಲಿರುವ ಜಮಿನುದಾರಿ ಜಹಗೀರದಾರಿ ಪದ್ಧತಿಯ ವಿರುದ್ಧವೂ ಆಗಿತ್ತು. ದಲಿತ ಕೆಳವರ್ಗದ ಆರ್ಥಿಕದಿಂದ ಹಿಂದುಳಿದ ಭೂಮಾಲಿಕರ ವಿರುದ್ಧವು ಬಂಡೆಳಲು ಪ್ರಾರಂಭಿಸಿದರು. ಜನರಿಗೆ ಮೆರವಣಿಗೆ ತೆಗೆಯುವ, ಹಬ್ಬ ಹರಿದಿನಗಳ ಆಚರಿಸುವ ಸಾಂಸ್ಕೃತಿಕ ಕಾರ್ಯಕ್ರಮ ಭಜನೆ ಮೇಳಗಳ ಕಾರ್ಯಕ್ರಮ ಇಟ್ಟುಕೊಳ್ಳುವುದಕ್ಕೂ ನಿಜಾಮಸರಕಾರದ ಪರವಾನಿಗೆ ಪಡೆಯಬೇಕಾಗಿತ್ತು. ಮೇಲ್ಜಾತಿಯ ವರ್ಗದ ಚಟುವಟಿಕೆಗಳಿಗೆ ನಿಜಾಮ ಕಡಿವಾಣ ಹಾಕಿದರು. ಈ ಭಾಗದ ಜನ ಇವರ ಆಡಳಿತಕ್ಕೆ ತಲ್ಲಣಿಸಿ ಹೋಗಿದ್ದರು. ಈ ಅರಸನ ಆಳ್ವಿಕೆ ಕ್ರೂರಮಯ ಹಾಗೂ ನಿರಂಕುಶ ಪ್ರಭುತ್ವದಿಂದ ಕೂಡಿತ್ತು.

ನಿಜಾಂ ಸರಕಾರ ವಿಶ್ವಸಂಸ್ಥೆಯ ಮಾನ್ಯತೆ ಪಡೆಯಲು ಯತ್ನಿಸುತ್ತಿದೆ ಎಂಬ ವಿಷಯ ಬಹಿರಂಗಗೊಳ್ಳುತ್ತಲೇ ಆಗಿನ ಗೃಹ ಮಂತ್ರಿಗಳಾಗಿದ್ದ ''ಸರದಾರ ವಲ್ಲಭಭಾಯಿ ಪಟೇಲ '' ಸೆಪ್ಟೆಂಬರ ಹತ್ತರಂದು ''ಪೋಲಿಸ್ ಆ್ಯಕ್ಷನ'' ಹೆಸರಿನಲ್ಲಿ ಸೇನಾ ಕಾರ್ಯಚರಣೆಯ ನಿರ್ಧಾರ ಕೈಗೊಂಡರು. ಜನರಲ್ ಜೆ. ಎಸ. ಚೌಧರಿ, ನೇತ್ರತ್ವದಲ್ಲಿ ಭಾರತೀಯ ಸೇನೆ ಆಂಧ್ರದ ಚಾಂದ ಮಹಾರಾಷ್ಟ್ರದ ಸೋಲಾಪೂರ ಬೇಜವಾಡ, ಕರ್ನಾಟಕದ ಹೊಸಪೇಟೆ, ಹೀಗೆ ನಾಲ್ಕು ನಿಟ್ಟಿನಲ್ಲಿ ಹೈದ್ರಾಬಾದ ಪ್ರಾಂತ್ಯವನ್ನು ಸುತ್ತುವರಿಯಿತು. ಸೋತ ನಿಜಾಮ ಶರಣಾಗತಿಯನ್ನು ಘೋಷಿಸಿದ ಇಡೀ ಹೈದ್ರಾಬಾದ – ಸಂಸ್ಥಾನ ಸೇನೆಯ ವಶವಾಯಿತು. ಸೆಪ್ಟೆಂಬರ ೧೯೪೮ ರಂದು ಭಾರತದ ಒಕ್ಕೂಟದಲ್ಲಿ ವಿಧಿವತ್ತಾಗಿ ವಿಲೀನಗೊಂಡಿತು.

ಹೈದ್ರಾಬಾದ – ಚಳುವಳಿಯಲ್ಲಿ ಪ್ರಮುಖವಾಗಿ ಅನೇಕ ವೀರರೂ ಸಂಘ ಸಂಸ್ಥೆಗಳು ಸಕ್ರಿಯವಾಗಿ ಭಾಗವಹಿಸಿ ಮುಕ್ತಗೊಳಿಸಿದರು. ರಜಾಕಾರರ ಹೊಡೆತ ಬಹುಪಾಲುಭಾಗ ಬೀದರ ಜಿಲ್ಲೆಯಲ್ಲಿ ಪರಿಮಿಸಿತ್ತು. ಬೀದರ ಜಿಲ್ಲೆಯಲ್ಲಿ ಹೋರಾಟಗಾರೆಂದರೆ, ಶ್ರೀ ಮಾಣಿಕರಾವ ಫುಲೆಕರ ಬಸವಂತರಾವ ಶಟಕಾರ, ಬ್ರೀಜ್‌ಪಾಲಸಿಂಗ ಠಾಕೂರ, ರಂಗನಾಥರಾವ ಶ್ರೀನಿವಾಸ ಎಖ್ಖೆಳಿಕರ, ಶ್ರೀನಿವಾಸ ಹವಾಲ್ದಾರ ಕೆ. ಎಸ. ರಾಜ ಮಾಸ್ತರ ಮಹಾಂತಪ್ಪ ಮಡಕೆ, ಬಸವರಾಜ ಹುಡಗೆ, ಭೀಮಣ್ಣ ಮಜಗೆ, ರಾಮಣ್ಣಾ ಕ್ಯಾಸಾ, ವೀರಭದ್ರಪ್ಪಾ ಕವಲಾಸ, ವಿಶ್ವನಾಥ ತಡಪಳ್ಳಿಕರ, ಮುರಳಿಧರ ಕಾಮತಿಕರ, ನಾನಾರಾವ ಕಮತಕರ, ಭೀಮಣ್ಣಾ ಖಂಡ್ರೆ, ಪ್ರಭುರಾವ ಕಂಬಳಿವಾಳೆ, ಹೀಗೆ ಮುಂತಾದ ಮಹನೀಯರು ಪಾಲ್ಗೊಂಡು ಹೋರಾಟವನ್ನು ಎದುರಿಸಿದರು. ಆರ್. ಬಿ. ಬಿಡಪ್ಪ ಶ್ರೀ ಸಂಗ್ರಾಮಪ್ಪ ಶಟಕಾರ ಉದಗೀರ ಇವರು ಪಾಲ್ಗೊಂಡಿದ್ದರು. ಇದೇ ಸಂದರ್ಭದಲ್ಲಿ ಹಲವಾರು ಹೋರಾಟಗಾರು ಸಾವನ್ನಪ್ಪಿದ್ದು ಸ್ಮರಿಸಬಹುದು.

ಇವರಿಗೆ ಮುಖ್ಯವಾಗಿ ದಾರಿದೀಪವಾದವರೆಂದರೆ "ರಮಾನಂದ ತೀರ್ಥರು ". ಇವರು ಹೈದ್ರಾಬಾದ ಚಳುವಳಿಯ ಸ್ವಾತಂತ್ರ್ಯ ಶಿಲ್ಪಿ ಎಂದೆ ಪ್ರಖ್ಯಾತಿ ಪಡೆದಿದ್ದಾರೆ. ಇವರು ಗುಲಬರ್ಗಾ ಜಿಲ್ಲೆಯವರು ಇವರು ಹಿಂದೆ ಅನೇಕ ಹೋರಾಟಗಾರರಾದ ಜಗನ್ನಾಥರಾವ ಚಂಡ್ರಕಿ, ಕಪಟರಾಳ ಕೃಷ್ಣರಾವ, ಬಿ ಅಶ್ವತ್ಥನಾರಾಯಣ, ಉಮೆದಾರ, ಹನುಮಾನ ಗೌಡ, ಸರ್ದಾರ ಶರಣ ಗೌಡ, ಅಣ್ಣರಾವ ಗಣಮುಖಿ ನಾರಾಯಣರಾವ ನಿಹಾಳ, ತಾತಯ್ಯ ಡಾ. ಕಂಠಿ ಡಿ. ಬಿ. ಕಣ್ಮುಣಿಕರ ಜಯಚಾರ್ಯ ಪುರಾಣಿಕ, ಹಣಮಂತರಾವ ಕಕ್ಕೆರಿ ಗುರು ಭೀಮರಾವ, ಚಂದ್ರಶೇಖರ ಪಾಟೀಲ ಮಹಾಗಾಂವ, ಮುಂತಾದವರು ನಿಜಾಮ ವಿರುದ್ಧ ಸಮರ ಸಾರಿದರು. ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳಲ್ಲಿಯ ಪಂಡಿತಾರಾನಾಥರು. ಕೊಪ್ಪಳ ಜಯರಾಮಚಾರ್ಯರು ಪ್ರಮುಖವಾಗಿ ಭಾಗವಹಿಸಿದರು. ಪುಟ್ಟ ಭಟ್ಟ ಜಹಗೀರದಾರ, ಚಕ್ರಪಾಣಿ, ಕೋಟ್ರಪ್ಪ ಸ್ವಾಮಿ, ಹರ್ಡೆಕರ ಮಂಜಪ್ಪ.......... ಮುಂತಾದವರು ಭಾಗವಹಿಸಿದರು.

ಹೈದ್ರಾಬಾದ ಕರ್ನಾಟಕ ವ್ಯಾಪ್ತಿಯು ನಿಜಾಮರ ಗುಲಾಮಗಿರಿಯಲ್ಲಿ ಸಿಕ್ಕಿ " ಜನರು ಕಷ್ಟ – ನಷ್ಟಗಳಿಗೆ ಸ್ಪಂಧಿಸಿ ಹೋರಾಡಿ ಕೊನೆಗೆ ಮುಕ್ತಿ ಹೊಂದಿದ್ದೆ ಒಂದು ಬಹುತೇಕ ಸಮಸ್ಯೆಯನ್ನು ಪಾರುಮಾಡಿ ದಂತಾಯಿತ್ತು. " ೧೯೫೬ ರ ವರೆಗೆ ಹೈದ್ರಾಬಾದ ಸಂಸ್ಥಾನದಲ್ಲಿ ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರದ ಭಾಗಗಳು ಹಾಗೆಯೇ ಉಳಿದುಕೊಂಡಿದ್ದವು. ಭಾಷಾವಾರು ಪ್ರಾಂತ್ಯ ರಚನೆಗಾಗಿ

ಹೈದ್ರಾಬಾದಿನಲ್ಲಿ ಪೊಟ್ಟಿ ರಾಮಲು, ಅಮರಣ ಉಪವಾಸ ಮಾಡಿ ತೀರಿಕೊಂಡಿದ್ದರ, ಪರಿಣಾಮವಾಗಿ ಸರ್ಕಾರ ಮಣಿಯಿತು, ಭಾಷಾವಾರು ಪ್ರಾಂತಗಳ ರಚನೆ ಮಾಡಿತು. ನವೆಂಬರ ೧ ೧೯೫೬ ರ ದಿವಸ ಹಳೇ ಮೈಸೂರಿನ ಭಾಗ ಮುಂಬಯಿ ಕರ್ನಾಟಕ ಭಾಗ, ಗುಲಬರ್ಗಾ, ಬೀದರ, ರಾಯಚೂರು, ಜಿಲ್ಲೆಗಳಿಂದ ಕೂಡಿದ ಹೈದ್ರಾಬಾದ ಕರ್ನಾಟಕ ಭಾಗಗಳನ್ನು ಸೇರಿಸಿ ವಿಶಾಲ ಮೈಸೂರು ರಾಜ್ಯವನ್ನು ಮಾಡಿತು. ಈ ವಿಶಾಲ ಮೈಸೂರು ರಾಜ್ಯದ ಹೆಸರನ್ನು ಡಿ. ದೇವರಾಜ ಅರಸರು ಮುಖ್ಯಮಂತ್ರಿಯಾಗಿದ್ದ ಕಾಲಕ್ಕೆ ೧೯೭೨ ರಲ್ಲಿ ಕರ್ನಾಟಕ ರಾಜ್ಯವೆಂದು ಹೊಸ ನಾಮಕರಣ ಮಾಡಿದರು.''[೪] ಮೊದಲು ಬೀದರ ಗುಲಬರ್ಗಾ ಹಾಗೂ ರಾಯಚೂರು ಜಿಲ್ಲೆಗಳು ಹೈದ್ರಾಬಾದ ಸಂಸ್ಥಾನದಲ್ಲಿ ಸೇರಿದ್ದರಿಂದ ಈಗಲೂ ಈ ಪ್ರದೇಶಕ್ಕೆ ಹೈದ್ರಾಬಾದ ಕರ್ನಾಟಕ ವೆಂದು ಕರೆಯುತ್ತಾರೆ. ಈ ಭಾಗದಲ್ಲಿಯೇ ಅಲ್ಲದೆ ಇಡಿ ರಾಜ್ಯದಲ್ಲಿಯೇ '' ಹೈದಾಬಾದ – ಕರ್ನಾಟಕ ಶಿಕ್ಷಣ ಸಂಸ್ಥೆಯೇ''ಇದಕ್ಕೆ ಸಾಕ್ಷಿಯಾಗಿದೆ.

೩. ಧಾರ್ಮಿಕ ಚರಿತ್ರೆ

ಒಂದು ನಾಡಿನ ಐತಿಹಾಸಿಕವಾಗಿ ಧಾರ್ಮಿಕ ಚರಿತ್ರೆಯನ್ನು ನೋಡುವುದು ವೈಶಿಷ್ಟ್ಯಪೂರ್ಣವಾಗಿದೆ. ಹೈದ್ರಾಬಾದ – ಕರ್ನಾಟಕ ಪ್ರದೇಶಗಳನ್ನಾಳಿದ ಶಾತವಾಹನರ ಆಡಳಿತದ ಕಾಲದಲ್ಲಿ ಬೌದ್ಧ ಧರ್ಮ ಬೆಳವಣಿಗೆಯಲ್ಲಿತ್ತು. ಗುಲಬರ್ಗಾ ಜಿಲ್ಲೆಯ ಸನ್ನತಿ ಹಾಗೂ ಅಶೋಕನ ಮಸ್ಕಿ ಶಾಸನಗಳಲ್ಲಿ ಬೌದ್ಧ ಧರ್ಮ ಪ್ರಚಾರದಲ್ಲಿರುವುದು ಕಂಡು ಬರುತ್ತದೆ. ಮುಂದೆ ರಾಷ್ಟ್ರಕೂಟ ದೊರೆಗಳ ಆಡಳಿತದಲ್ಲಿ ಜೈನ ಧರ್ಮ ಪ್ರಚಾರ ಹೆಚ್ಚಾಗತೊಡಗಿತ್ತು. ''ರಾಷ್ಟ್ರಕೂಟ ದೊರೆಗಳು ಜೈನರಾದರಿಂದ ಆಗ ಈ ಧರ್ಮ, ಸುತ್ತೆಲ್ಲ ಪ್ರಚಾರವಾಯಿತು. ಗುಲಬರ್ಗಾ ಜಿಲ್ಲೆಯ ಸೇಡಂ, ಭಂಕೂರು, ಹುಣಸಿಗಿ, ಹಡಗಲಿಗಳಲ್ಲಿ ಜೈನ ಬಸದಿಗಳು, ವಿಗ್ರಹಗಳು ಸಾಕಷ್ಟು ಸಿಗುವವು, ಕಳಚೂರಿ ಮನೆತನವನ್ನು ಕಲ್ಯಾಣದಲ್ಲಿ ಆರಂಭಿಸಿದ ಬಿಜ್ಜಳರಾಜನು ಜೈನ ಧರ್ಮದ ಪೋಷಕನಾಗಿದ್ದನು''.[೫] ಕೊಪ್ಪಳ (ಕೊಪ್ಪಣ) ಶಾಸನದಿಂದ ಜೈನ ಧರ್ಮದ ಪ್ರಸಾರತೆಯನ್ನು ಎತ್ತಿ ಹೇಳುತ್ತದೆ.

'' ಸ್ವಸ್ತಿಶ್ರೀ ವಿಕ್ರಮಾದಿತ್ಯನ ಪ್ರಥಮ ರಾಜ್ಯದಂದು ಶ್ರೀ ಸಿಂಹಣನ್ದಿ ತಮ್ಮಡಿಗಳ ಇಂಗಿನಿ ಮರಣಂ ..... ಮಹೋನ್ನತ ಧರ್ಮಕಾರ್ಯನಿಂ. ವಸುಮತಿಯೋಳ್ ಕಲ್ಯಾಣ ಕೀರ್ತಿ ಮುನಿಪರ ನೆಗಳ್ದರ್''[೬] ಕ್ರಿ.ಶ.ಸು.೧೦೦೮ರಲ್ಲಿ ವಿಕ್ರಮಾದಿತ್ಯನ ಕಾಲದಲ್ಲಿ ಜೈನ ಧರ್ಮದ ಮೇಲೆ ಶಾಸನಗಳ ಬೆಳಕು ಚೆಲ್ಲುತ್ತವೆ.

ಬೀದರ ನಗರದ ಶಾಹಗಂಜನಲ್ಲಿ ಭವ್ಯವಾದ ಜೈನ ಮಂದಿರವೊಂದು ದೊರೆಯುತ್ತದೆ. ಇದು ಪ್ರಾಚೀನತೆಯ ಇತಿಹಾಸವನ್ನು ಹೊತ್ತುನಿಂತಿದೆ. ಜೈನ ಮತಾವಲಂಭಿಗಳಾದ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲಚುರಿಯರು ಈ ಭಾಗವನ್ನು ಆಳಿದ್ದರಿಂದ ಕೊಪ್ಪಳದಲ್ಲಿ ಸಿಗುವ ಅವಶೇಷಗಳ, ಉಲ್ಲೇಖಗಳಿಂದ, ಶಾಸನಗಳಿಂದ, ರಾಯಚೂರು ನಾಡಿನಲ್ಲಿಯೂ ಜೈನ ಧರ್ಮ ಹೆಚ್ಚಿನ ಪ್ರಚಾರದಲ್ಲಿತ್ತೆಂಬುದು ಮನವರಿಕೆಯಾಗುತ್ತದೆ. " ಕವಿರಾಜ ಮಾರ್ಗ" ಜೈನ ಧರ್ಮದ ಸಾಹಿತ್ಯ ಕೃತಿ ಎಂಬ ಹೆಗ್ಗಳಿಕೆ ಹೊಂದಿದೆ. ಇದು ಹುಟ್ಟಿದು ಗುಲಬರ್ಗಾ ಜಿಲ್ಲೆಯ ಮಳಖೇಡದಲ್ಲಿ ಎಂಬುದು ಎಲ್ಲರು ಒಪ್ಪಬೇಕಾಗುತ್ತದೆ. ಮಳಖೇಡದ ನೃಪತುಂಗ ದೊರೆಯ ಆಡಳಿತದಲ್ಲಿದ್ದ "ಶ್ರೀ ವಿಜಯ " ನೆಂಬ ಲೇಖಕನು ರಾಜನ ಅಭಿಮತದ ಆಜ್ಞೆಯ ಮೆರೆಗೆ ಕವಿರಾಜ ಮಾರ್ಗ ಎಂಬ ಲಕ್ಷಣ ಗ್ರಂಥವನ್ನು ಬರೆದನೆಂದು ತಿಳಿದು ಬರುತ್ತದೆ.

ಹೈದ್ರಾಬಾದ – ಕರ್ನಾಟಕ ವ್ಯಾಪ್ತಿಯಲ್ಲಿ ವೈದಿಕ ಧರ್ಮ ಇತ್ತೆಂದು ತಿಳಿದು ಬರುತ್ತದೆ. ಚಿತ್ತಾಪುರ ತಾಲ್ಲೂಕಿನ ನಾಗಾವಿ ವೈದಿಕ ಧರ್ಮದ ಪ್ರಮುಖ ಪೀಠವಾಗಿತ್ತೆಂದು ಅಭಿಮತ. ಕಾಕತೀಯರ ಆಡಳಿತದಲ್ಲಿ ಶೈವ ಧರ್ಮ ಪ್ರಚಾರವಿತ್ತು. ಕಲ್ಯಾಣ ಚಾಲುಕ್ಯರು ಶೈವ ಧರ್ಮಕ್ಕೆ ಪ್ರೋತ್ಸಾಹ ನೀಡಿದರೆಂದು ತಿಳಿದು ಬರುತ್ತದೆ. (ವೀರಶೈವ ಧರ್ಮದ) ಕಲ್ಯಾಣದಲ್ಲಿ ಬಿಜ್ಜಳ ದೊ.ರೆ ಆಸ್ತಾನದಲ್ಲಿರುವ ಶ್ರೀ ಶರಣ ಬಸವಣ್ಣ ನವರ ನೇತೃತ್ವದಲ್ಲಿ ಪ್ರಸಾರ ಹಾಗೂ ಪ್ರಗತಿಯನ್ನು ಹೊಂದಿತ್ತು. ದೇಶದ ನಾನಾ ಕಡೆಗಳಿಂದ ಬಂದ ಶರಣ – ಶರಣೆಯರ ಅಂದೋಲನದಲ್ಲಿ ಪಾಲ್ಗೊಂಡು ಧಾರ್ಮಿಕ ಕ್ರಾಂತಿಯ ಕಿಡಿಕಾರಿದರು. ಗುಲಬರ್ಗಾ ಜಿಲ್ಲೆಯಲ್ಲಿ ಅನೇಕ ಶಿವ – ಶರಣರು ಜನ್ಮ ತಾಳಿದ ಭೂಮಿಯಾಗಿದೆ. ಸುರಪೂರ ತಾಲ್ಲೂಕಿನ ಮುದನೂರಿನ ದೇವರ ದಾಸಿಮಯ್ಯ ಒಬ್ಬನು. ಅವನು ಅನೇಕ ವಚನಗಳನ್ನು ರಚಿಸಿ, ಧಾರ್ಮಿಕ ಸೇವೆಗೈದಿದ್ದಾರೆ. ಆಳಂದ ಗ್ರಾಮದ ಏಕಾಂತ ರಾಮಯ್ಯ ಧರ್ಮದ ಕೊಡುಗೆಗೆ ಅಪಾರ ಸೇವೆ ಸಲ್ಲಿಸಿದ್ದರು. ಜೇವರ್ಗಿಯ ಷಣ್ಮುಖ ಶಿವಯೋಗಿ ಸ್ವಾಮಿಗಳು ಅಖಂಡೇಶ್ವರ ಎಂಬ ಅಂಕಿತ ನಾಮದಿಂದ ಪ್ರಖ್ಯಾತಿ ಪಡೆದು ವೀರಶೈವ ಧರ್ಮದ ಪ್ರಗತಿಯ ಹಾದಿಯನ್ನು ಹಾಕಿಕೊಟ್ಟರು. ಜೇವರ್ಗಿ ತಾಲೂಕಿನಲ್ಲಿಯೇ ಇರುವ ಅರಳ ಗುಂಡಿಗೆಯ ಶರಣ ಶ್ರೀ ಬಸವೇಶ್ವರರು ದಾಸೋಹ ಮೂರ್ತಿಗಳಾಗಿ, ವೀರಶೈವ ಧರ್ಮವನ್ನು ಬೆಳೆಸಿದರು. ಅನೇಕ ಶರಣರ ವಚನಗಳನ್ನು ರಚಿಸಿ, ಕೃತಿಗಳ ಮೂಲಕ ಧರ್ಮವನ್ನು ಉನ್ನತ ಮಟ್ಟಕ್ಕೆರಿಸಿದರು.

ಈ ಭಾಗವು ಧಾರ್ಮಿಕ ದೃಷ್ಟಿಯಿಂದ ತುಂಬ ವಿಶಿಷ್ಟ ಪೂರ್ಣವಾಗಿದೆ. ಮುಂದೆ ಹದಿನಾರನೇ ಶತಮಾನದಲ್ಲಿ ಉಕ್ಕಿಬಂದ ದಾಸರು ತಮ್ಮ ತಮ್ಮ ಸಾಹಿತ್ಯ ಮುಖಾಂತರ ಧರ್ಮದ ಜಾಗೃತಿಯನ್ನು ಮಾಡಿ

ಬೆಳೆಸಿದರು. ಬ್ರಾಹ್ಮಣ, ಮುಸ್ಲಿಂ, ಸಿಖರು, ಆರ್ಯ ಸಮಾಜದವರಿಗೂ, ಹಾಗೂ ಹಲವಾರು ಧರ್ಮಿಯರಿಗೂ ಈ ಭಾಗದಲ್ಲಿ ಬೆಳೆದು ಬಾಳಿದ್ದಾರೆ. ಬಸವ ಕಲ್ಯಾಣದಲ್ಲಿ ವೀರಶೈವ ಧರ್ಮದ ಕ್ರಾಂತಿಯ ಕುರುಹುವಾಗಿತ್ತೆಂಬುದು ಯಾರು ಅಲ್ಲಗಳೆಯುವಂತಿಲ್ಲ. ವೀರಶೈವರೇ ಹೆಚ್ಚಾಗಿ ಈ ಭಾಗದಲ್ಲಿ ದೊರೆಯುತ್ತಾರೆ, ಈ ಭಾಗವು ಒಂದು ಆಧ್ಯಾತ್ಮಿಕ ಚಿಂತನೆಯ ಕೇಂದ್ರವಾಗಿತ್ತು. ಸಾಧು ಸತ್ಪುರುಷರು ಮಹಾನಯೋಗಿ ಪುಂಗದವರು, ದೇವಸ್ವರೂಪ ಪುಳ್ಳವರು ಈ ಭಾಗದಲ್ಲಿ ಜನಿಸಿರುವುದಕ್ಕೆ ಪುಣ್ಯವಾಗಿರುತ್ತದೆ. ಒಟ್ಟಿನಲ್ಲಿ ಈ ಭಾಗದ ಧಾರ್ಮಿಕ ಚರಿತ್ರೆ ವೈಶಿಷ್ಟ್ಯ ಪೂರ್ಣವಾಗಿದೆ. ನೋಡುಗರನ್ನು ಓದುಗರನ್ನು ನಿಬ್ಬೆರಗುಗೊಳ್ಳಿಸುವ ಹಂತ ಹಂತದಲ್ಲಿ ವಿಕಾಸ ಹೊಂದಿ ಬೆಳೆಯತಿರುವುದು ಕಾಣುತ್ತೇವೆ. ಧರ್ಮದ ಹಿನ್ನಲೆಯಲ್ಲಿಯೇ ಹುಟ್ಟಿದ ಮಠ – ಮಾನ್ಯಗಳು ತಮ್ಮ ತಮ್ಮ ಸಕ್ಯಾನುಸಾರವಾಗಿ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕೊಡುಗೆಗಳ ಮುಖಾಂತರ, ವೀರಶೈವ ಧರ್ಮವನ್ನು ಬೆಳೆಸುತ್ತಿದ್ದಾರೆ.

೪. ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಚರಿತ್ರೆ

" ಹೈದ್ರಾಬಾದ – ಕರ್ನಾಟಕ ಭಾಗವು ನಿಜಾಮರ ಆಳ್ವಿಕೆಯಲ್ಲಿ ಉರ್ದು ಭಾಷೆ ಬಿಟ್ಟು ಮತ್ತಾವ ಭಾಷೆ ಸಾಹಿತ್ಯಕ್ಕೆ ಅವಕಾಶ ಇದ್ದಿರಲಿಲ್ಲ. ನಿಜಾಮರ ಕೈ ಗೊಂಬೆಯಾಗಿ ನಮ್ಮ ಭಾಗದ ಜನರಿಗಾಯ್ತು. ಆದ್ದರಿಂದಲೇ ಇದಕ್ಕೆ ಗತ ವೈಭವವೆಂದು ಕರೆಯುತ್ತಾರೆ. ಕನ್ನಡ ಸಾಹಿತ್ಯದಲ್ಲಿಯೇ ಮೊಟ್ಟ ಮೊದಲು ಸಿಗುವ ಲಕ್ಷಣ ಗ್ರಂಥವಾದ "ಕವಿರಾಜ ಮಾರ್ಗ" ಹುಟ್ಟಿತ್ತು. ಈ ಗ್ರಂಥವು ಗುಲಬರ್ಗಾ ಜಿಲ್ಲೆಯ ಮಳಖೇಡನ ನೃಪತುಂಗ ದೊರೆಯ ಆಸ್ಥಾನದಲ್ಲಿದ್ದ ಶ್ರೀ ವಿಜಯ ನೆಂಬ ಕವಿಯು ಬರೆದದ್ದು, ಕನ್ನಡ ಮೊದಲ ಗದ್ಯ ಗ್ರಂಥವಾದ "ವಡ್ಡಾರಾಧನೆ "ಎಂಬುದನ್ನು ಬೀದರ ಜಿಲ್ಲೆಯ ಹಳ್ಳಿಖೇಡ (ಬಿ) ಗ್ರಾಮದ ಬಾಜಿಪ್ಪು ರಚಿಸಿದನೆಂದು ಡಾಃ ಹಂಪನಾ ಅವರು ಸಂಗ್ರಹಿಸಿದ "ಕನ್ನಡ ಆರಾಧನೆ" ಕೃತಿಯಿಂದ ತಿಳಿದು ಬರುತ್ತದೆ. ಹೀಗೆ ಅಮುಲ್ಯವಾದ ಕನ್ನಡ ಸಾಹಿತ್ಯವನ್ನು ಮೊಟ್ಟ ಮೊದಲು ಈ ಭಾಗದಿಂದಲೇ ಪ್ರಾರಂಭಗೊಂಡಿತೆಂದು ಹೇಳಬಹುದು.

ರಾಷ್ಟ್ರಕೂಟರ ಆಸ್ಥಾನದ ದೊರೆಯಾದ ಮೂರನೆ ಕೃಷ್ಣನ ಆಸ್ಥಾನ ಕವಿಯಾಗಿ, ಚಕ್ರವರ್ತಿಯೆಂದು ಬಿರದು ಪಡೆದಿರುವ "ಪೊನ್ನ " ಈ ಭಾಗದವನು ಇತ " ಭೂವನೈಕ್ಯ ರಾಮಾಭ್ಯುದಯ"ಎಂಬ ಕಾವ್ಯ ಗ್ರಂಥವನ್ನು ಬರೆದನು. ಕನ್ನಡದ ಪ್ರಸಿದ್ಧ ಕವಿ ಎರಡನೇ ಚಕ್ರವರ್ತಿ ಎಂಬ ಬಿರುದಾಂಕಿತವನ್ನು ಪಡೆದು ಹೆಸರಾಂತ ಕವಿ "ರನ್ನ "ಈ ಭಾಗದವನು ಇತನು " ಸಾಹಸ ಭೀಮ ವಿಜಯ" "ಗದಾಯುದ್ಧ "ಎಂಬ

ಬೃಹತ್ ಕಾವ್ಯವನ್ನು ರಚನೆ ಮಾಡಿದನು. " ಪಸರಿಪ್ಪ ಕನ್ನಡಕ್ಕೊ ಡೆಯನೋರ್ವನೆ" ಎಂದೆನಿಸಿದ ಆದಿ ಕವಿ "ಪಂಪ" ಲೌಕಿಕವನ್ನು ಜಿನಾಗಮವನ್ನು ಬೆಳೆಗಿದುದ್ದು ಈ ಭಾಗದಲ್ಲಿಯೇ. ಕನ್ನಡ ಸಾಹಿತ್ಯವನ್ನು ಶ್ರೀಮಂತ ಗೊಳಿಸಿ, ವಿಶ್ವಸಾಹಿತ್ಯದ ಪಂಕ್ತಿಯಲ್ಲಿ ಬೆರೆಸಿ ಸಂತೋಷದಿಂದ ಕಾಣುವ ವಚನ ಸಾಹಿತ್ಯ ಹುಟ್ಟಿಕೊಂಡಿದ್ದು ಈ ಭಾಗದಲ್ಲಿಯೇ. ಲಿಂಗಸೂರಿನ ಶಂಕರ ದಾಸಿಮಯ್ಯ,ಜೇಡರ ದಾಸಿಮಯ್ಯ, ಅಜಗಣ್ಣ ಮುಕ್ತಾಯಕ್ಕ ಆಯ್ದಕ್ಕಿ ಮಾರಯ್ಯ, ಅಲ್ಲಮ ಪ್ರಭು, ಬಸವಣ್ಣ, ಚನ್ನಬಸವಣ್ಣ, ಸಿದ್ಧರಾಮಯ್ಯ, ಅಕ್ಕಮಹಾದೇವಿ, ಕುಂಬಾರ ಗುಂಡಯ್ಯ, ಶರಣ ಶರಣೆಯರಿಂದ ಅನೇಕ ಮೌಲಿಕ ವಚನ ಸಾಹಿತ್ಯ ರಚನೆಯಾಯಿತು. "ಶರಣ ಸತಿ ಲಿಂಗ ಪತಿ " ಎಂಬ ಉದಾತ್ತ ಭಾವನೆಯಿಂದ ಸಾಹಿತ್ಯವನ್ನು ಸೃಷ್ಟಿ ಮಾಡಿದ ಹೆಗ್ಗಳಿಕೆ ಶರಣರದಾಗಿದೆ. ಬಸವಕಲ್ಯಾಣ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು "ಅನುಭವ ಮಂಟಪ" ಎಂಬ ಹೆಸರನಿಟ್ಟು ಅದರಡಿಯಲ್ಲಿ ಚರ್ಚೆಮಾಡಿ ಆಯ್ದು ಬೀಜಗಳಂತೆ ವಚನಗಳನ್ನು ರಚನೆ ಮಾಡಿದ್ದಾರೆ. ಈ ವಚನಗಳೇ ಇಂದು ವಿಶ್ವ ವ್ಯಾಪ್ತಿಯಾಗಿ ಹರಡಿವೆ. ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿಯೇ ಪ್ರಥಮ ಸ್ಥಾನವನ್ನು ಹೊಂದಿದೆ. ನಾಡಿನಾದ್ಯಾಂತ ಹಲವಾರು ಮಠಗಳು ಸ್ಥಾಪನೆ ಮಾಡಿ ಆ ಮಠದಲ್ಲಿ ವಚನಗಳನ್ನು ರಚನೆ ಮಾಡಿದರು. ಧಾರ್ಮಿಕ ಸಾಹಿತ್ಯಕ್ಕೆ ಹೆಚ್ಚಿನ ಮಹತ್ವಕೊಟ್ಟರು.

"ಜೈಮಿನಿ ಭಾರತ "ವೆಂಬ ಪ್ರಸಿದ್ಧ ಗ್ರಂಥವನ್ನು ಬರೆದ ಕವಿ ಲಕ್ಷ್ಮೀಶ. ಇತ ಗುಲಬರ್ಗಾ ಜಿಲ್ಲೆಯ ಸುರಪುರ ತಾಲೂಕಿನ ದೇವಪೂರದವನೆಂದು ತಿಳಿದು ಬಂದಿದೆ. ಸುಮಾರು ಹದಿಮೂರನೆ ಶತಮಾನದಲ್ಲಿ ದ್ವೈತ ಸಿದ್ಧಾಂತದ ಪ್ರತಿಪಾದಕರಾದ ಶ್ರೀ ಮಧ್ವಾಚಾರ್ಯರ ಶಿಷ್ಯರಲ್ಲಿ ಒಬ್ಬರಾದ ನರಹರಿ ತಿರ್ಥರು ಹರಿದಾಸ ಸಾಹಿತ್ಯದ ಹರಿಕಾರರು. ಮಧ್ವಾಚಾರ್ಯರು ಬಿತ್ತಿದ ಹರಿದಾಸ ಸಾಹಿತ್ಯದ ಬೀಜವನ್ನು ನರಹರಿ ತೀರ್ಥರ ಕಾಲಕ್ಕೆ ಬೆಳೆಯತೊಡಗಿತ್ತೆಂಬ ಮಾತಿದೆ.

"ದಾಸ " ಸಾಹಿತ್ಯಕ್ಕೆ ಹೈದ್ರಾಬಾದ – ಕರ್ನಾಟಕ ಕೊಡುಗೆ ಅಪಾರವಾಗಿದೆ. ರಾಯಚೂರು ಜಿಲ್ಲೆಯ ದಾಸರ ಪೂಣ್ಯ ಕ್ಷೇತ್ರವಾಗಿ ಕಂಗೊಳಿಸುತ್ತಿದೆ. "ಎನ್ನ ಪುಣ್ಯಗಳಿಂದ ಈ ಪರಿಯುಂಟೆನೋ ನಿನ್ನದೇ ಸಕಲ ಸಂಪತ್ತು" ಎಂದು ಹಾಡಿ ಹೊಗಳಿದ ವಿಜಯ ದಾಸರು ಮಾನ್ವಿ ತಾಲೂಕಿನ "ಚೀಕಲಪರ್ವಿ"ಯವರು. ಗೋಪಾಲದಾಸರು, ಜಗನಾಥದಾಸರು, ಸುರುಪುರದ ಆನಂದ ದಾಸರು, ಶಾಮಸುಂದರ ದಾಸರು, ಪ್ರಾಣೇಶ ದಾಸರು, ಗುರುಗೋಪಾಲ ದಾಸರು, ರಾಮ ದಾಸರು, ಗುರು ಪ್ರಾಣೇಶ ದಾಸರು, ಅಭಿನವ ಪ್ರಾಣೇಶ ದಾಸರು, ವ್ಯಾಸ ವಿಠಲ, ಕಮಲೇಶ ವಿಠಲ, ಮನೊಹರ ವಿಠಲ, ಗೋವಿಂದ ದಾಸರು .......

ಹೀಗೆ ಮುಂತಾದ ಹರಿದಾಸರು, ಸಾಹಿತ್ಯಿಕ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ಕೊಟ್ಟಿದ್ದಾರೆ. ೧೮ನೇ ಶತಮಾನದಲ್ಲಿ ಬದುಕಿದ ಚಿಂಚೋಳಿ ತಾಲೂಕಿನ ಐನೊಲಯ ಕರಿಬಸ ಯ್ಯರು ಕುಮಾರ ವಿಜಯ ವಿಲಾಸ, ಕಾವ್ಯ ರಚಿಸರುವರು. ಅಲ್ಲದೆ ತೆಲಗು ಒಂದೆರಡು ಕೃತಿಗಳು ರಚಿಸಿದ್ದಾರೆ.

" ಕರ್ನಾಟಕ – ಸಂಸ್ಕೃತಿಯ ಸಂಶೋಧನೆಯ " ಶ್ರೀ ಕಪಟರಾಳ ಕೃಷ್ಣರಾವ ಅವರ ಸಂಶೋಧನ ಕೃತಿಗಳಾಗಿವೆ. ಪ್ರೋ ಡಿ.ಕೆ.ಭೀಮಸೇನರಾವ ಅವರಿಗೆ ಸಾಹಿತ್ಯ ಸಂಶೋಧನೆಯಲ್ಲಿ ಅಗ್ರಸ್ಥಾನ ದೊರೆಯುತ್ತದೆ. "ಶಬ್ದಮಣಿ ದರ್ಪಣ"ದ ಪಾಠಾಂತರಗಳು ಹದಿಮೂರನೆ ಶತಮಾನದ ಕರ್ನಾಟಕಾಂಧ್ರ ಮಹಾರಾಷ್ಟ್ರ ಸಾಹಿತ್ಯವಲೋಕನಗಳು, ಪಂಚತಂತ್ರ, ಪೂಮಾಲೆ, ಮೊದಲಾದ ಕೃತಿಗಳು ರಚಿಸಿದ್ದಾರೆ. ಡಾ ಃ ಸಿದ್ದಯ್ಯಾ ಪುರಾಣಿಕ ಅವರು ಕನ್ನಡ ಸಾಹಿತ್ಯ ಸಂಶೋಧನೆಗೆ ಮಹತ್ವ ಪೂರ್ಣವಾದ ಕೊಡುಗೆಯನ್ನು ಸಲ್ಲಿಸಿದ್ದಾರೆ. "ಶರಣರ ಚರಿತಾಮೃತ" ಬಸವಣ್ಣನವರ ಜೀವನ ಹಾಗೂ ಸಂದೇಶ "ಮಹಾದೇವಿ" ಹರ್ಡೇಕರ ಮಂಜಪ್ಪನವರು "ಸಿದ್ದರಾಮ"........ ಮೊದಲಾದ ಸಾಹಿತ್ಯಿಕ ಕೃತಿಗಳು ರಚಿಸಿ ಸೇವೆಸಲ್ಲಿಸಿದ್ದಾರೆ. ಈ ಕವಿ ಸಂಶೋಧಕ, ಕನಕದಾಸರ ಪ್ರಶಸ್ತಿ ಎಂಬ ಸಂಪಾದನೆಯೂ ಸಹ ಪ್ರಕಟಿಸಿದ್ದಾರೆ. ಮಾನ್ವಿ ನರಸಿಂಗರಾವ "ನಡುಗನ್ನಡ ನಿರ್ಣಯ" ಎಂಬ ಸಂಶೋಧನೆಯ ಗ್ರಂಥವನ್ನು ರಚಿಸಿದ್ದಾರೆ. ವ್ಯಾಕರಣ ತೀರ್ಥ ಶ್ರೀ ಚಂದ್ರಶೇಖರ ಶಾಸ್ತ್ರಿಗಳು ಹಳೆಗನ್ನಡ ಸಂಶೋಧನೆಯಲ್ಲಿ ಹೆಸರು ಮಾಡಿದವರು. ಶ್ರೀ ಗೋರೆಬಾಳ ಹನುಮಂತರಾಯರು ಶ್ರೀ ನಾ. ಭಾ. ಜೋಷಿಯವರು ಸಾಹಿತ್ಯ ಸೇವೆ ಸಲ್ಲಿಸಿದ್ದಾರೆ.

"ವಿಜಯ ನಗರ ಸಾಮ್ರಾಜ್ಯ" "ಕನ್ನಡ ನಾಡಿನ ಮಿಂಚಿದ ಮಹಿಳೆಯರು" ಎಂಬ ಶಾಸನ ಗ್ರಂಥಗಳನ್ನು ಡಾಃ ಪಿ.ಬಿ. ದೇಸಾಯಿವರದು. ಕುರುಡಿ ಹನುಮಂತರಾಯರು ನಾಗಭೂಷಣ ಶಾಸ್ತ್ರಿಗಳು "ಭಾರತೀಯ ದರ್ಶನ ಸಮಿಕ್ಷೆ" ವೀರಶೈವ ತತ್ವ ಪ್ರವೇಶ " ಸರ್ವಜ್ಞನ ವಚನ ಸಂಗ್ರಹ" ಬಸವ ಪುರಾಣ, ಚನ್ನಬಸವಣ್ಣನವರ ನೂರೆಂಟು ವಚನಗಳ ಸಂಗ್ರಹ ನಿಜಗುಣರ ಕೈವಲ್ಯ ಪದ್ದತಿ ಎಂಬುದು ಕನ್ನಡ ಸಾಹಿತ್ಯ ಲೋಕಕ್ಕೆ ಕೊಡುಗೆಯಾಗಿ ನೀಡಿದ್ದಾರೆ. ಸರ್ವಶ್ರೀ ಜಯತೀರ್ಥ ರಾಜಪುರೋಹಿತ ವ್ಹಿ. ಎಸ್. ಕುಲಕರ್ಣಿ, ಶಾಂತರಸ, ಬಿ. ಬಿ. ಹೆಂಡಿ, ಸೀತಾರಾಮ ಜಾಗಿರದಾರ, ....... ಮುಂತಾದ ಸಂಶೋಧಕರ ಈ ಭಾಗದಲ್ಲಿ ಕನ್ನಡ ಸಾಹಿತ್ಯ ಕೃಷಿಯನ್ನು ಮಾಡಿದ್ದಾರೆ.

ಕನ್ನಡ ಸಾಹಿತ್ಯ ಸಂಸ್ಕೃತಿ ಮತ್ತು ಇತಿಹಾಸಗಳ ಸಾಕಷ್ಟು ಗೌಪ್ಯಗಳನ್ನು ಇಟ್ಟುಕೊಂಡಿರುವ ಈ ಪ್ರದೇಶ ಶ್ರೇಷ್ಠವಾಗಿದೆ. ಕನ್ನಡ ಭಾಷೆಯ ಮೇಲೆ ಉರ್ದು ಮರಾಠಿ, ಮತ್ತು ತೆಲಗು ಭಾಷೆಗಳ ಪ್ರಭಾವ

ಬೆಳೆದಿದೆ. ಒಂದು ಕಾಲಕ್ಕೆ ಕನ್ನಡ ಭಾಷೆಯು ತನ್ನ ಅಸ್ತಿತ್ವವನ್ನೇ ಕಳೆದುಕೊಂಡಿತ್ತು. ಭಾಷೆ,ಸಾಹಿತ್ಯ,ಕಲೆ, ಧರ್ಮ, ಮೊದಲಾದವುಗಳು ಇಂಥಹ ಪರಿಸ್ಥಿತಿಯಲ್ಲಿ ಚೈತನ್ಯ ಹೀನವಾದವು, ಒಂದು ರೀತಿಯಿಂದ ಸಾಹಿತ್ಯ ಬೆಳವಣಿಗೆಯ ಉದ್ದಗಲಕ್ಕೆ ಅನೇಕ ಏರು – ಪೇರುಗಳನ್ನು ಅಘಾತ ಸಂಘರ್ಷಗಳನ್ನು ಎದುರಿಸುತ್ತ ಬಂದು ಇಂದು ವಿಶಿಷ್ಟಪೂರ್ಣವಾದ ಸಾಹಿತ್ಯವನ್ನು ಸೃಷ್ಟಿಯಾಗಿರುವುದು ಈ ಭಾಗದ ಭಾಗ್ಯವೆನ್ನಬೇಕು. ''ಈ ನಾಡು ಕನ್ನಡದ ಹೊಳೆಗೆ ತಲೆ ಮೂಡು, ಕಾಶಿ ಕನ್ನಡಿಗರಿಗೆ'' ಎಂದು ಖ್ಯಾತ ವಿದ್ವಾಂಸರಾದ ಬಿ. ಎಂ. ಶ್ರಿಯವರಿಂದ ಹೊಗಳಿಸಿಕೊಂಡಿದೆ. ಈ ಭಾಗವು ತಿರುಳುಗನ್ನಡ ನೆ ಲೆ, ನೃಪತುಂಗ ನಾಡು, ಶರಣರ ಬೀಡು ದಾಸರ ಬೀಡೆಂದು ಪ್ರಖ್ಯಾತಿ ಪಡೆದಿದೆ. ಕನ್ನಡ ಸಾಹಿತ್ಯದ ಶ್ರೀಮಂತಿಕೆಯನ್ನು ಉಳಿದ ಪ್ರದೇಶಗಿಂತ ಅವಿರತವಾಗಿ ಶ್ರಮಿಸಿದೆ, ಇಂದು ಶ್ರಮಿಸುತ್ತಿದೆ. ಹೀಗಾಗಿ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗೆ ಹೈದ್ರಾಬಾದ ಕರ್ನಾಟಕದ ಕೊಡುಗೆ ಅಪಾರವಾಗಿದೆ.

೫. ವಚನಕಾರರು

ಹೈದ್ರಾಬಾದ – ಕರ್ನಾಟಕ ಭಾಗದಲ್ಲಿ ಅನೇಕ ವಚನಕಾರರು ಬಾಳಿ ಬೆಳಗಿದ್ದಾರೆ. ಅನೇಕರು ವಚನಗಳನ್ನು ರಚನೆ ಮಾಡಿದ್ದಾರೆ. ''ರಾಮನಾಥ'' ಎಂಬ ಅಂಕಿತ ನಾಮವನ್ನಿರಿಸಿಕೊಂಡ ಜೇಡರ ದಾಸಿಮಯ್ಯ ಅನೇಕ ವಚನಗಳನ್ನು ರಚಿಸಿದ್ದಾರೆ. ಇತನ ಮಡದಿಯಾದ ದುಗ್ಗಳೆ ಕೆಲವು ವಚನಗಳನ್ನು ರಚನೆ ಮಾಡಿದ್ದಾಳೆಂದು ತಿಳಿದು ಬಂದಿದೆ. ಈತ ಮೊಟ್ಟ ಮೊದಲನೆ ವಚನಕಾರರೆಂದು ಒಪ್ಪಬೇಕಾಗುತ್ತದೆ. ''ಅಯ್ಯುಕ್ಕಿ ಮಾರಯ್ಯ'' ರಾಯಚೂರು ಜಿಲ್ಲೆಯ ಅಮರೇಶ್ವರ ಗ್ರಾಮದವನು ತನ್ನ ಜನ್ಮಸ್ಥಳವಾದ ''ಅಮರೇಶ್ವರ''ತನ್ನ ಅಂಕಿತನಾಮವನ್ನಿರಿತುಕೊಂಡು ಕೆಲವು ವಚನಗಳನ್ನು ಬರೆದಿದ್ದಾನೆ. ''ಏಕಾಂತ ರಾಮಯ್ಯ ''ಅಬಲೂರು ಶಾಸನ ಹಾಗೂ ಹರಿಹರಿನ '' ಏಕಾಂತ ರಾಮಿ ತಂದೆಗಳ ರಗಳೆ'' ಹಾಗೂ ''ಅಬಲೂರು'' ಚರಿತ್ರೆಎಂಬ ಪುರಾಣ ಕಾವ್ಯಗಳಲ್ಲಿ ಉಲ್ಲೇಖಿತನಾಗಿದ್ದಾನೆ. ಗುಲಬರ್ಗಾ ಜಿಲ್ಲೆಯ ಆಳಂದ ಈ ಶರಣರ ಜನ್ಮಸ್ಥಳ.

ಗುಲಬರ್ಗಾ ಜಿಲ್ಲೆಯ ಏಲೇಶ್ವರ ಗ್ರಾಮದವನಾದ ಏಲೇಶ್ವರ ಕೇತಯ್ಯಾ ಇನ್ನೊಬ್ಬ ಶರಣ (ಎಲೇಶ್ವರ ಗ್ರಾಮಕ್ಕೆ ''ಎಲೇರಿ '' ಎಂದು ಕರೆಯುತ್ತಾರೆ). ''ಏಲೇಶ್ವರಲಿಂಗ'' ಎಂಬುದು ಈ ಶರಣರ ಅಂಕಿತನಾಮವಾಗಿದೆ. ಸಕಲ ಪುರಾತನದ ವಚನಗಳಲ್ಲಿ ೭೪-ಈತನ ವಚನಗಳು ಪ್ರಕಟಗೊಂಡಿದ್ದು ತಿಳಿದು ಬರುತ್ತದೆ. ಶ್ರೀ ಬಸವೇಶ್ವರರ ಸಮಕಾಲಿನ ಶರಣರಾದ ಶ್ರೀ ''ಗಾಳದ ಕನ್ನಪ್ಪ'' ನವರು ಒಬ್ಬರು,

ಬಸವೇಶ್ವರರ ಪುರಾಣ,ಕಥಾ ಸಾಗರ ಸೋಮೇಶ್ವರ ಪುರಾಣ, ಪ್ರಭುಲಿಂಗ ಲೀಲೆ, ಶರಣಲೀಲಾಮೃತ, ಕೆಲವು ಗ್ರಂಥಗಳಲ್ಲಿ ಈ ಶರಣನ ಉಲ್ಲೇಖ ದೊರೆಯುತ್ತದೆ. ಕನ್ನಯ್ಯ ಪ್ರಿಯ ಗುಹೇಶ್ವ, ಗುಹೇಶ್ವರನಲ್ಲಯ್ಯ ಎಂಬ ಎರಡು ಅಂಕಿತ ನಾಮ ಹೊಂದಿ ಕೆಲವು ವಚನಗಳನ್ನು ರಚನೆ ಮಾಡಿದ್ದಾರೆ.

''ನಾರಾಯಣ ಪ್ರಿಯಾ ರಾಮನಾಥ'' ಎಂಬ ಅಂಕಿತ ನಾಮವನ್ನು ಹೊಂದಿದ ''ಗುಪ್ತಮುಂಚಣ್ಣ'' ಶರಣ ಈ ಭಾಗದವನೆ ಸಿಂಗಿರಾಜನ ''ಸಿಂಗಿ ಪುರಾಣ'' ಲಕ್ಕಣ್ಣಾ ದಂಡೇಶವ'' '' ಶಿವತತ್ವ ಚಿಂತಾಮಣಿ'' ....... ಕೆಲವು ಪುರಾಣಗ್ರಂಥಗಳಲ್ಲಿ ಈ ಶರಣರ ಉಲ್ಲೇಖ ಸಿಗುತ್ತವೆ. ''ಚಂದಿಮರಸ'' ಶರಣನೆಂಬುವವರು ಗುಲಬರ್ಗಾ ಜಿಲ್ಲೆಯ ಸುರಪೂರ ತಾಲೂಕಿನ ಕೆಂಬಾವಿಯ ಅರಸನಾಗಿದ್ದನೆಂದು ತಿಳಿದ ಸಂಗತಿ. ಆರಸೊತ್ತಿಗೆಯನ್ನು ತ್ಯಜಿಸಿ ಶರಣ ತತ್ವಕ್ಕೆ ಹೊಂದಿಕೊಂಡು ಕೆಲವು ವಚನಗಳನ್ನು(೫೩) ರಚಿಸಿದ್ದಾನೆ. ಇತನ ವಚನಾಂಕಿತವಾದ ''ಚಿಮಲ್ಲಿಗೆಯ ಚೆನ್ನರಾಮ ''ಎಂಬುದಾಗಿದೆ. ಗುಲಬರ್ಗಾ ಜಿಲ್ಲೆಯ ಮಾರುಡಿಗೆ ಗ್ರಾಮದ ''ನಾಚಯ್ಯ'' ಒಬ್ಬ ಶರಣ. ಇತ ಬಸವಣ್ಣನವರ ಸಮಕಾಲಿನವನಾಗಿದ್ದನು. ''ನಾಚಯ್ಯ ಪ್ರಿಯಾ ಮಲ್ಲಿನಾಥಯ್ಯ'' ಎಂಬ ಅಂಕಿತನಾಮುವನ್ನು ಇರಿಸಿಕೊಂಡು ಕೆಲವು ವಚನಗಳನ್ನು ರಚಿಸಿದ್ದಾನೆ.

ಬೀದರ ಜಿಲ್ಲೆಯ ಬಸವಕಲ್ಯಾಣ ನಗರದಲ್ಲಿ ವಾಸವಾಗಿದ್ದ ''ತಳವಾರ ಕಾಮಿದೇವ'' ಶರಣ ಕಾಯಕ ತಳವಾರಿಕೆ ಯಾಗಿತ್ತು, '' ಕಾಮಹರ ಪ್ರಿಯ ರಾಮನಾಥ'' ಎಂಬ ವಚನಾಂಕಿತವನ್ನಿರಿಸಿಕೊಂಡು ಹತ್ತು ವಚನಗಳು ಮಾತ್ರ ರಚಿಸಿದನೆಂದು ತಿಳಿದು ಬರುತ್ತದೆ. ''ಬಬ್ಬಿ ಬಾಚಯ್ಯ ''ಶರಣರನು ರಾಯಚೂರ ಜಿಲ್ಲೆಯ ಗೊಬ್ಬೂರ ಗ್ರಾಮದವನು. ಇತ ಬಸವೇಶ್ವರನ ಸಮಾಕಲಿನವರಾಗಿದ್ದರೆಂದು ತಿಳಿದು ಬರುತ್ತದೆ. ''ಏಕಾಂಕಧರ ಸೋಮೇಶ್ವರಲಿಂಗ '' ಇದು ಇತನ ಅಂಕಿತನಾಮ ಇತನ ೧೦೦ ವಚನಗಳು ಸಿಗುತ್ತವೆ. '' ತನು ಮನ ಸಂಗಮೇಶ್ವರ'' ಎಂಬ ಅಂಕಿತನಾಮುವನ್ನು ವಿರುವ ಶರಣ ''ಸಗರದ ಬೊಮಣ್ಣಾ''. ಇತ ಗುಲಬರ್ಗಾ ಜಿಲ್ಲೆಯ ಸಗರ ಗ್ರಾಮದವನೆಂದು ತಿಳಿದು ಬರುತ್ತದೆ. ಇತನ ೮೫ ವಚನಗಳು ಕವಿ ಚರಿತ್ರೆಕಾರರು ಗುರುತಿಸಿದ್ದಾರೆ.

''ಬಸವ ಪ್ರಿಯಾ ಕೂಡಲ ಚನ್ನವಸವಣ್ಣ'' ಎಂಬ ವಚನಾಂಕಿತವಿರುವ ಶರಣ '' ಹಡಪದ ಅಪ್ಪಣ'' ಇತ ಮೂಲತ ಬೀದರ ಜಿಲ್ಲೆಯ ಬಸವಕಲ್ಯಾಣದವನೇ ಬಸವೇಶ್ವರರ ಸಮಾಕಾಲಿನ ಶರಣ ಶೂನ್ಯ ಸಂಪಾದನೆ ಶರಣ ಲೀಲಾಮೃತ ಮೊದಲಾದ ಗ್ರಂಥಗಳಲ್ಲಿ ಇತನ ಉಲ್ಲೇಖ ದೊರೆಯುತ್ತದೆ. ಇತನು ಒಟ್ಟು ೨೨೨ ವಚನಗಳನ್ನು ರಚಿಸಿದ್ದಾನೆಂದು ತಿಳಿದು ಬರುತ್ತದೆ. ''ಸಿದ್ಧಾಂತಿ ವೀರಯ್ಯ'' ಶರಣನು ಬೀದರ

ನಗರದವರು. ಇತರ ಕೇವಲ ನಾಲ್ಕು ವಚನಗಳನ್ನು ದೊರೆಯುವ ಈ ಶರಣನ ಅಂಕಿತನಾಮ, ''ಗೋಳಕಾರ ವಿಶ್ವದ ಹಿತಲಿಂಗ'' ಎಂಬುದಾಗಿದೆ-ಬೀದರ ಜಿಲ್ಲೆಯ ರೇಕುಳಗಿ ಗ್ರಾಮದಲ್ಲಿ ಜನಿಸಿದ ಶರಣ ''ಬಹೂರೂಪಿ ಚೌಡಯ್ಯ'' ರೇಕಣ್ಣಪ್ರಿಯ ನಾಗನಾಥ ಇತನ ವಚನಾಂಕಿತವಾಗಿದೆ. ವೀರಶೈವಾಮೃತ ಪುರಾಣ ಭರತೇಶ್ವರ ಕಾವ್ಯಗಳಲ್ಲಿ ಇತನ ಉಲ್ಲೇಖ ಸಿಗುತ್ತದೆ.

ಹರಿಹರನ ರಗಳೆಗಳಲ್ಲಿ ''ಕುಂಬಾರ ಗುಂಡಯ್ಯ'' ನ ರಗಳೆಗಳು ಪ್ರಸಿದ್ಧಿ ಪಡೆದಿವೆ. ಕುಂಬಾರ ಗುಂಡಯ್ಯ ಶರಣ ಬೀದರ ಜಿಲ್ಲೆಯ ಭಾಲ್ಕಿ ತಾಲೂಕಿನಪನು. ಇತ ಕುಂಬಾರ ಕಾಯಕದವನೆಂದು ತಿಳಿದು ಬಂದಿದೆ. ಈತನು ಕೆಲವು ವಚನಗಳು ರಚಿಸಿದ್ದಾನೆ,ಆದರೆ ದೊರೆತಿಲ್ಲವೆಂದು ಕವಿ ಚರಿತ್ರೆಕಾರರು ಹೇಳುತ್ತಾರೆ. ವಚನಗಳು ದೊರೆತಿಲ್ಲವಾದರೂ ಇತನೊಬ್ಬ ಶರಣನೆಂದು ಎಲ್ಲರು ಒಪ್ಪಬೇಕಾಗುತ್ತದೆ. ಎಳೆಯುಮೇಶ್ವರ ಚಿಕ್ಕಯ್ಯ ಶರಣರು ಈ ಭಾಗದವರೆ. ಈ ಶರಣ ರಾಯಚೂರು ಜಿಲ್ಲೆಯವರೆಂದು ತಿಳಿದು ಬರುತ್ತದೆ. ರಾಯಚೂರು ಜಿಲ್ಲೆಯ ಸಿಂಧನೂರು ತಾಲೂಕಿನವನೆಂದು ಸ್ಪಷ್ಟವಾಗಿ ಗೋಚರಿಸುತ್ತದೆ. ''ಉಳಿಯುಮೇಶ್ವರ''ಎಂಬ ವಚನಾಂಕಿತವನ್ನು ಹೊಂದಿದ ಈ ಶರಣ ಕೇವಲ ಹತ್ತು ವಚನಗಳು ಮಾತ್ರ ದೊರೆಯುತ್ತದೆ.

ಈ ಪ್ರದೇಶದ ವಚನಕಾರರ ಜತೆ ಅನೇಕ ವಚನಗಾರ್ತಿಯರು ತಮ್ಮ ತಮ್ಮ ಕೊಡುಗೆಯುನ್ನು ಸಲ್ಲಿಸಿದ್ದಾರೆ. ವಚನಗಳನ್ನು ರಚನೆ ಮಾಡಿ ಈ ಪ್ರದೇಶದ ಕೀರ್ತಿಯನ್ನು ಬೆಳಗಿಸಿದ್ದಾರೆ. ಆಯ್ದಕ್ಕಿ ಮಾರಯ್ಯನ ಸತಿಯಾದ ಶರಣೆ ''ಲಕ್ಕಮ್ಮಾ'' ರಾಯಚೂರು ಜಿಲ್ಲೆಯ ಅಮರೇಶ್ವರ ಗ್ರಾಮದವಳು. ''ಮಾರಯ್ಯ ಪ್ರಿಯ ಅಮರೇಶ್ವರ ಲಿಂಗ'' ಎಂಬ ಅಂಕಿತನಾಮವನ್ನು ಇರಿಸಿಕೊಂಡು ೨೫ ವಚನಗಳನ್ನು ರಚಿಸಿದ್ದಾಳೆ. ರಾಯಚೂರು ಜಿಲ್ಲೆಯ ಮೊಸರಕಲ್ಲು ಗ್ರಾಮದ ಶರಣೆಯಳಾದ '' ಮುಕ್ತಾಯಕ್ಕ'' ಒಬ್ಬಳು. ಇಕೆ ''ಅಜಗಣ್ಣ ತಂದೆ'' ಎಂಬ ವಚನಾಂಕಿತದಿಂದ ೨೧ ವಚನಗಳನ್ನು ರಚಿಸಿದ್ದಾಳೆ. ಇವರ ಉಲ್ಲೇಖ ಶಿವಶರಣೆಯರ ವಚನಗಳು ಎಂಬ ಗ್ರಂಥದಲ್ಲಿ ದೊರೆಯುತ್ತದೆ.

''ಆಚಾರವೇ ಪ್ರಾಣನಾದ ರಾಮೇಶ್ವರ ಲಿಂಗ'' ಎಂಬ ವಚನಾಂಕಿತ ಹೊಂದಿದ ''ಅಕ್ಕಮ'' ಶರಣೆ ಗುಲಬರ್ಗಾ ಜಿಲ್ಲೆಯ ಏಲೇರಿ ಗ್ರಾಮದವಳು ೧೫೭ ವಚನಗಳು ಉಪಲಭ್ಯವಾಗಿವೆ. ಇಕೆಯ ವಚನಗಳಲ್ಲಿ ಶಿವಶರಣರ ನಡೆ – ನುಡಿ ತತ್ವಗಳನ್ನೊಳಗೊಂಡಿವೆ. ಬಸವಣ್ಣನ ಮಡದಿಯಾದ ಗಂಗಾಬಿಕೆ ಶರಣೆ ಈ ಪ್ರದೇಶದವಳೇ ''ಗಂಗಾ ಪ್ರಿಯಾ ಕೂಡಲ ಸಂಗ'' ಎಂಬ ವಚನ ಅಂಕಿತನಾಮದಿಂದ ವಚನಗಳು

ರಚಿಸಿದ್ದಾಳೆ. ಬಸವಣ್ಣನ ಎರಡನೇ ಮಡದಿಯಾದ ನೀಲಲೋಚನೆ ಶರಣೆ ಈ ಭಾಗದವಳೇ, ಸಿಂಗಿರಾಜನ ಚರಿತ್ರೆಯಿಂದ ಕಂಡು ಬರುತ್ತದೆ. ''ಸಂಗಯ್ಯ'' ಎಂಬುದು ಈಕೆಯ ವಚನಾಂಕಿತವಾಗಿದೆ. ಸುಮಾರು ೧೩೪ ವಚನಗಳು ದೊರೆಯುತ್ತವೆ. ''ಸಂಗನ ಗುರುಬಸವ'' ಬಸವ ಪ್ರಿಯಾಕೂಡಲ ಸಂಗಮದೇವ ಎಂಬ ಅಂಕಿತನಾಮಗಳಿಂದ ವಚನಗಳು ದೊರೆಯುತ್ತವೆ.

ಹಡಪದ ಅಪ್ಪಣ್ಣ ಶರಣನ ಮಡದಿಯಾದ ''ಲಿಂಗಮ್ಮಾ'' ಶರಣೆ ಬಸವ ಕಲ್ಯಾಣದವಳೆಂದು ಹೇಳಲಾಗಿದೆ. ''ಅಪ್ಪಣ್ಣ ಪ್ರಿಯ ಚನ್ನಬಸವಣ್ಣ'' ಎಂಬ ವಚನಾಂಕಿತವನ್ನಿರಿಸಿಕೊಂಡು ೧೧೩. ವಚನಗಳನ್ನು ರಚಿಸಿದು ದೊರೆಯುತ್ತವೆ. ಹೈದ್ರಾಬಾದ – ಕರ್ನಾಟಕ ಪ್ರದೇಶವು ಸಾಹಿತ್ಯ ಹಾಗೂ ಸಾಂಸ್ಕೃತಿಕ ದೃಷ್ಟಿಯಿಂದ ಹಿಂದೆ ಬಿದ್ದಿಲ್ಲ. ಎಂಬುದು ಸ್ಪಷ್ಟವಾಗುತ್ತದೆ. ವಚನ ಚಳುವಳಿ ಪ್ರಾರಂಭವಾದುದ್ದು ಈ ಭಾಗದಿಂದಲೇ. ಈ ಪ್ರದೇಶದಲ್ಲಿ ಇನ್ನೂ ಅನೇಕ ಶರಣ, ಶರಣೆಯರು ಬಾಳಿ ಬೆಳಗಿದ ನಾಡಾಗಿದೆ. ಸಾಹಿತ್ಯಿಕ ಕ್ಷೇತ್ರಕ್ಕೆ ಮೌಲಿಕ ಗ್ರಂಥಗಳನ್ನು, ವಚನಗಳ ಕಟ್ಟುಗಳನ್ನು ಕಾಣಿಕೆಯಾಗಿ ಕೊಟ್ಟು, ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದೆ.

೬. ನದಿಗಳು

ಹೈದ್ರಾಬಾದ ಕರ್ನಾಟಕ ಪರಿಸರದಲ್ಲಿ ಪ್ರಮುಖವಾದ ಪವಿತ್ರ ನದಿಗಳು ಹರಿಯುತ್ತವೆ. ಭೀಮಾ, ಕೃಷ್ಣಾ, ತುಂಗಭದ್ರಾ ನದಿಗಳು ಈ ಪ್ರದೇಶದ ಸಂಸ್ಕೃತಿಕ ಮತ್ತು ಧಾರ್ಮಿಕ ಸಂಕೇತಗಳಾಗಿವೆ. ಐತಿಹಾಸಿಕ ಬೆಳವಣಿಗೆಯ ಮೇಲೆ ತನ್ನದೆ ಯಾದ ಪ್ರಭಾವ ಬೀರಿವೆ. ಇವುಗಳ ಜತೆಗೆ ಕಾರಂಜಾ ಮಾಂಜ್ರಾ, ಮಲ್ಲಾಮಾರಿ ಕಾಗಿಣಾ, ಅಮರ್ಜಾ ನದಿಗಳು ಹರಿಯುತ್ತವೆ. ಈ ನದಿಗಳ ಸಂಕ್ಷಿಪ್ತ ಪರಿಚಯ ಕೆಳಗಿನಂತೆ ಕೊಡಲಾಗಿದೆ.

ಕೃಷ್ಣಾನದಿ

ಕರ್ನಾಟಕ ಜೀವ ನದಿಗಳಲ್ಲಿ ಒಂದಾಗಿರುವ ಕೃಷ್ಣಾನದಿಯೂ ಒಂದು. ಇದು ಉತ್ತರ ಕರ್ನಾಟಕದ ಭಾಗಕ್ಕೆ ಅತಿ ಉಪಯುಕ್ತವಾದ ನದಿಯಾಗಿದೆ. ಇದಕ್ಕೆ ಪವಿತ್ರ ನದಿಯೆಂದು ಜನರ ನಂಬುತ್ತಾರೆ. ಅಲ್ಲದೆ ಇದಕ್ಕೆ ''ಹಿರೇಹೊಳೆ'' ಅಂದರೆ ದೊಡ್ಡ ಹೊಳೆ ಎಂದು ಅಥವಾ ''ಪೆದ್ದೊರೆ'' ಎಂದು ಕರೆಯುತ್ತಾರೆ. ಸಂಸ್ಕೃತದಲ್ಲಿ ''ಕೃಷ್ಣಾವೇಗ'' ಎಂದು ಕರೆದಿರುವುದು ಕಂಡು ಬರುತ್ತದೆ. ಸ್ಕಂದ ಪುರಾಣದ ಕೃಷ್ಣಾ ಮಹತ್ಮ್ಯ

ವಿಭಾಗದಲ್ಲಿ ಹೇಳಿರುವಂತೆ ಸ್ವರ್ಗದಿಂದ ಈ ನದಿಯನ್ನು ಭೂಲೋಕಕ್ಕೆ ಬಂದಂತೆಯೂ ಕಲಿಯುಗದಲ್ಲಿ ಧರ್ಮ ಜ್ಞಾನಿಯಿಂದ ಬೇಸತ್ತ ಋಷಿಗಳು ನಾರದನನ್ನು ಮೊರೆಹೊಕ್ಕಾಗ, ನಾರದ ತನ್ನ ತಂದೆ ಬ್ರಹ್ಮನನ್ನು ಪ್ರಾರ್ಥಿಸಿದನೆಂದು, ಆಗ ಬ್ರಹ್ಮಣ ಅನೇಕ ತೀರ್ಥಗಳನ್ನು ಸೃಷ್ಟಿಸಿದನೆಂದು ತಿಳಿದಂತೆ, ಹಾಗೆಯೇ ನಾರಾಯಣನನ್ನು ಧರ್ಮ ರಕ್ಷಣೆಗಾಗಿ ಪ್ರಾರ್ಥಿಸಿದಾಗ ನಾರಾಯಣನ ಶರೀರದಿಂದ ಈ ನದಿ ಹುಟ್ಟಿತ್ತೆಂದು ಕಥೆ ಹೇಳುತ್ತಾರೆ. ಆದ್ದರಿಂದಲೇ ಇದಕ್ಕೆ ಕೃಷ್ಣ ನದಿ ಎಂಬ ಹೆಸರು ಬಂತೆಂದು ಹೇಳಲಾಗಿದೆ.

ಕೃಷ್ಣಾ ನದಿಯನ್ನು ದಕ್ಷಿಣದ ಗಂಗೆಯೆಂದು ಕರೆಯುತ್ತಾರೆ. ಸಹ್ಯಾದ್ರಿ ಶ್ರೇಣಿಯಲ್ಲಿ ಮಹಾರಾಷ್ಟ್ರದ ಸಾತಾರ ಜಿಲ್ಲೆಯ ಮಹಾಬಲೇಶ್ವರದ ಬಳಿ ಈ ನದಿಯನ್ನು ಉಗಮಿಸುತ್ತದೆ. ಅಲ್ಲಿಂದ ಆ ರಾಜ್ಯದ ಸಾತಾರಾ, ಸಾಂಗಲಿ, ಕೊಲ್ಲಾಪೂರ ಜಿಲ್ಲೆಗಳ ಮೂಲಕ ಹರಿದು ಕರ್ನಾಟಕವನ್ನು ಪ್ರವೇಶಿಸುತ್ತದೆ. ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ವಾಯುವ್ಯದ ಬೆಳಗಾವಿ ಬಿಜಾಪೂರ ಗುಲಬರ್ಗಾ ರಾಯಚೂರು ಜಿಲ್ಲೆಗಳಲ್ಲಿ ಹರಿದು, ರಾಯಚೂರು ತಾಲೂಕಿನ ಈಶಾನ್ಯದಲ್ಲಿರುವ ಬುಡದ ಪಾಡು ಗ್ರಾಮದ ಬಳಿ ರಾಜ್ಯದ ಗಡಿಯನ್ನು ದಾಟುತ್ತದೆ. ಗುಲಬರ್ಗಾ ಜಿಲ್ಲೆಯಲ್ಲಿ ಸುರುಪುರ ತಾಲೂಕಿನ ಛಾಯಾಭಗವತಿ, ತಿಂಥಣಿ, ಯಾದಗಿರ ತಾಲೂಕಿನ ಭೀಮಾ, ಕೃಷ್ಣ, ನದಿಗಳು ಸಂಗಮವಾಗಿವೆ. ಮುಂದೆ ಆಂಧ್ರ ಪ್ರದೇಶದಲ್ಲಿ ಹಬ್ಬಿ ಹರಿದು ಮಚಲಿ ಪಟ್ಟಣದ ಬಳಿ ಬಂಗಾಳ ಕೊಲ್ಲಿಯನ್ನು ಸೇರುತ್ತದೆ.

## ಭೀಮಾ ನದಿ

ಈ ನದಿಯೂ ಕೃಷ್ಣಾ ನದಿ ಉಪನದಿಯಾಗಿದೆ. ಇದು ಮಹಾರಾಷ್ಟ್ರದ ಪಶ್ಚಿಮ ಘಟ್ಟಗಳ ಭೀಮಾ ಶಂಕರದಲ್ಲಿ ಉಗಮಿಸುತ್ತದೆ. ಈ ನದಿಯೂ ವಿಜಾಪೂರ ಜಿಲ್ಲೆಯ ಉತ್ತರ ತುದಿಯಲ್ಲಿರುವ ದಸೂರಿನ ಬಳಿ ಕರ್ನಾಟಕದ ಗಡಿಯನ್ನು ಮುಟ್ಟುತ್ತದೆ. ಅಲ್ಲಿಂದ ಪೂರ್ವಾಭಿಮುಖವಾಗಿ ಹಲವು ಅಂಕು – ಡೊಂಕುಗಳೊಡನೆ ಬಿಜಾಪೂರ ಮತ್ತು ಸೋಲಾಪೂರ ಜಿಲ್ಲೆಗಳ ಗಡಿ ರೇಖೆಯಾಗಿ ಹರಿಯುತ್ತವೆ. ಬಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನ ಅಗರಖೇಡದ ಬಳಿಯಿಂದ ಕೆಲವು ಬಳಸುಗಳೊಡ ಸುತ್ತಿ ಸುತ್ತಿ ಸಿಂದಗಿ ತಾಲೂಕಿನ ಮಾದನ ಹಳ್ಳಿಯ ವರೆಗೆ ಆಗ್ನೆಯಭಿಮುಖವಾಗಿ ಹರಿಯುತ್ತದೆ. ಅಲ್ಲಿಂದ ಅಫಜಲಪೂರದ ವರೆಗೆ ಪೂರ್ವಾಭಿಮುಖವಾಗಿ ಹರಿದು ಮತ್ತೆ ಕೆಲವು ಬಳಸುಗಳೊಡನೆ ಆ ತಾಲೂಕಿನ ಗ್ರಾಮವಾದ ಘತ್ತರಗಿ'ಯವರೆಗೆ ದಕ್ಷಿಣಕ್ಕೆ ಕ್ರಮಿಸುತ್ತ ಬಿಜಾಪೂರ ಗುಲಬರ್ಗಾ ಜಿಲ್ಲೆಗಳ ಗಡಿರೇಖೆಯಾಗಿ ಹಾಯ್ದು ಹೋಗುತ್ತದೆ. ಮುಂದೆ ಜೇವರ್ಗಿ, ಹಾಗರ ಗುಂಡಗಿ, ಕಟ್ಟೆಸಾಂಗವಿ, ಚಿತಾಪೂರ ತಾಲೂಕಿನ ಸನ್ನತಿಗೆ,

ಹರಿದು ಹೋಗುತ್ತದೆ. ಮುಂದೆ ಶಹಾಪೂರ, ಯಾದಗಿರ ತಾಲೂಕಿನಲ್ಲಿ ಅಂಕು – ಡೊಂಕುಗಳಾಗಿ ಹರಿದು ಹಾಯ್ದು ಹೋಗುತ್ತದೆ. ನಂತರ ಗುಲ್ಬರ್ಗಾ ಜಿಲ್ಲೆಯ ಆಗ್ನೇಯದ ಬಳಿ ಶಹಾಪೂರ ತಾಲೂಕಿನ ಸಂಗಮದ ಬಳಿ ಕೃಷ್ಣಾನದಿಯನ್ನು ಕೂಡುತ್ತದೆ.

ಅಮರ್ಜಾ ನದಿ

ಮಹಾರಾಷ್ಟ್ರದ ಉಸ್ಮಾನಾಬಾದ ಜಿಲ್ಲೆಯ ಉಮರ್ಗಾ ತಾಲೂಕಿನಲ್ಲಿರುವ ಅಲೂರು ಗ್ರಾಮದ ಹತ್ತಿರ ಈ ನದಿಯು ಉದಯಿಸುತ್ತದೆ. ಮಹಾರಾಷ್ಟ್ರದಲ್ಲಿ ಹುಟ್ಟಿ ಮುಂದೆ ಕರ್ನಾಟಕದ ಗುಲಬರ್ಗಾ ಜಿಲ್ಲೆಯ ಆಳಂದ ತಾಲೂಕದ ನಿರ್ಗುಡಿ ಗ್ರಾಮದ ಹತ್ತಿರ ಪ್ರವೇಶಿಸುತ್ತದೆ. ಆ ತಾಲೂಕಿನಲ್ಲಿ ಹರಿಯುತ್ತ ಮಧ್ಯದಲ್ಲಿ ದಕ್ಷಿಣಕ್ಕೆ ಹರಿದು ಅಫಜಲಪೂರ ತಾಲೂಕಿನ ಗಾಣಗಾಪೂರದ ಬಳಿ ಭೀಮಾನದಿಯನ್ನು ಸೇರುತ್ತದೆ. ಆದ್ದರಿಂದ ಈ ನದಿಯಲ್ಲಿ ಭೀಮಾ ನದಿಯ ಉಪನದಿಯಾಗಿದೆ. ಎಂದು ತಿಳಿದು ಬರುತ್ತದೆ.

ತುಂಗಭದ್ರಾ ನದಿಯೂ ರಾಯಚೂರ ಜಿಲ್ಲೆಯಲ್ಲಿ ಹರಿಯುತ್ತದೆ. ಮಾಂಜ್ರಾನದಿಯು ಬೀದರ ಜಿಲ್ಲೆಯಲ್ಲಿ ಹರಿಯುತ್ತದೆ. ಮಲ್ಲಾಮಾರಿ ಹಾಗೂ ಕಾಗಿಣ ನದಿಗಳು ಗುಲಬರ್ಗಾ ಜಿಲ್ಲೆಯಲ್ಲಿ ಹರಿಯುತ್ತವೆ. ಹೀಗೆ ಹೈದ್ರಾಬಾದ – ಕರ್ನಾಟಕ ಪ್ರದೇಶದ ವ್ಯಾಪ್ತಿಯಲ್ಲಿ ಪ್ರಮುಖ ಪವಿತ್ರ ನದಿಗಳು ಹಬ್ಬಿರುವುದರಿಂದ ಈ ಪ್ರದೇಶದ ಫಲವತ್ತಾದ ಭೂಮಿ,ಮಣ್ಣು ಫಲಕಾರಿಯಾಗಿದೆ.

✿✿

# ಅಡಿ ಟಿಪ್ಪಣಿ

೧. ಎಚ್.ಎಸ್.ಪಾಟೀಲ, ಅಲ್ಲಮ ಪ್ರಭು ಬೆಟ್ಟದೂರ, ತಿರುಳ್ಗನ್ನಡ; ಪುಟ ೨, ೧೯೯೩.

೨. ಡಾ. ಜಗನ್ನಾಥ ಹೆಬ್ಬಾಳೆ, ಹೈದ್ರಾಬಾದ – ಕರ್ನಾಟಕ ಜಾತ್ರೆಗಳು; ಪುಟ ೬ , ೧೯೯೬.
(ಪಿ.ಹೆಚ್‌ಡಿ. ಮಹಾಪ್ರಬಂಧ ಅಪ್ರಕಟಿತ)

೩. ಬಿ.ಷೇಕ ಅಲಿ, ಕರ್ನಾಟಕ ಚರಿತ್ರ ಮಾಲೆ ೬; ಪುಟ ೧೭೮, ೧೯೯೪.

೪. ಡಾಃ ಚೆನ್ನಣ ವಾಲಿಕಾರ, ಹೈದ್ರಾಬಾದ ಕರ್ನಾಟಕ ಗ್ರಾಮ ದೇವತೆಗಳು; ಪುಟ ೨೧, ೧೯೯೮.
(ಪಿ.ಹೆಚ್‌ಡಿ. ಮಹಾಪ್ರಬಂಧ ಅಪ್ರಕಟಿತ)

೫. ಡಾಃ ಚೆನ್ನಣ ವಾಲಿಕಾರ, ಹೈದ್ರಾಬಾದ ಕರ್ನಾಟಕ ಗ್ರಾಮ ದೇವತೆಗಳು; ಪುಟ ೨೯, ೧೯೯೮.
(ಪಿ.ಹೆಚ್‌ಡಿ. ಮಹಾಪ್ರಬಂಧ ಅಪ್ರಕಟಿತ)

೬. ಡಾಃ ವ್ಹಿ. ಶಿವಾನಂದ, ಹೈದ್ರಾಬಾದ ಕರ್ನಾಟಕ ಭಾಗದ ಶಿಲಾಶಾಸನಗಳು; ಪುಟ ೩, ೧೯೯೨.

೭. ಘತ್ತರಗಿ ಗ್ರಾಮದ ಭಾಗ್ಯವಂತಿ ದೇವಿಯ ಪ್ರಸಿದ್ಧ ಕ್ಷೇತ್ರವಾಗಿ ಕಂಗೊಳಿಸುತ್ತಿದೆ. ಈ ನದಿಯಲ್ಲಿ ಹರಿದು ಬರುತ್ತಿರುವ ಕಂಬದಲ್ಲಿ ಭಾಗ್ಯವಂತಿ ದೇವಿ ಬಂದು ಈ ಗ್ರಾಮದಲ್ಲಿ ನೆಲೆಸಿದಳೆಂಬ ಪ್ರತೀತಿ ಇದೆ.

# ಅಧ್ಯಾಯ : ಮೂರು

## ಮಠ : ಮಠಾಧಿಪತಿ

೧. ಮಠದ ಅರ್ಥ

೨. ಮಠಗಳ ಉಗಮ

೩. ಮಠಗಳ ಪ್ರಭೇದಗಳು

೪. ಮಠಗಳ ಮಹತ್ವ

೫. ಮಠಾಧಿಪತಿಯ ಸ್ಥಾನ

## ೧. ಅರ್ಥ

ಮಠ ಎಂದರೆ ಆಶ್ರಯ. ಸನ್ಯಾಸಿಗಳು ವಾಸಿಸುವ ಸ್ಥಳ, ಧಾರ್ಮಿಕ ಕೇಂದ್ರ. ಅಧ್ಯಾತ್ಮಿಕ ಆಗರ, ವಿದ್ಯಾಲಯ, ದೇವಾಲಯಗಳೆಂಬ ಮುಂತಾದ ಅರ್ಥಗಳು ಪ್ರಾಚೀನ ಕಾಲದಿಂದಲೂ ಬಂದಿವೆ. ಮಠ ಶಬ್ದವು ಮೂಲತಃ ಸಂಸ್ಕೃತದಲ್ಲಿ ಬಳಕೆಯಾಗಿದೆ. ' ಮಠತಿ' ಎಂದು ಪರ್ಯಾಯವಾಗಿ ಕನ್ನಡಕ್ಕೆ ಬಳಸಿಕೊಳ್ಳಲಾಗಿದೆ. ಈ ಶಬ್ದವು ಮಂದಿರ, ದೇವಾಲಯ, ಪವಿತ್ರ ಕ್ಷೇತ್ರಗಳ ಅರ್ಥದಲ್ಲಿ ರೂಢಿಯಲ್ಲಿತ್ತು. ನಂತರ " ಮಠಾಯತವಮ್" ಎಂದು ಬಳಕೆಯಾಗಿ ಸನ್ಯಾಸಿಗಳ ವಾಸಸ್ಥಳ ಆಶ್ರಮಗಳಿಗೆ ವಿದ್ಯಾಲಯವೆನ್ನುವ ಅರ್ಥದಲ್ಲಿ ಬಳಕೆಯಾಯಿತೆಂದು ವಿದ್ವಾಂಸರ ಅಭಿಪ್ರಾಯ. ಅಮರಕೋಶದ ಅರ್ಥದಲ್ಲಿ ಹೇಳಬೇಕಾದರೆ, ಮಠ ಎಂದರೆ ಧರ್ಮಕ್ಷೇತ್ರ. ಇಲ್ಲವೆ ಪರೋಪಕಾರದ ಆಗರ. ಛತ್ರಾದಿ ನಿಲಯ, ಎಂದು ಅಮರ ಸಿಂಹನು ನುಡಿಯುತ್ತಾನೆ. ಮ್ಯಾಂಡೊಸಲರ ಅವರು ಸಂಸ್ಕೃತ ಶಬ್ದಕೋಶದಲ್ಲಿ ಹೇಳಿರುವ, "ಒಬ್ಬ ಸನ್ಯಾಸಿ ಇಲ್ಲವೇ ಅಭ್ಯರ್ಥಿಯ ಕುಟೀರ, ಒಂದು ಧಾರ್ಮಿಕ ಪಾಠ ಶಾಲೆ, ಅಥವಾ ಮಹಾವಿದ್ಯಾಲಯ. ಮಠಾಧಿಪತಿಯೆಂದರೆ ಇಂತಹ ಧಾರ್ಮಿಕ ಸಂಸ್ಥೆಯ,ಇಲ್ಲವೆ ಪಾಠಶಾಲೆಯ ಮುಖ್ಯಸ್ಥ ಎಂಬ ಅರ್ಥವನ್ನು ಹೊಂದಿದೆ. ಮಠ ವೆಂದರೆ,ಧಾರ್ಮಿಕ ತತ್ವಗಳ ರಕ್ಷಣೆಯ ಕೇಂದ್ರ ಸ್ಥಳ ಹಾಗೂ ಧರ್ಮ ಸಂಘಟನೆಯ ಬುನಾದಿ, ಮನಸ್ಸನ್ನು ಏಕಾಗ್ರಚಿತ್ತದಲ್ಲಿ ಧ್ರುವಕ್ಷೇತ್ರ. ಅವಗುಣ ಹೊರಗಲಾಡಿಸುವ ತಾಣ. ಸಮಾಜದಲ್ಲಿ ಸಾಮಾನತೆಯ ಭಾವ ಮಾಡಿಸುವ ಕೇಂದ್ರ ಸ್ಥಳ.

ವಿಶ್ವದಲ್ಲಿ ಸನ್ಯಾಸಿಗಳು, ಸಾಧುಗಳಾದವರು ಸಂಸಾರಿಕ ಜೀವನ ತ್ಯಾಗ ಮಾಡಿದ ವಿರಕ್ತರು,ತಮ್ಮ ನಿತ್ಯ, ನೇಮ, ಜಪ, ತಪ, ಆಚಾರ, ವಿಚಾರ, ಆಧ್ಯಾತ್ಮಿಕ ಚಿಂತನೆಗಳಿಗಾಗಿ ಪ್ರಶಾಂತ ಪವಿತ್ರ ಸ್ಥಳಗಳನ್ನು ಹುಡುಕಾಡಿ ನೇಮಕ ಮಾಡಿಕೊಳ್ಳುತ್ತಿದ್ದರು. ಅ ಸ್ಥಳಗಳಿಗೆ ಆಶ್ರಮ ಎಂಬ ಶಬ್ದವು ಉತ್ಪತ್ತಿಯಾಯಿತು. ಇಂತಹ ಆಶ್ರಮಗಳೇ ಮುಂದೆ ಕಾಲಾಂತರವಾಗಿ ಪರಿಣಮಿಸಿ ಮಠಗಳಾಗಿ ಪರಿವರ್ತನೆ (ವಿರಕ್ತ ಮಠ) ಗೊಂಡಿದ್ದವೆಂದು ಹೇಳಲಾಗಿದೆ. ''ಮಠವೆಂದರೆ ವಿದ್ಯೆಯಾಗರ ಕೆಲವಂತೂ ಒಳ್ಳೆಯ ವಿಶ್ವವಿದ್ಯಾಲಯದಂತೆ ಇದ್ದು,ಅಲ್ಲಿ ಅಧ್ಯಯನ ಅಧ್ಯಪನ ಹಾಗೂ ಪ್ರಕಾರಗಳು ನಿರಂತರವಾಗಿ ನಡೆಯುತ್ತವೆ.''[೧] ''ಕನೂನಿನ ವ್ಯವಹಾರದಲ್ಲಿಮಠ ವೆಂದರೆ ಆತ್ಮ. ವಿದ್ಯೆಯಲ್ಲಿ ಸಾಧನೆಯನ್ನು ಗಳಿಸಿದ ಒಬ್ಬ ಮಹಾವ್ಯಕ್ತಿಯ ಹಿರಿತನದಲ್ಲಿ ನಡೆಯುವ ಒಂದು ಧಾರ್ಮಿಕ ಸಂಸ್ಥೆ. ಅದು ಒಂದು ವಿಶಿಷ್ಟ ಪಂಗಡಕ್ಕೆ ಸೇರದ, ನೈಷ್ಟಿಕದ ಅನು ಕೂಲಕ್ಕಾಗಿ ಸ್ಥಾಪಿತವಾದದ್ದು. ಇವರು ಅಂಥ ಮಠದ ಅಧಿಪತಿಯ ಶಿಷ್ಯರಾಗಿ ಆಧ್ಯಾತ್ಮಿಕ ವಿದ್ಯೆಯ ಜಿಜ್ಞಾಸುಗಳಾಗಿರುತ್ತಾರೆ''.[೨] ಈ ಅರ್ಥವನ್ನು ಸಮರ್ಪಕವಾಗಿ ಆಲೋಚಿಸಿದಾಗ, ಮಠ ಮತ್ತು ಮಠಾಧಿಪತಿಗಳು ಒಂದು ನಾಣ್ಯದ ಎರಡು ಮುಖಗಳಿದ್ದಂತೆ ಸಂಬಂಧವಿರುತ್ತದೆ. ಮಠವನ್ನು ಹೊ ರತು ಪಡಿಸಿ ಮಠಾಧೀಶರು ಯಾವುದೆ ನೈತಿಕ ಧಾರ್ಮಿಕ ಕಾರ್ಯ ಮಾಡುವಂತಿಲ್ಲ.

ಖ್ಯಾತ ವಿದ್ವಾಂಸರಾದ ಆಪ್ಟೆ ಅವರು ತಮ್ಮ ಸಂಸ್ಕೃತ ಹಿಂದಿ ಕೋಶದಲ್ಲಿ ಹೇಳಿರುವಂತೆ, ಸನ್ಯಾಸಿಯ ಕೊಠಡಿ, ಸಾಧಕರ ಕುಟೀರ, ವಿಹಾರ, ಶಿಕ್ಷಾಲಯ, ವಿದ್ಯಾಮಂದಿರ, ಮಹಾವಿದ್ಯಾಲಯ, ಜ್ಞಾನಪೀಠ ದೇವಾಲಯ, ಮಂದಿರ..... ಇತ್ಯಾದಿ ಅರ್ಥ ಹೇಳುತ್ತಾರೆ. ''ಮಠ ಶಬ್ದವನ್ನು ಆಂಗ್ಲ ಭಾಷೆಯಲ್ಲಿ ಮೋನೆಸ್ಟರಿಸ (Monesterise) ಎಂದು ಕರೆಯುತ್ತಾರೆ. ಇಂಗ್ಲೀಷ ಶಬ್ದದ ಮೂಲವಾದ ಗ್ರೀಕ ಶಬ್ದವನ್ನು ಪರಿಶೀಲಿಸಿದರೆ,ಏಕಾಂತತೆ ಅಥವಾ ವಿವಿಕ್ತೆ ಪ್ರಪಂಚದ ಬಂದನಗಳಿಂದ ಹೊರತಾಗಿ,ಏಕಾಗ್ರ ಚಿತ್ತದಿಂದ ಧ್ಯಾನದಲ್ಲಿ ನಿರತವಾಗಲೂ ಏಕಾಂತತೆಯ ಅಗತ್ಯವೆಂಬ ಭಾವನೆ ಎಲ್ಲಾ ಧರ್ಮಗಳಲ್ಲಿಯೂ ಮೂಡಿ ಬಂದಿದೆ. ''ಮಠದಲ್ಲಿರುವ ಯತಿಗಳು ಪ್ರಾಪಂಚಿಕ ಜೀವನದಿಂದ ಹೊರಗಿದ್ದರೂ, ಸನ್ಯಾಸಿಗಳ ಸಾಮಾಜಿಕ ಸಂಬಂಧಗಳಿದ್ದವೆಂಬುದನ್ನು ಮರೆಯಬಾರದು''.[೩]

ಪಾಶ್ಚಿಮಾತ್ಯ ವಿದ್ವಾಂಸ ಮೆಕಡೊನೆಲ್ ತನ್ನ ಸಂಸ್ಕೃತ ಕೋಶದಲ್ಲಿ ಮಠದ ಪರಿಭಾಷೆಯನ್ನು ಹೇಳುವಾಗ,ಬೈರಾಗಿ ಅಥವಾ ವಿದ್ಯಾರ್ಥಿಗಳ ವಾಸಸ್ಥಾನ. ಧಾರ್ಮಿಕ ವಿಷಯಗಳ ಅಧ್ಯಯನ ಕೇಂದ್ರ, ಅಥವಾ ಗುರುಕುಲವೆಂದು ತಿಳಿಸುತ್ತಾರೆ. ಮಠವೆಂದರೆ ಕೇವಲ ಒಂದು ಭವ್ಯ ಕಟ್ಟಡ ಮಾತ್ರವಲ್ಲ,

ಅದೊಂದು ಧಾರ್ಮಿಕ ಸೌಧವಾಗಿ, ಸಮಸ್ತ ಸಮಾಜವೇ ಸಾಂಘಿಕವಾಗಿ, ವಿಕಾಸಗೊಳ್ಳುವಂತೆ ಮಾಡುವ ಪೂಜಾ ಗ್ರಹ ಎನ್ನಬಹುದು. ''ಮಠಗಳು ಮಾನವ ಕುಲದ ನಂದಾದೀಪಗಳು ಮಠಗಳಿಂದಲೇ ಭಾರತದ ಸಂಸ್ಕೃತಿ ಉಳಿದಿರುವುದು, ಎಂದು ಭಾರತದ ಪ್ರಥಮ ರಾಷ್ಟ್ರಪತಿಯಾದ ಡಾ. ರಾಜೇಂದ್ರ ಪ್ರಸಾದ ಅವರು ಹುಬ್ಬಳ್ಳಿಯ ಮೂರು ಸಾವಿರ ಮಠಕ್ಕೆ ಆಗಮಿಸಿ ಹೇಳಿದ ಮಾತು''[೪] ಪೂಜಾ ಸ್ಥಾನವಾಗಿರುವ ದೇವಾಲಯಗಳ ರಚನೆ ಅಗಮ ಅನುಸಾರವಾಗಿರುತ್ತದೆ. ಸಾಮಾನ್ಯವಾಗಿ ದೇವಾಲಯಕ್ಕೆ ಗರ್ಭಗ್ರಹ ಅರ್ಧಮಂಟಪ, ಮಹಾಮಂಟಪ, ಸ್ನಾನ ಮಂಟಪ, ಅಲಂಕಾರ ಮಂಟಪ ಇತ್ಯಾದಿಗಳಿರುತ್ತವೆ''.[೫] ಇದು ಧಾರ್ಮಿಕ ಐತಿಹ್ಯಗಳಾದ ಮಠ ಮಂದಿರಗಳ ಸಂಬಂಧವನ್ನು ಹೊಂದಿರುತ್ತವೆಂದು ಸ್ಪಷ್ಟವಾಗುತ್ತದೆ.

ಇಲ್ಲಿ ಧರ್ಮ ಎಂಬ ಪದಕ್ಕೆ ಆಂಗ್ಲ ಭಾಷೆಯಲ್ಲಿ ''ರಿಲಿಜನ'' ಎಂಬ ಪದವಿದೆ. ಈ ಪದದ ಮೂಲ ಪರಿಶೀಲಿಸಿದರೆ, ನಮಗೆ ಧರ್ಮದ ತಿರುಳು ಗೊತ್ತಾಗುತ್ತದೆ. ರಿಲಿಜನ ಎಂಬ ಆಂಗ್ಲ ಪದವು ಲ್ಯಾಟಿನ ಭಾಷೆಯ ''ರೆಲಿಗಾರ'' ಎಂಬ ಪದದಿಂದ ಬಂದದ್ದು. ಈ ಪದದ ಅರ್ಥ ಪರಸ್ಪರ ಬಂದಿಸುವುದು, ಅಥವಾ ಸೇರಿಸಿ ಕಟ್ಟುವುದು, ಧರ್ಮದ ಪ್ರಭಾವದಿಂದ ಹೀಗೆ ಸೇರಿಕೊಂಡವರು. ತಮ್ಮ ಜೀವನದ ಸುಖ ಸಂತೋಷ ಮತ್ತು ದುಃಖ ಗಳಲ್ಲಿ ಪರಸ್ಪರ ಭಾಗಿಗಳಾಗಿರುತ್ತಾರೆ. ಆದ್ದರಿಂದಲೇ ವಿವಿಧ ನೀತಿ ನಿಯಮಗಳು ಧರ್ಮದ ಅವಿಭಾಜ್ಯ ಅಂಗಗಳೆಂದು ಎಲ್ಲಾ ಧರ್ಮಗಳು ಒಪ್ಪಿವೆ''.[೬] ಧರ್ಮದ ಹೆಸರಿನಲ್ಲಿ ಹುಟ್ಟಿಕೊಂಡ, ಕಟ್ಟಿಕೊಂಡ ಮಠಗಳು, ಸಮಾಜದಲ್ಲಿ ಸಂಸ್ಕೃತಿಯ ಪ್ರಕಾರ ಮನೋಧರ್ಮವನ್ನು ಸರ್ವತೋಮುಖ ಬೆಳವಣಿಗೆಗಾಗಿ ಪ್ರಯತ್ನ ಪಡುತ್ತಿವೆ.

ಮಠ ಎಂಬ ಶಬ್ದಕ್ಕೆ ವಿವಿದ ವಿದ್ವಾಂಸರು, ವಿವಿಧ ದೃಷ್ಟಿಯಿಂದ ಅವಲೋಕಿಸಿದನ್ನು ಗಮನಿಸಿದಾಗ ಮಠಗಳು ಸಮಾಜದ ಸೇವೆಗಾಗಿಯೇ ಜನ್ಮ ತಾಳಿವೆ. ಸಮಾಜದ ಜನರ ಭವಿಷ್ಯವನ್ನು ಉನ್ನತದಡೆಗೆ ಕರೆದೊಯ್ಯುವ ಕೇಂದ್ರ ಬಿಂದುಗಳಾಗಿವೆ. ಧರ್ಮದ ರಕ್ಷಣೆಯನ್ನು ಮೂಲವಾಗಿಟ್ಟುಕೊಂಡು, ವಿದ್ಯಾ ಕೇಂದ್ರಗಳಾಗಿ, ಪವಿತ್ರ ಸ್ಥಳಗಳಾಗಿ ಜನರ ಚಂಚಲತೆಯನ್ನು ಹತೋಟಿಯಲ್ಲಿಡಲು ಪ್ರಯತ್ನಿಸುವುದಾಗಿದೆ. ಧಾರ್ಮಿಕ ಹಾಗೂ ಅಧ್ಯಾತ್ಮಿಕತೆಯ ತಾಣವಾಗಿವೆ.

೨. ಮಠಗಳ ಉಗಮ

ಒಂದು ಶಬ್ದದ ಅರ್ಥ ಕಂಡು ಹಿಡಿಯುವುದು ಸುಲಭ. ಆದರೆ ಅದರ ಮೂಲ ಸ್ವರೂಪ ಕಂಡುಹಿಡಿಯುವುದು ಸ್ವಲ್ಪ ಕಷ್ಟವಾದುದು. ಆದಿ ಕಾಲದಲ್ಲಿಯೂ, ಸಾಧು ಸತ್ಪುರುಷರು ಸನ್ಯಾಸಿಗಳಿದ್ದರು.

ಅವರು ಸಮಾಜದಲ್ಲಿ ಜನರ ಸೇವಕರಾಗಿ ಅವರಲ್ಲಿ ಮೂಡಿರುವ ಅಂಧಕಾರ ಕಲ್ಮಷಗಳನ್ನು ಕಿತ್ತೊಗೆಯಲು ಪ್ರಯತ್ನಿಸುತ್ತಿದ್ದರು. ಧರ್ಮ ಜ್ಞಾನಿಗಳಾಗಿ ಧರ್ಮೋಪದೇಶ ಮಾಡುತ್ತ ''ಹಳ್ಳಿಗೆ ಏಕ ರಾತ್ರಿ ಪಟ್ಟಣಕ್ಕೆ ಪಂಚ ರಾತ್ರಿ'' ಯೆಂದು ಸಂಚಾರ ಮಾಡುತ್ತಿದ್ದರು. ಇವರಿಗೆ ಯಾವುದೇ ರೀತಿಯ ನೆಲೆಗಳಿರಲಿಲ್ಲ, ಆಶೆಗಳಿರಲಿಲ್ಲ. ಅವರವರ ಧರ್ಮಾಭಿಮಾನಿಗಳು ಊಟ ಬಟ್ಟೆಗಳ ವ್ಯವಸ್ಥೆ ಮಾಡುತ್ತಿದ್ದರು. ವಸತಿಗಾಗಿ ಒಂದು ಹುಲ್ಲಿನ ಗುಡಿಸಲು ಕಟ್ಟಿ ಕೊಡುತ್ತಿದ್ದರು. ಈ ಗುಡಿಸಲುಗಳಿಗೆ ಜನರು ಮೊಟ್ಟಮೊದಲು ''ಆಶ್ರಮ'' ಎಂದು ಕರೆಯುತ್ತಿದ್ದರು. ನಿಸ್ವಾರ್ಥತೆಯಿಂದ ಜನರ ಸೇವೆಗೆ ಕಂಕಣಬದ್ಧರಾದ ಸ್ವಾಮಿಗಳ ಆಶ್ರಮಕ್ಕೆ ವಸತಿ, ಮಠ, ಗಳೆಂಬ ಸ್ವರೂಪ ಪಡೆದವು.

''ಮಠಗಳು ಜೈನ, ವೀರಶೈವ, ವೈಷ್ಣವ ಯಾವುದೇ ಮತ ಧರ್ಮದವರು ಹೊಂದಿದ ಧಾರ್ಮಿಕ ಕೇಂದ್ರಗಳಾಗಿದ್ದರೂ, ಈ ಭಾಗದ ಅಲ್ಲದೆ ಇತರೆಡೆ ಶಾಸನಗಳ ಆಧಾರದಿಂದ, ಮಧ್ಯಕಾಲಿನ ಕರ್ನಾಟಕ ಶಾಸನದಲ್ಲಿ ಶೈವ ಧರ್ಮದ ಮಠ ಮುಖ್ಯವಾಗಿ ಕಾಳಾಮುಖ, ಪಾಶುಪತ, ಲಾಕುಲೀಶರ ಕೇಂದ್ರಗಳು ಹೆಚ್ಚು ಪ್ರಸಿದ್ಧವಾಗಿರುವುದುಂಟು. ಕೋಡಿ ಮಠ ಇದಕ್ಕೆ ಉಲ್ಲೇಖವಿದೆ''.[೭] ಮಠ ಎನ್ನುವ ಪದದ ಉಲ್ಲೇಖವನ್ನು ಪ್ರಪ್ರಥಮವಾಗಿ ಬೌದ್ಧ ಸಾಹಿತ್ಯದಲ್ಲಿ ಕಂಡು ಬರುತ್ತದೆ. ಅಶ್ವಘೋಷ (೩ನೇ ಶತಮಾನ) ತನ್ನ ಬುದ್ಧ ಚರಿತದಲ್ಲಿ ಮಠದ ಬಗ್ಗೆ ಹೀಗೆ ಹೇಳಿದ್ದಾನೆ.

''ಬ್ರಹ್ಮಘೋಷೊಭವೆತ್ ಯತ್ರ ಬ್ರಹ್ಮಾಗ್ರಯಿಸಿಡಿತದೆವನ ಪೂಜನಂ ದಾನಂ ಮಠ ಮಿತ್ರಭಿವೀಯತೆ'' ಎಲ್ಲಿ ವೇದಾಧ್ಯಯನ ದೇವ ಪೂಜೆ ದಾನ ಧರ್ಮಾದಿ ಪರೋಪ ಕಾರ್ಯಗಳು ನಡೆಯುತ್ತವೆಯೋ ಅಲ್ಲದೆ ಬ್ರಹ್ಮಜ್ಞಾನಗಳಾದ ಸನ್ಯಾಸಿಗಳಿಗೆ ಆಶ್ರಯ ತಾಣವೋ ಅದುವೆ ಮಠ ''.[೮] ದ ಸ್ವರೂಪವೆಂದು ಗ್ರಹಿಸುತ್ತದೆ.

''ಭಾರತದಲ್ಲಿ ಮಠಗಳ ಕಲ್ಪನೆ ಅಷ್ಟು ಪ್ರಾಚೀನವಾದುದಲ್ಲ. ವೇದೋಪನಿಷತ್ತುಗಳ ಕಾಲದಲ್ಲಿ ಆಶ್ರಮಗಳಿದ್ದವು. ಗುರುಕುಲಗಳಿದ್ದವು. ಯಾತ್ರಿಕರಿಗಾಗಿ ಧರ್ಮ ಛತ್ರದ ನಿವಾಸಗಳಿದ್ದ ಉಲ್ಲೇಖಗಳು ದೊರೆಯುತ್ತವೆ''.[೯] ಸಂಚಾರ ಮಾಡುವ ಸ್ವಾಮಿಗಳಿಂದ ಆಶ್ರಮಗಳು ಹುಟ್ಟಿ ಮಠವೆಂದು ಬೆಳಕಿಗೆ ಬಂದವು. ಕ್ರಿ.ಶ. ೫ ಮತ್ತು ೬ನೇ ಶತಮಾನದಲ್ಲಿ ಬೌದ್ಧ ವಿಹಾರಗಳು ವಿದ್ಯಾಕೇಂದ್ರಗಳಾಗಿ ಆಶ್ರಮದಂತೆ ಇದ್ದಿರಬಹುದು. ''ಪ್ರಾರಂಭದಲ್ಲಿ ಬೌದ್ಧ ಸನ್ಯಾಸಿಗಳಿಗೆ ಎರಡು ಮೂಲ ನೀವೆಶನಗಳಿರುತ್ತಿದ್ದವು. ಒಂದು ಅವಾಸ ಇನ್ನೊಂದು ಆರಾಮ ಗ್ರಾಮೀಣ ಪ್ರದೇಶದಲ್ಲಿ ಸನ್ಯಾಸಿಗಳು ಕಟ್ಟಿಕೊಂಡು ವಾಸ ಮಾಡುತ್ತಿದ್ದ

ಸ್ಥಳಗಳೇ ''ಅವಾಸ'' ಎಂದು ಕರೆಯುತ್ತಿದ್ದರು. ಶ್ರೀಮಂತ ಶಿಷ್ಯರು ನಗರದ ಒಳಹೊರಭಾಗದಲ್ಲಿ ಭಿಕ್ಷುಗಳಿಗೆ ದಾನ ನೀಡಿದ ಸ್ಥಳಗಳೇ ಆರಾಮ. ಈ ಅರಾಮಗಳಲ್ಲಿ ವಿಹಾರಗಳನ್ನು ಕಟ್ಟಿಕೊಂಡು ಭಿಕ್ಷುಗಳು ವಾಸಿಸುತ್ತಿದ್ದರು. ವಿಹಾರದ ದುರಸ್ತಿ ಜವಾಬ್ದಾರಿ ಧಾನಿಗಳದೆ ಆಗಿರುತ್ತಿತ್ತು. ನಂತರ ಇದು ಸನ್ಯಾಸಿ ಮಠಕ್ಕೆ ಅನ್ವಯವಾಗತೊಡಗಿತ್ತು. ಆರಾಮ ಎಂಬುದು ಒಂದು ''ವನ'' ಹಣ್ಣಿನ ಅಥವಾ ಹೂವಿನ ತೋಟವಾಗಿರುತ್ತಿತ್ತು. ಇದನ್ನು ಬೌದ್ಧರು ''ಸಂಘರಾಮ'' ಎಂದು ಕರೆಯುತ್ತಿದ್ದರು. ನಂತರ ಇದು ವಿಶ್ವವಿದ್ಯಾಲಯ ನೀವೇಶನ (campus) ಎನ್ನುವ ಹೆಸರು ಪಡೆದು ಸನ್ಯಾಸಿಗಳ ಸಮೂಹ ವಾಸಿಸುವ ವಿಶಾಲ ಮಠವೆಂದು ಹೆಸರಾಗುತ್ತದೆ''.[೧೦] ಬೌದ್ಧಧರ್ಮದ ನವೋದಯದ ಕಾಲಕ್ಕೆ ಸನ್ಯಾಸಿ ಮಠಗಳು ಕಾಳಾಮುಖ ಲಕು ಲೀಶರ, ಶೈವ ಮಠಗಳು ಅಸ್ತಿತ್ವದಲ್ಲಿದ್ದ ವಿಶಿಷ್ಟ ಬಗೆಯ ಸಂಕೇತಗಳಿವೆ. ''ಮಠ ಇಲ್ಲವೆ ಸಾನ್ಯಸಿಗಳ ನಿವಾಸಕ್ಕೆ ಬೌದ್ಧರು ವಿಹಾರ ಇಲ್ಲವೆ ಸಂಘ ಎನ್ನುತ್ತಿದ್ದರು. ವಿಹಾರವೆಂದರೆ ಸನ್ಯಾಸಿಗಳ ನಿವಾಸವಷ್ಟೇ ಅಲ್ಲ ಒಂದು ದೇವಾಲಯವೆಂದು ಅರ್ಥವಾಗುತ್ತದೆ''.[೧೧] ಪ್ರಾಚೀನ ಕಾಲದಲ್ಲಿ ಸನ್ಯಾಸಿಯ ಕೂಟೀರ, ಆಶ್ರಮ ಹಾಗೂ ಸನ್ಯಾಸಿಗಳ ವಾಸಸ್ಥಳಕ್ಕೆ ಮಂದಿರಗಳಿಗೆ ಬೌದ್ಧರು ಮಠವೆಂದು ಕರೆಯುತ್ತಿದ್ದರೆಂದು ಮನವರಿಕೆಯಾಗುತ್ತದೆ.

ಬೌದ್ಧಧರ್ಮದ ಸಮಕಾಲಿನ ಜೈನ ಧರ್ಮದ ಮಠಗಳು ಹುಟ್ಟಿದ ಉಲ್ಲೇಖಗಳು ಕಂಡು ಬರುತ್ತವೆ. ಮಹಾವೀರನಿಗೆ ಶ್ರಮಣ ಭಿಕ್ಷುಗಳೊಂದಿಗೆ ಶ್ರಮಣ ಭಿಕ್ಷುಣಿಯರು ಅಪಾರ ಸಂಖ್ಯೆಯಲ್ಲಿದ್ದರು. ಹನ್ನೆರಡು ಜನ ಮುಖ್ಯ ಶಿಷ್ಯರು. ಅವರಿಗೆ ''ಗಣಧಾರ'' ಎಂದು ಹೆಸರು ಜೈನರು ಉತ್ತರ ಭಾರತದ ನಾನಾ ಭಾಗಗಳಲ್ಲಿ ಜೈನ ಸನ್ಯಾಸಿ ಹಾಗೂ ಸನ್ಯಾಸಿಯರಿಗೆ ವಿಹಾರ (ಮಠ) ಚೈತ್ರ ಗುಹೇಗಳೆಲ್ಲದರ ನಿರ್ಮಾಣ ಮಾಡಿದರು''. ಉಜ್ಜಯನಿ, ಮಥುರಾ, ಉದಯಗಿ ರಿ, ಎಲ್ಲೋರಾ ಇಂದ್ರ ಸಭಾ, ಅಭುಪರ್ವತ, ಗಿರಿನಾರ, ವಿಶ್ವನಾಥವೆಡ್ಸ ಜೋದಪೂರ, ಶ್ರವಣ ಬೆಳಗೊ ಳ. ಇತ್ಯಾದಿ ಸ್ಥಳಗಳಲ್ಲಿ ಜೈನರ ಮಠಗಳು ಕಾಣಬಹುದು''.[೧೨] ಬೌದ್ಧರ ಸಂಘರಾಮ, ವಿಹಾರ ಆರಾಮ, ಅವಾಸ, ಅಲ್ಲವೆ ಜೈನರ ಚೈತ್ರ ವಿಹಾರಗಳು ಹಿಂದು ಸಂಪ್ರದಾಯದ ಮಠಗಳ ಸ್ಥಾಪನೆಗೆ ಪ್ರೇರಣೆ ದೊರೆತಿರುವುದು ತಿಳಿದು ಬರುತ್ತದೆ.

ಭಾರತ ದೇಶದ ನಾಲ್ಕು ಮೂಲೆಗಳಲ್ಲಿ ಸ್ಥಾಪಿತವಾದ ಹಿಂದು ಮಠಗಳು ಭಾರತದ ಬೌದ್ಧಿಕ ಮತ್ತು ಅಧ್ಯಾತ್ಮಿಕ ಏಕತೆಗೆ ನಾಂದಿಯಾಗಿದೆ. ಭಾರತದ ಸಾಂಸ್ಕೃತಿಕ ಏಕತೆಯ ಕಲ್ಪನೆಯನ್ನು ವೃದ್ಧಿಗೊಳಿಸುವ ಶಂಕರರ ಬಯಕೆಗೆ ಅವರ, ಉತ್ತರ, ದಕ್ಷಿಣ,ಪೂರ್ವ, ಪಶ್ಚಿಮದ ಮಠಗಳು ಸಾಕ್ಷಿಭೂತವಾಗಿವೆ. ಮೇಲು ಕೋಟೆಯಲ್ಲಿ

ನೆಲೆಸಿದ ರಾಮಾನುಜರು ಇಲ್ಲಿ ವೈಷ್ಣವ ಮಠಗಳು ಸ್ಥಾಪಿಸಿ ಸುಮಾರು ಹನ್ನೆರಡು ವರ್ಷಗಳ ಕಾಲ ಆದರ ಪ್ರಗತಿಗಾಗಿ ಶ್ರಮಿಸಿದರು. ಎಂಬುದು ವಿದ್ವಾಂಸರ ಅಭಿಮತ. ಇವರ ತರುವಾಯ ಬರುವ ಮದ್ವಾಚಾರ್ಯರು ಶ್ರೀ ಕೃಷ್ಣನ ಪೂಜೆಗಾಗಿ ಏಂಟು ಮಠಗಳನ್ನು ಸ್ಥಾಪಿಸಿದ್ದರು. ೧) ಸೊದೆ ಮಠ ೨) ಶಿರೂರ ಮಠ ೩) ಕಣ್ಣುರ ಮಠ ೪) ಪೇಜಾವರ ಮಠ ೫) ಫಲಿಮಾರು ಮಠ ೬) ಅದಮೂರು ಮಠ ೭) ಕೃಷ್ಣಪೂರ ಮಠ ೮) ಪುತ್ತಿಗೆ ಮಠ. – ಹೀಗೆ ಈ ಏಂಟು ಮಠಗಳು ಶ್ರೀ ಕೃಷ್ಣನ ಏಂಟು ಮಡದಿಯರ ಸಂಕೇತವಾಗಿ ಸ್ಥಾಪಿತವಾಗಿವೆ. ಆರಂಭದಲ್ಲಿ ಮೂರು ವಾರಗಳ ಪರ್ಯಾಯ ಪದ್ಧತಿಯಿಂದ ಈ ಮಠದ ಸ್ವಾಮಿಗಳು ಶ್ರೀ ಕೃಷ್ಣದೇವಾಲಯದ ಪ್ರಧಾನ ಅರ್ಚಕರಾಗುತ್ತಿದ್ದರು''. [೧೩]ಶ್ರೀ ಶಂಕರಚಾರ್ಯರು ದೇಶದ ನಾಲ್ಕು ದಿಕ್ಕುಗಳಲ್ಲಿ ಸ್ಥಾಪಿಸಿದ ನಾಲ್ಕು ಮತಗಳ ಮಠಗಳು ಕೆಳಗಿನಂತಿವೆ.

| ಕ್ರಮ. ಸಂಖ್ಯೆ. | ಸ್ಥಳ | ರಾಜ್ಯ | ಮಠ | ಪ್ರ. ಗುರು | ವೇದ ಪರಂಪರೆ |
|---|---|---|---|---|---|
| ೧ | ಪೂರ್ವಪೂರಿ | ಓರಿಸ್ಸಾ | ಗೋವರ್ಧನ | ಪದ್ಮನಾಮ | ಋಗ್ವೇದ |
| ೨ | ಪಶ್ಚಿಮದ್ವಾರಕ | ಗುಜರಾತ | ಕಾಳಿಕಾಮಠ | ಹಸ್ತಾಮಲಕ | ಸಾಮವೇದ |
| ೩ | ಉತ್ತರ ಭದ್ರಿ | ಉತ್ತರ ಪ್ರದೇಶ | ಜ್ಯೋತಿರ್ಮಠ | ತೋಂಟದಾರ್ಯ | ಅಥರ್ವಣವೇದ |
| ೪ | ದಕ್ಷಿಣ ಶೃಂಗೇರಿ | ಕರ್ನಾಟಕ | ಶಾರದಾ ಪೀಠ | ಸುರೇಶಚಾರ್ಯ | ಯಜುರ್ವೆದ[೧೪]'' |

ಈ ಮೇಲಿನ ಮಠಗಳ ವಿವರವನ್ನು ಇತಿಹಾಸದ ದೃಷ್ಟಿಯಿಂದ ನೋಡಿದಾಗ ಹಿಂದು ಧರ್ಮದ ಆಧ್ಯಾತ್ಮಿಕ ಮಠಗಳು ಪುನರುದ್ಧಾರಕರಾದ ಶ್ರೀ ಶಂಕರಾಚಾರ್ಯರು ಆಗಿದ್ದರು. ಆದ್ದರಿಂದ ದೇಶದ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಮಠಗಳನ್ನು ಸ್ಥಾಪಿಸಿದರು.

ಭಾರತೀಯ ಜನ ಜೀವನದ ಮೇಲೆ ಆಗಮ ಸಾಹಿತ್ಯದ ಪ್ರಭಾವವು ಶ್ರೀ ಶಂಕರಾಚಾರ್ಯರು ಪ್ರಭಾವಕ್ಕಿಂತ ಪೂರ್ವದೆಂದು ತಿಳಿದು ಬರುತ್ತದೆ. ಗುರುಪೀಠ ಹಾಗೂ ವಿರಕ್ತ ಮಠಗಳ ಅಸ್ತಿತ್ವವನ್ನು ಆಗಮಗಳು ವಿಪುಲವಾಗಿ ಎತ್ತಿ ತೋರಿಸುತ್ತವೆ. ಮಹಾಭಾರತಕ್ಕಿಂತ ಪೂರ್ವದಲ್ಲಿಯೇ ಅಸ್ತಿತ್ವದಲ್ಲಿದ್ದ ಈ ಆಗಮಗಳು ಪಂಚಾಚಾರ್ಯರ, ಆಚಾರ್ಯರ ಪೀಠ ಸುಧೀರ್ಘ ವಿವರಗಳನ್ನು ಕೊಡುತ್ತವೆ. ರಂಭಾಪೂರಿ ರೇಣುಕಾಚಾರ್ಯ, (ಮೈಸೂರು) ಉಜ್ಜಯನಿಯ ದ್ವಾರಕಚಾರ್ಯ, ಹಿಮವತ್ಕೇದಾರದ ಏಕೋರಾಮಾಚಾರ್ಯ, ಶ್ರೀ ಶೈಲದ ಪಂಡಿತಾರಾಧ್ಯ (ಆಂಧ್ರಪ್ರದೇಶ) ಹಾಗೂ ಕಾಶಿಯ ವಿಶ್ವಾರಾಧ್ಯ

(ಉತ್ತರ ಪ್ರದೇಶ) ಈ ಪಂಚಾಚಾರ್ಯರು ಸ್ಥಾಪಿಸಿದ ಐದು ಆಧ್ಯಾತ್ಮಿಕ ಪೀಠಗಳು ಉರ್ಜಿತವಾಗಿದೆ. ಉಪಲಬ್ಧವಾದ ಸಾಹಿತ್ಯದ ಆಧಾರದಿಂದ ಈ ಐದು ಆಚಾರ್ಯರು ಐತಿಹಾಸಿಕ ವ್ಯಕ್ತಿಗಳೇ ಎಂಬುದನ್ನು ನಿಸ್ಸಂದೇಹವಾಗಿ ಹೇಳಬಹುದಾಗಿದೆ. ಹೀಗಿರುವಲ್ಲಿ ಶಂಕರಾಚಾರ್ಯರಿಗಿಂತ ಪೂರ್ವದಲ್ಲಿಯೇ ಪಂಚಾಚಾರ್ಯ ಪೀಠಗಳು ಸ್ಥಾಪನೆಯಾಗಿರುವಾಗ, ಶಂಕರಚಾರ್ಯರು ಹಿಂದು ಅಧ್ಯಾತ್ಮಿಕ ವಿದ್ಯಾಪೀಠಗಳ ಆದ್ಯ ಪ್ರವರ್ತಕರಲ್ಲ ಎಂಬುದನ್ನು ತಿಳಿದು ಬರುತ್ತದೆ''. [೧೫] ಜಗದ್ಗುರು ಪಂಚಾಚಾರ್ಯರಿಂದ ಉಜ್ಜಯನಿ, ಸದ್ಧರ್ಮ ಸಿಂಹಾಸನ, ಮಳಿವಗ್ಗಿ, ವೃಷ್ಣಸೂತ್ರ, ನಂದಿಗೋತ್ರ, ಗಳೆಂಬ ಐದು ಪೀಠಗಳನ್ನು ಒಳಗೊಂಡಿದ್ದು ಉಜ್ಜಯನಿ ರಂಭಾಪುರಿ, ಹೀಮವತ್ಕೆದಾರ ಶ್ರೀ ಶೈಲ ಕಾಶಿಗಳೆಂಬ ಐದು ಪವಿತ್ರ ಕ್ಷೇತ್ರಗಳಲ್ಲಿ ಮಠಗಳನ್ನು ಉದಯಿಸಿದವೆಂಬ ಮಾತು ಸತ್ಯವಾಗಿದೆ.

ಎಂಟನೇ ಶತಮಾನದ ಕೊನೆಯವರಗೂ ಜೈನ, ಧರ್ಮ, ಸನ್ಯಾಸಿಗಳಲ್ಲದೆ ಕಾಳಾಮುಖರು, ಕಾಪಾಲಿಕರು, ಪಾಶುಪತರು ಮೊದಲಾದ ವಿವಿಧ ಪಂಥಗಳಿಗೆ ಸೇರಿದ ಸನ್ಯಾಸಿಗಳಿದ್ದರು. ಕಾಪಾಲಕರು, ಪಾಶುಪತರು, ಶಿವಾಲಯಗಳಲ್ಲಿ ವಾಸಿಸುತ್ತಿದ್ದರು. ಆದರೆ ಮಠಗಳ ಅಗತ್ಯವನ್ನು ಗ್ರಹಿಸಿ ಭಾರತ ದೇಶದ ನಾಲ್ಕು ದಿಕ್ಕುಗಳಲ್ಲಿ ಮಠಗಳನ್ನು ಸ್ಥಾಪಿಸಿದ ಯಶಸ್ಸು ಶ್ರೀ ಶಂಕರಚಾರ್ಯರಿಗೆ ಸಲ್ಲುತ್ತದೆ. ಹಿಂದೂ ಧರ್ಮದ ಹೆಸರಿನಲ್ಲಿ ಕಾಣಿಸಿಕೊಂಡಿದ್ದ ಕೆಟ್ಟ ಪದ್ದತಿಯನ್ನು ನಿವಾರಿಸುವುದಲ್ಲದೆ, ಹಿಂದೂ ಧರ್ಮದ ತತ್ವಗಳನ್ನು ಜನರಿಗೆ ತಿಳಿಸಲು ಅನೇಕ ಸ್ಥಳಗಳಲ್ಲಿ ಮಠಗಳು ಸ್ಥಾಪಿತವಾದವು. ದ್ವಾರಕಪುರಿ, ಭದರಿ, ಶೃಂಗೇರಿ, ಹರಿದ್ವಾರ, ಭೃಂದಾವನ, ಪ್ರಯಾಗ ಕಾಶಿ ಮುಂತಾದ ಸ್ಥಳಗಳಲ್ಲಿ ಮಠಗಳು ಸ್ಥಾಪಿತವಾದವು. ಮಠದ ಮುಖ್ಯಸ್ಥರಿಗೆ ಸ್ವಾಮಿ ಅಥವಾ ''ಮಹಾಂತ'' ಎಂದು ಕರೆಯುತ್ತಿದ್ದರು. ಜೋಗೇಂದ್ರ ಚಂದ್ರ ಘೋಷರು ತಿಳಿಸಿರುವಂತೆ ಬೌದ್ಧ ಧರ್ಮದ ಮಾದರಿಯ ಮೇಲೆ ಮಠಗಳು ಸ್ಥಾಪಿತವಾದವು. ಇಂಡಿಯಾ ದೇಶದ ಮಧ್ಯಮ ಯುಗದಲ್ಲಿ ದೇವಸ್ಥಾನಗಳು, ಮಠಗಳು, ಜ್ಞಾನ ಪ್ರಸಾರದ ಕೇಂದ್ರಗಳಾಗಿದ್ದವು. ವಿದ್ಯಾಕೇಂದ್ರಗಳಾಗಿದ್ದವು. ವಿದ್ಯೆಯಲ್ಲವು ಬಹುತೇಕವಾಗಿ ಧಾರ್ಮಿಕ ವಿಚಾರಣೆಗಳಿಗೆ ಸೀಮಿತವಾಗಿರುತಿತ್ತು. ''ಮಠಗಳ ಕಾರ್ಯಗಳು ಪ್ರಮುಖವಾಗಿ ಎರಡು. ಒಂದು ಪರಂಪರೆಗತವಾಗಿ ಬಂದ ಹಿಂದೂ ಧರ್ಮದ ವಿವಿಧ ಉದ್ಗ್ರಂಥಗಳ ಅಧ್ಯಯನ. ಎರಡನೆಯದಾಗಿ ಹಿಂದೂ ಧರ್ಮದ ತತ್ವಗಳ ವ್ಯವಸ್ಥಿತ ಪ್ರಸಾರ ಇಲ್ಲವೆ ಮಠಕ್ಕೆ ಬಂದ ಅತಿಥಿಗಳನ್ನು ಸತ್ಕರಿಸುವ ಸಂಪ್ರದಾಯ ಕಾಣಬರುತ್ತದೆ''. [೧೫]

ಕ್ರಿ.ಶ. ಆರನೇ ಶತಮಾನದಿಂದಲೇ ಶಿಕ್ಷಣ ಕ್ಷೇತ್ರದಲ್ಲಿ ಕಾಣಿಸಿಕೊಂಡ ಮಠಗಳು ಕ್ರಿ. ಶ. ಹತ್ತನೆ ಶತಮಾನದಿಂದ ಹದಿಮೂರನೆ ಶತಕದ ಅವಧಿಯಲ್ಲಿ ಕಾಳಮುಖ ಶೈವ ಮತದ ಉಚ್ರಾಯಕಾಲದಲ್ಲಿ ಹೆಚ್ಚಿನ ಮಹತ್ವ ಪಡೆದವು. ಜೈನ ಧರ್ಮಕ್ಕೆ ಸೇರಿದ ಮಠಗಳು ಈ ಕಾಲಾವಧಿಯಲ್ಲಿ ಇದ್ದವು. ಇವುಗಳಿಗೆ ರಾಜಾಶ್ರಯವು ಇದ್ದ ಉಲ್ಲೇಖಗಳಿವೆ. ಕದಂಬ ಅರಸು ಬೋಪ್ಪದೇವರು ಜೈನ ಮಠವೊಂದರ ನಿರ್ವಹಣೆಗಾಗಿ ಭೂಮಿಧಾನ ಮಾಡಿದನೆಂಬುದಾಗಿ, ಶಿಕಾರಿಪೂರ ತಾಲೂಕಿನ ಚಿಕ್ಕ ಮಾಗಡಿಯ ದಾಖಲೆಯಿಂದ ತಿಳಿದು ಬರುತ್ತದೆ ಈ ಮಠದ ಅಧಿಪತಿಗಳು ಮಹಾವಿದ್ವಾಂಸರಾಗುತ್ತಿದ್ದರು. ಚಿಕ್ಕ ಮಾಗಡಿಯ ಶಿಲಾಲಿಪಿಯಿಂದ ಚಾಂದವಪೂರ ದೇವಾಲಯಕ್ಕೆ ಸೇರಿದ ಮಠದ ಅಧಿಪತಿಯಾದ, ಶಿವಚಾರ್ಯಭಾನುಕೀರ್ತಿ ಸಿದ್ದಾಂತಿಯು ಘನ ವಿದ್ವಾಂಸನಾಗಿದ್ದನೆಂಬುದು ತಿಳಿದು ಬರುತ್ತದೆ ರಾಜ ಮನೆತನದವರು ಧನಿಕರೂ, ಉಳಿದ ಸಾರ್ವಜನಿಕರೂ ಈ ಮಠಗಳ ನಿರ್ವಹಣೆಗಾಗಿ ಉದಾರ ಸಹಾಯ ಸಲ್ಲಿಸುತ್ತಿದ್ದರು. ಕ್ರಿ.ಶ. ೧೦೧೮ ರಲ್ಲಿ ಚಾಲುಕ್ಯ ಇಮ್ಮಡಿ ಜಯಸಿಂಹನು ಬಳುಲಿಯ ದೇವಾಲಯಕ್ಕೆ ಸೇರಿದ ಮಠಗಳ ಅಧ್ಯಾಪಕರು ಹಾಗೂ ವಿದ್ಯಾರ್ಥಿಗಳ ಭೋಜನ ಇತ್ಯಾದಿಗಾಗಿ ಭೂಧಾನ ಮಾಡಿದರು. ಚಾಲುಕ್ಯ ಆರನೇ ವಿಕ್ರಮಾದಿತ್ಯನಿಗೆ ಸಂಬಂಧಿಸಿದಂತೆ ಒಂದು ಲಿಪಿಯಿಂದಲೂ ಇಂಥ ಒಂದು ನಿದರ್ಶನ ದೊರೆಯುತ್ತದೆ. ಲಕುಲೇಶ್ವರ ಪಂಡಿತನ ಮಠದ ಅಧ್ಯಾಪಕರಿಗಾಗಿ ಹಾಗೂ ವಿದ್ಯಾರ್ಥಿಗಳಿಗಾಗಿ ಈತನ ಕೊಟಿಗನೂರು ಹಳ್ಳಿಯನ್ನು ದಾನ ಮಾಡಿದನು. ರವಿಯಾಣಭಟ್ಟನೆಂಬ ದಂಡ ನಾಯಕನು ಯೇವೂರಿನಲ್ಲಿ ಒಂದು ಮಠವನ್ನು ಕಟ್ಟಿಸಿದನು. ವಿದ್ಯಾರ್ಥಿಗಳ ಅಧ್ಯಾಪಕರ ಊಟೋಪಚಾರಕ್ಕಾಗಿ ಆತನು ಸಹಾಯವನ್ನು ಸಲ್ಲಿಸಿದನು. ಶಿವಮೊಗ್ಗ ಜಿಲ್ಲೆಯ ಜಂಬೂರಿನ ಶಿಲಾಲೇಖನ ಈ ವಿಷಯದಲ್ಲಿ ಕುತುಹಲಕಾರಿಯಾದ ವಿವರಗಳನ್ನು ಕೊಡುತ್ತದೆ. ತಮ್ಮ ಮಠದ ''ಮಣಗಳ್ಗೆ ಉಪ್ಪು ಎಣ್ಣೆಗೆ ಗದ್ಯಾಣಂ ಪದಿನಾರು , ಕಪ್ಪಡಕ್ಕೆ ಗದ್ಯಾಣಂ, ಪನ್ನೆರಡು, ಉಪ್ಪಿನಕಾಯ್ಗೆ ಗದ್ಯಣಂ ಎರಡು - ಅಂತೂ, ಗದ್ಯಣಂ'' ಮನನ ಹಳ್ಳಿಯ ಶಾಸನವೊಂದರಲ್ಲಿಯೆ ಇಂಥ ಧಾನದ ವಿವರ ದೊರೆಯುತ್ತಿದ್ದು ಈ ಶಾಸನದಲ್ಲಿ ಆ ಮಠವು ಒಂದು ವಿದ್ಯಾಶಾಲೆ, ಶಿಕ್ಷಣ ಸಂಸ್ಥೆ ಎಂದು ವರ್ಣಿಸಲಾಗಿದೆ''[೧೬].

ಮಠಗಳು, ಭಕ್ತಿ, ಕಾಯಕ, ದಾಸೋಹಗಳ ತ್ರಿವೇಣಿ ಸಂಗಮವಾಗಿರುತ್ತಿದ್ದವು - ಶಿಂಶುಮಾರ, ಡಿಂಡಿಮಾರ ಮುಂತಾದ ಶಿವಭಕ್ತಿ ಸಂಪನ್ನರು, ಮಠಗಳನ್ನು ಕಟ್ಟಿಸಿ ಅವುಗಳ ಕಾರುಬಾರವನ್ನು

ನೋಡಿಕೊಳ್ಳುವುದು. ವಿರಾಗಮದಲ್ಲಿ ಉಲ್ಲೇಖಗಳಿವೆ. ಇವರು ರಚಿಸಿದ ಮಠಗಳಲ್ಲಿ ವೀರಶೈವ ಆಚಾರ್ಯರು ವಾಸಿಸುತ್ತಿದ್ದರು. ತ್ರಿವಿಧ ದಾಸೋಹ ಈ ಮಠದಲ್ಲಿ ಸಾಂಗವಾಗಿತ್ತು.

'' ಮಠ ಮಧ್ಯೆ ಮಹಾಶ್ರೇಷ್ಠಾನ ವೀರ ಮಾಹೇಶ್ವರ ಪ್ರಿಯೇ
ಪೂಜ್ಯಾದ್ ಪುರಾತನಾನ್ ಪೂರ್ವಾನ್ ಪುರುಷಾರ್ಥ ಪ್ರದಾಯಕಾನ್
ಯೇ ಪೂಜಯಂತಿ ಸತತಂ ತ ಏತೇ ಮಮ ಬಾಂಧವಾ''

– ಹೀಗೆ ಆಗಮೋಕ್ತ ಮಠದ ವಿವರ ಮುಂದುವರಿಸುತ್ತದೆ. ಮಠಗಳಲ್ಲಿನ ಈ ಬಗೆಯ ಕಾರ್ಯದಿಂದ ಅವುಗಳ ಜನಪ್ರಿಯತೆ ಹೆಚ್ಚುತ್ತ ಸಾಗಿತ್ತು. ಶಿಂಶುಮಾರನಂತೆ ಇನ್ನೊಬ್ಬ ಗಣಾಧೀಶ ಡಿಂಡಿಮಾರನು ಬಹುಜನರು ಹಾದು ಹೋಗುವ ದೊಡ್ಡದಾರಿ ಬದಿಯಲ್ಲಿ ಧರ್ಮಾರ್ಥ ಕಾಮ ಮೋಕ್ಷ ಪುರವಾದ ವೀರಶೈವ ಮಠಗಳನ್ನು ಸ್ಥಾಪಿಸಿ, ಅಲ್ಲಿ ಶಾಂತಯೋಗೀಶ್ವರನೆಂಬ ಗುರುಧರ್ಮದ ನೇತೃತ್ವದಲ್ಲಿ ತ್ರಿವಿಧ ದಾಸೋಹ ಕಾರ್ಯ ನೆರಗಗೊಳಿಸುತ್ತಿದ್ದನು''[೧೭].

ದಾಸಿಮಯ್ಯನಿಗೆ ಒಬ್ಬ ಮಗನುದಿಸಿದನೆಂದು, ಅವನ ಹೆಸರು ವಿರೂಪಾಕ್ಷನೆಂದಿತ್ತೆಂದು ಅವನು ಮಠಾಧೀಶನಾಗಿ ಯಶೋಭರಿತನಾಗಿ ಕೊಂಡಗುಳಿಯ ಕೇಶಿರಾಜನ ದೀಕ್ಷಾಗುರುವಾಗಿ ಮೆರೆದನೆಂದು ಹೇಳಲಾಗಿದೆ''[೧೮].

ಮಠ ಮಾನ್ಯಗಳ ಉಗಮವನ್ನು ಪುಣ್ಯ ಪಾಪದಲ್ಲಿ ಕಾಣುವಂತೆ ಕನ್ನಡ ಸಾಹಿತ್ಯದ ಉಗಮ ಬೆಳವಣಿಗೆಯನ್ನು ಮಠಮಾನ್ಯಗಳಲ್ಲಿ ಕಾಣಬಹುದಾಗಿದೆ''[೧೯]. ವಚನ ಸಾಹಿತ್ಯದ ಉಗಮಕಿಂತ ಪೂರ್ವದಲ್ಲಿಯೇ ಮಠಗಳು ಅಸ್ತಿತ್ವದಲ್ಲಿದ್ದವೆಂಬುದು ತಿಳಿದುಬರುತ್ತದೆ.

೧೦೫೦ ರಲ್ಲಿ ಮರಣ ಹೊಂದಿದ ಕೇಶಿರಾಜ ದರವೇಶ ಬಾಬಾ ಕೂಹಿಯ, ಒಂದು ಅನುಭವ ವಚನದ, ಒಂದು ಭಾಗದ ಅನುವಾದವನ್ನು ಇಲ್ಲಿ ಕೊಡಲಾಗಿದೆ.

'' ಸಂತೆಯಲ್ಲಿ ಮಠದಲ್ಲಿ ನಾನು ಕೇವಲ ಪರಮಾತ್ಮನನ್ನು ಕಂಡೆ
ಬೆಟ್ಟದ ಮೇಲೆ ಕಣಿವೆಯಲ್ಲಿ ನಾನು ಕೇವಲ ಪರಮಾತ್ಮನನ್ನು ಕಂಡೆ
ಕಷ್ಟದಲ್ಲಿ ಅವರನ್ನು ಅಧಿಕವಾಗಿ ನನ್ನ ಪಕ್ಕದಲ್ಲಯೇ ಕಂಡೆ
ಸ್ನೇಹದಲ್ಲಿ ಸಭಾಂಗದಲ್ಲಿ ನಾನು ಕೇವಲ ಪರಮಾತ್ಮನನ್ನು ಕಂಡೆ''[೨೦].

ಈ ಮೇಲಿನ ಅನುಭವ ವಚನದ ಸಾಲಿನಿಂದ ಮಠಗಳ ವ್ಯಾಪ್ತಿಯನ್ನು ಆಯಾಯ ಕಾಲದಲ್ಲಿ ಪ್ರಗತಿಯಾಗುತ್ತಿರುವುದು ಕಂಡು ಬರುತ್ತದೆ. '' ಕರ್ನಾಟಕದಲ್ಲಿ ವೀರಶೈವ ಮತಕ್ಕೆ ಸೇರಿದವರು ದೊಡ್ಡ ಸಂಖ್ಯೆಯಲ್ಲಿದ್ದಾರೆ. ವೀರಶೈವರು ಕರ್ಮಕ್ಕೆ ಪ್ರಶಸ್ತ್ಯಕೊಡುವುದಿಲ್ಲ. ಯಾವಾಗಲೂ ದೇಹದ ಮೇಲಿರುವ ಲಿಂಗದ ಸಂಪರ್ಕವೂ ದೇಹವನ್ನು ಶುದ್ಧವಾಗಿಡವುದೆಂದು ಅವರ ನಂಬಿಕೆ''[೨೦] ವೀರಶೈವರಲ್ಲಿತ್ತು. ಜಾನಪದ ಸಾಹಿತ್ಯದಲ್ಲಿಯೂ ಮಠಗಳ ಉಲ್ಲೇಖ ಕಂಡು ಬರುತ್ತದೆ. '' ಮೇಳಗಳು ಇಷ್ಟೆಲ್ಲ ಮುಂದು ವರೆದಿದ್ದರೂ, ಅವುಗಳ ಕೇಂದ್ರ ಸ್ಥಳ ಗು ಡಿ ಮಠ ಮಾನ್ಯಗಳೇ ಆಗಿವೆ''.[೨೧] ಯಾವುದೇ ಒಂದು ಧಾರ್ಮಿಕ ಚರ್ಚೆ, ತತ್ವಗಳ ಪರಿಶೀಲನೆ ನಡೆಯಬೇಕಾದರೆ, ಅವು ಹೆಚ್ಚಾಗಿ ಮಠಗಳನ್ನೆ ಅವಲಂಬಿಸಿರುತ್ತದೆ. ಮಠಗಳು ಜಾನಪದ ದೃಷ್ಠಿಯಿಂದ ತುಂಬಾ ಮಹತ್ವದ ಪಾತ್ರ ವಹಿಸಿದೆ.

ಮಠವು ಒಂದು ಜಟೀಲ ಸಂಸ್ಥೆಯಾಗಿದ್ದು, ಅದರ ಆವರಣದಲ್ಲಿ ಹುಟ್ಟು ಮತ್ತು ಬೆಳವಣಿಗೆಗೆ ಸಂಬಂಧಿಸಿದ ಸಂಸ್ಥಾಪಕರ ಸ್ಮಾರಕಗಳು, ಮಠಾಧಿಪತ್ಯವನ್ನು ವಹಿಸಿದ ಜಂಗಮ, ಮತ್ತು ಆತನ ಸಹೊದ್ಯೋಗಿಗಳ ವಾಸಸ್ಥಾನ, ಪೂಜಾಸ್ಥಾನ, ಶಿಕ್ಷಣ ಮಂದಿರ, ವಿದ್ಯಾರ್ಥಿಗಳ ವಸತಿಗ್ರಹ, ಅಡುಗೆ ಮತ್ತು ಊಟದ ಮನೆ ಮುಂತಾದ ಶೈಕ್ಷಣಿಕ ಹಾಗೂ ಧಾರ್ಮಿಕ ಸಂಸ್ಥೆಗಳು ಬೆಳೆದಿರುತ್ತವೆ. ಅವೆಲ್ಲವುಗಳು ಜಂಗಮನು ಕೇಂದ್ರ ಶಕ್ತಿಯನ್ನಾಗಿರಿಸಿಕೊಂಡು ಅವನ ಸು ತ್ತಲೂ ವ್ಯವಹರಿಸುತ್ತಿರುತ್ತದೆ. ''ಜಂಗಮನು ಕ್ರಿಯಾಶೀಲನು ನೈತಿಕ ಹಾಗೂ ಧಾರ್ಮಿಕ ಆಚರವಿಚಾರಗಳಿಗೆ ಹೆಸರಾದವರು ಆಗಿದ್ದರೆ, ಮಠ ಮತ್ತು ಅದಕ್ಕೆ ಹೊಂದಿಕೊಂಡ ಇತರ ಸಂಸ್ಥೆಗಳು ಬೆಳೆಯುತ್ತವೆ'.[೨೨] ಆಧ್ಯಾತ್ಮಿಕ ಮತ್ತು ಧಾರ್ಮಿಕ ಕೇಂದ್ರ ಬಿಂದುವಾಗಿ ನಿಂತಿರುವ ವೀರಶೈವ ಮಠಗಳು ಸಮಾಜದ ಸರ್ವತೋಮುಖ ಬೆಳವಣಿಗೆಗಾಗಿ ಅವಿರತ ಪ್ರಯತ್ನ ಪಡುತ್ತಿವೆ. ಅವುಗಳ ಅವಿರತ ಪರಿಶ್ರಮದಿಂದ ಹಳ್ಳಿ ಹಳ್ಳಿಗೆ ಮಠಗಳು ಉತ್ಪತ್ತಿಯಾಗುತ್ತಿವೆ. ಒಂದು ಸಂಸ್ಥೆಯಾಗಿ ಬೆಳೆತೊಡಗಿವೆ. ಸಂಸ್ಥೆಯಲ್ಲಿ ಧಾರ್ಮಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಮುಂತಾದ ಕ್ಷೇತ್ರಗಳಲ್ಲಿ ತಮ್ಮ ವ್ಯಾಪ್ತಿಯನ್ನು ಬೆಳೆಸಿಕೊಂಡು ಬರುತ್ತಿವೆ.

''ಧಾರವಾಡ ಜಿಲ್ಲಯ ರೋಣ ತಾಲೂಕಿನ ಸೂಡಿ ಗ್ರಾಮದ ಕ್ರಿ.ಶ. ೧೦೬೦ ರ ಒಂದನೇ ಸೋಮೇಶ್ವರನ ವೃತ್ತಿ ಶಾಸನದಲ್ಲಿ ಮಠದ ಪ್ರಸ್ತಾಪ ಲಭ್ಯವಾಗುತ್ತದೆ''[೨೩]. ಈ ಶಾಸನದಲ್ಲಿ ಓದುವ ವಿದ್ಯಾರ್ಥಿಗಳಿಗೆ, ಓದಿಸುವ ಜನರಿಗೆ ಅಗತ್ಯವಾದ ಊಟ ಉಪಚಾರಗಳಿಗೆ ನಿಗದಿತವಾದ ವೃತ್ತಿಯನ್ನು ನೀಡಿದ ಉಲ್ಲೇಖಗಳು ಕಂಡು ಬರುತ್ತವೆ.

ಲೋಕ ವಿಖ್ಯಾತ ಮಪ್ಪ ದಿವ್ಯಶಕ್ತಿ ಪಣ್ಣಿತ ದೇವರ ತಪೋವಿಧಾನಕ್ಕೆ ಮನ್ತ ವರ್ಗೆ ಶ್ರೀ ಪರ್ವ್ವ ತದಗಸ್ತೆಶ್ವರರ ಸನ್ನತಿ ಮಠಮಿಲ್ಲಿಯ ಮಣ್ಣಳಿಕೆ ತೋಪೋದನರು ನಿಯಮಸ್ತರು''[೨೫] ಈ ಶಾಸನಮಯ ದಿವ್ಯ ಶಕ್ತಿ ಪಂಡಿತ ದೇವರಿಗೆ ದಾನ ನೀಡಿದ ವಿಷಯವನ್ನು ತಿಳಿಸುತ್ತದೆ. ಧಾನ ಧರ್ಮಕ್ಕೆ ಮಠಗಳು ಹೆಚ್ಚಿನ ಮಹತ್ವತೆಯನ್ನು ನೀಡುತ್ತಿದ್ದವು.

ಜೈನ ಮತಗಳಲ್ಲಿಯೇ ಕರ್ನಾಟಕದಲ್ಲಿ ಸೂಡಿ ಮಠವೇ ಮೊದಲ ಮಠವಾಗಿದೆ ಯೆಂಬುದನ್ನು ತಿಳಿದುಬರುತ್ತದೆ. ಅದೇ ರೀತಿ ಆರನೇ ವಿಕ್ರಮಾಧಿತ್ಯನು ಕ್ರಿ.ಶ.೧೦೭೧ ರಲ್ಲಿ ಲಕುಲೀಶ್ವರ ಪಂಡಿತರ ಮಠದ ಅಧ್ಯಾಪಕರಿಗಾಗಿ ಮತ್ತು ವಿದ್ಯಾರ್ಥಿಗಳಿಗಾಗಿ ಕೋಟಿಗನೂರು ಎಂಬ ಗ್ರಾಮವನ್ನು ದಾನ ಮಾಡಿದ ಉಲ್ಲೇಖ ಹೂವಿನ ಹಡಗಲಿಯ ಕಲ್ಲೇಶ್ವರ ದೇವಾಲಯದಲ್ಲಿ ಲಭ್ಯವಾದ ಶಾಸನದಿಂದ ತಿಳಿದು ಬರುತ್ತದೆ. ''ತೆಂಕಣ ಕೋಗಳಿ ಅಯ್ನೂರ ಬಳಿಯ ಕಂಪಣಂ ಹಾಲ್ಪೊಳಂ ಪನ್ನೆರಡು ರೊಳಗಣ ಕೋಟಿಗನೂರು ಸಕೆವರ್ಷ ೯೯೩ ನೇ ಸಾಧಾರಣ ಸಂವತ್ಸರ ಫಾಲ್ಗುಣ ಬಹಳ ೮ ಶುಕ್ರವಾರಂ ವೃತ್ತಿಪಾತದೆಂದು ಧಾರಾಪೂರ್ವಕಂ ಮಾಡಿ ಸ (೦) ವರ್ತನೆ ಮುಸ್ಸಮಾಗಿ ಬಿಟ್ಟುಕೊಟ್ಟ ರಾಯುರ ಪುಟ್ಟದರ್ತ್ಥಮಂ ದೇವರುಪಭೋಗಕಂ ಖಣ ಸ್ಪುಟಿತ ಜೀರ್ಣೋದ್ಧಾರಕಂ ಮುದಿತೀರ ಲೇರ್ತ್ಥದ ರಾಮೆಶ್ವ್ವರದ ಮೇಲೆಯಾಳ ಪಣ್ಣಿತ ದೇವರ ಸನ್ನತಿ ಈ ಸ್ಥಾನ (ಲ) ಕುಳೀಶ್ವರ ಪಣ್ದಿತರ ಮಠದ ತಪೋಪಧನಕಂ ವಿದ್ಯಾರ್ಥಿಗಳ ಸನಾಚ್ಛಾದನಕಂ ಪರಿಕಾಳರ್ಗಂ ಪಾತ್ರಕಂ ಪಾಡುವರ್ಗ (೦) ಮಿಸುಪ್ರಿಭಾಗಮಾಡಿ ನಡೆವುದು ... ''[೨೬]. ಈ ಶಾಸನದ ದೃಷ್ಟಿಯಿಂದ ಅವಲೋಕಿಸಿದರೆ ಮಠಗಳು ತನ್ನ ಕಾರ್ಯ ವ್ಯಾಪ್ತಿಯನ್ನು ಪ್ರಚಲಿತದಲ್ಲಿದ್ದು ದತ್ತಿಗಳ ಮುಖಾಂತರ ಬೆಳವಣಿಗೆ ಹೊಂದಿದ್ದವು.

''ಕ್ರಿ.ಶ. ೧೦೭೫ ರ ಬಿಜಾಪೂರ ಜಿಲ್ಲೆಯ ಬಾಗಲಕೊಟೆ ತಾಲೂಕು ಕೊಪ್ಪ ಶಾಸನದಿಂದ ಸ್ವಯಂಭುನಗರೇಶ್ವರ ಮಠಕ್ಕೆ ದಾನ ಮಾಡಿದ ಉಲ್ಲೇಖಗಳು ತಿಳಿದು ಬಂದಿವೆ........ ದಕ್ಷಿಣ ವಿಕ್ರಮಪೂರದ ಶ್ರೀ ಸ್ವಯಂಭುನಗರೇಶ್ವರ ದೇವರ ಮಠದ ನೈಷ್ಠಿಕ ತಪೋಧನಕಾಳಾಮುಖ ಪೂರ್ವತವಳಿಯ ಶ್ರೀ ತ್ರಿಭುವನ ಶಕ್ತಿ ಪಣ್ದಿತ ದೇವರ ಶಿಷ್ಯರ ........''[೨೭] ಬಿಜಾಪೂರ ಜಿಲ್ಲೆಯ ಸಿಂದಗಿ ತಾಲೂಕಿನ ಕುಲೇಕಮತಿಗಿ ಶಾಸನವು ಕ್ರಿ. ಶ. ೧೦೭೭ ರಲ್ಲಿ ಚಂಡೇಶ್ವರ ದೇವರ ಮಠಕ್ಕೆ ಕೇತಲದೇವಿಯ ಬಿಟ್ಟ ದಾನದ ವಿವರವನ್ನು ನೀಡುತ್ತದೆ. ಕೇತಲದೇವಿಯರು ಚಂಡೇಶ್ವರ ದೇವರ್ಗೆ ಧಾರಾ ಪೂರ್ವಕ ಮಾಡಿ ಹೊರಟು ಕೊಲ್ಲಲು ಬಿಟ್ಟ ಕೈಯಿ

ಮತ್ತು ೧೪ ಯಮರೊಳಗೆ ದೇವರಂಗಭೋಗಕ್ಕ ಮತ್ತು ೨ ವಿನಾಯಕವದೇವಂಪೂಜಿಸುವ ಮಾಣೆಗೆ ಮತ್ತು ಒಂದು ಅಚಜ್ಯರ ಕವಡಿ ಕಚ್ಚುಟಕ್ಕೆ ಮತ್ತು ೨ ಮಟ್ಟದ ತಪೋಧನರ್ಗ್ಗಂ ಅಭ್ಯಾಗತರ್ಗ್ಗಂ........[೨೮].

"ಕ್ರಿ.ಶ. ೧೧೨೩ ಧಾರವಾಡ ಜಿಲ್ಲೆ ಶಿರಹಟ್ಟ ತಾಲೂಕಿನ ಲಕ್ಷ್ಮೇಶ್ವರದ ಶಾಸನವು ರಾಮೇಶ್ವರ ದೇವರ ಮಠದ ಸಾಮವೇದ ಪಂಡಿತ ದೇವರ ಶಿಷ್ಯ ಅಗಸ್ತದೇವ ಪಂಡಿತ ದೇವರ ಕಾಲುಕರ್ಚಿ ಮಠದಲ್ಲಿ ಕುಮಾರವ್ಯಾಕರಣ ಹೇಳಿಕೊಡುವ ಉಪಾದ್ಯಾಯರಿಗೆ ದತ್ತಿಬಿಟ್ಟ ಉಲ್ಲೇಖಗಳಿವೆ. ಶ್ರೀ ರಾಮೇಶ್ವರ ದೇವರ ಮಠದಾಚಾರ್ಯ್ಯರ್ಪ್ಪ ಹಳೆಯ ಸಂತಾಮಠವ ಸಾರ್ಮವೇದಿ ಪಂಡಿತರದೇವರ ಶಿಷ್ಯರಗಸ್ತ್ಯಪಂಡಿತ ದೇವರ ಕಾಲಂ ಕರ್ಚಿಯಾ ಮಠದೂ.........[೨೯].

"ಕಲಚೂರಿ ಬಿಜ್ಜಳನಿಗೆ ಸೇರಿದ ಕ್ರಿ. ಶ. ೧೧೬೮ ರ ಮನೆಗೂಳಿ ಶಾಸನದಲ್ಲಿ ಶಾರದಾದೇವಿ ಮಠದ ಗುರು ಅಮೃತರಾಗಿ ಪಂಡಿತ ಎಂಬಾತನಿಗೆ ಉಪಭೋಗಕ್ಕಾಗಿ ದಾನ ನೀಡಿದ ವಿಷಯ ಪ್ರಸ್ತಾಪವಾಗಿರುವುದು ಅಂದಿನ ಮಠದ ವ್ಯವಸ್ಥೆ ಮತ್ತು ಚಟುವಟಿಕೆಗಳು ಹೊಗಿದ್ದವೆಂಬುದನ್ನು ಈ ಶಾಸನ ಸ್ಪಷ್ಟಪಡಿಸುತ್ತದೆ"[೩೦]. ಕ್ರಿ.ಶ. ೧೧೬೮ರ ಯಡ್ರಾಮಿ ಶಾಸನದಲ್ಲಿ ಎಳರಾಮೇಯ ತೀರ್ಥದ ರಾಮೇಶ್ವರ ದೇವರ ಮಠದಾಚೆಗೆ ಕಳಚೂರಿ ಚಕ್ರವರ್ತಿ ತ್ರಿಭುವನಮಲ್ಲದೇವರಿದ್ದ ವಿಷಯ ತಿಳಿದುಬಂದಿದೆ.

ಕ್ರಿ.ಶ. ೧೯೯೯ ರಲ್ಲಿ ಉಡುಪಿಯ ಅಷ್ಟಮಠಗಳ ಉಲ್ಲೇಖ ಕೈಫಿಯತ್ತುಗಳಿಂದ ಈ ಕೆಳಗಿನಂತೆ ತಿಳಿದು ಬರುತ್ತದೆ.

೧) ಉಡುಪಿಯ ಅಷ್ಟಮಠದ ಒಳಗಿನ ಅದಮೂರ ಮಠ ಅಕ್ಷಯ ಸಂವತ್ಸರದ ಜೇಷ್ಠ ಶು.. ೫ಯಲ್ಲು ಅದಮೂರು ಮಠದ ಕೃಷ್ಣಭಟ್ಟನು ಬರೆಸಿದ ವಂಶಾವಳಿ"[೩೧].

೨) ...... ಕ್ಷಯ ಸಂವತ್ಸರ ಜೇಷ್ಠ ಶು ೫ ಯಲ್ಲು ಕಾಣೂರು ಮಠದ ನರಸಿಂಹ ಭಟ್ಟನು ಬರೆಸಿದ ವಂಶಾವಳಿ ಮತ್ತು ಮೂಲಗುರು ಮದ್ವಾಚಾರ್ಯರು ಅವತಾರ ಮಾಡಿದ್ದು ಚತುಃ ಸಹಸ್ರೇ ಕ್ರಿಶತ್ತೋತರ.[೩೨]

೩) ಅಕ್ಷಯ ನಾಮ ಸಂವತ್ಸರ ಪುಷ್ಯ ಶು. ೭ ಯಲ್ಲು ಕೃಷ್ಣಾಪೂರ ಮಠದ ಕ್ರಿಷ್ಣಾಚಾರ್ಯರು ಬರೆಯಿಸಿಕೊಟ್ಟ ಕೈಫಿಯತ್ತು. .........[೩೩].

೪) ಅಕ್ಷಯ ಸಂವತ್ಸರದ ಜೇಷ್ಠ ಶುದ್ದ ಯಲ್ಲು ಉಡುಪಿಯ ಅಷ್ಟ ಮಠದೊಳಗಣ ಪುತ್ತಿಗೆ ಮಠ ಕೃಷ್ಣ ಉಪಾಧ್ಯಾಯರು ಬರೆಸಿಕೊಟ್ಟ ಕೈಫಿಯತ್ತು ನಾಮಾ ವಿವರ"[೩೪].

೫) ಸಂವತ್ಸರದ ಜೇಷ್ಠ ಶು. ೫ ಯಲ್ಲು ಪೇಜಾವರ ಮಠದ ವಿಠಲ ಭಟ್ಟನು ಬರೆಸಿದ ವಿವರ". ೩೫

೬) ಅಕ್ಷಯ ಸಂವತ್ಸರದ ಜೇಷ್ಠ ಶು. ೫ ಯಲ್ಲು ಫಲಿಮಾರು ಮಠದ ರಾಮಾನುಜಾಚಾರ್ಯನು ಬರೆಸಿದ ಕೈಫಿಯತ್ತು"[೩೬].

೭) ಅಕ್ಷಯ ಸಂವತ್ಸರದ ಜೇಷ್ಠ ಶು. ೬ ಯಲ್ಲು ಶ್ರಿ ವಿಠಲರಾಧಕ್ಕೆ ಶಿರೂರು ಮಠದ ಲಕ್ಷ್ಮೀ ಮನೋಹರ ಸ್ವಾಮಿಗಳವರ ಮಠದ ವಿಠಲಾಚಾಯಿ ಬರೆದ ವಿವರ''.[೩೭]

೮) ಶೊದೆ ಮಠದ ನೂರಾಣಪ್ಪನು ಬರೆಸಿಕೊಟ್ಟ ಗುರುಪೀಠಕ್ಕೆ ಶಿಷ್ಯಚಾರ ಸನಕಾದಿಗಳಾರಭ್ಯಾ ಅಕ್ಷಯ ಸಂವತ್ಸರ ಜೇಷ್ಠ ಶು. ೩ಯಲ್ಲು ಬರೆಸಿದ ವಿವರ''.[೩೮]

ಈ ಮೇಲಿನ ಎಲ್ಲಾ ಶಾಸನಗಳ ಅಧಾರದ ಮಾಹಿತಿಯನ್ನು ಗಮನಿಸಿದಾಗ ಮಠ ಎಂಬ ಶಬ್ದವನ್ನು ಮೊಟ್ಟಮೊದಲು ಬೌದ್ಧ ಧರ್ಮದಲ್ಲಿ ಬಳಕೆಯಾಗಿ ನಂತರ ಜೈನ ಧರ್ಮದಲ್ಲಿ ಸೇರಿಕೊಂಡವು. ನಂತರ ಈ ಎರಡು ಧರ್ಮದ ಮಠದ ಪ್ರೇರಣೆಯಿಂದ ವೀರಶೈವ ಮಠಗಳು ಬೆಳೆದು ಬಂದವು. ಹನ್ನೆರಡನೇ ಶತಮಾನಕ್ಕಿಂತ ಪೂರ್ವ ವೀರಶೈವ ಮಠಗಳು ಕಾಣಿಸಿಕೊಂಡರೂ, ಅವು ಹನ್ನೆರಡನೇ ಶತಮಾನದಲ್ಲಿ ಶಿವಶರಣರ ಕಾಲದಲ್ಲಿ ಹೊಸ ಆಯಾಮವನ್ನು ನಡೆದುಕೊಂಡು ಬೆಳೆಯತೊಡಗಿದವು. ನವೀನ ನೀಲ ನಕ್ಷೆಯನ್ನು ಸಾಧಿಸಿಕೊಂಡು ಅಭಿವೃದ್ಧಿ ಪಡೆದುಕೊಂಡಿವೆ.

ಮಠ ಎಂಬ ಶಬ್ದವು ವಿವಿಧ ಶರಣರ ವಚನಗಳಲ್ಲಿ ಕಂಡು ಬಂದಿರುವುದು ಕಾಣುತ್ತದೆ. ವೀರಶೈವ ಮಠಗಳ ಹನ್ನೊಂದನೇ ಶತಮಾನದಕ್ಕಿಂತ ಪೂರ್ವದಲ್ಲಿ ಎದ್ದು ಕಾಣುವುದು. ಈ ಕೆಳಗಿನಂತೆ ನೋಡಬಹುದು.



'' ಬರುಶಟಗನ ಭಕ್ತಿ ದಿಟವೆಂದು ನಚ್ಚಲುಬೇಡ
ಮಠದೋಳಗಣ ಬೆಕ್ಕು ಇಲಿಯ ಕಂಡು
ಪುಟ ಪುಟನೆನೆಗೆದಂತಾಯ್ತು ಕಾಣಾರಾಮನಾಥ ''[೩೯]



ಇಲ್ಲಿ ಜೇಡರ ದಾಸಿಮಯ್ಯ ಶರಣನ ವಚನದ ಸಾಲುಗಳು ಗಮನಿಸಿದಾಗ ಮಠ ಎಂಬ ಶಬ್ದವು ಹನ್ನೊಂದನೆ ಶತಮಾನಕ್ಕಿಂತ ಪೂರ್ವದಲ್ಲಿ ಎಳೆದೊಯುತ್ತದೆ. ಅಂತೆಯೇ ಅಂದಿನ ಕಾಲಕ್ಕೂ ಮಠ ಎಂಬ ಪದವು ಪ್ರಚಾರದಲ್ಲಿತ್ತೆಂಬುದು ತಿಳಿದು ಬರುತ್ತದೆ. (೧೦೩೦) ಒಂಬತ್ತನೆ ಶತಮಾನದಲ್ಲಿಯೇ ಶರಣರ ವಚನಗಳಲ್ಲಿ ಉಪಲಭ್ಯವಾಗಿ ಬಳಕೆಯಾಗಿರುವುದು ಭಿನ್ನ ರೂಪದಲ್ಲಿ ನೋಡಬಹುದು.

'' ತನ್ನ ಮಠಕ್ಕೆ ತಾ ಬಹಡೆ ಮುನಿಸುವುಂಟೆ?
ಕೂಡಲ ಸಂಗನ ಶರಣರ ಮನೆಯ ಬಾಗಿಲ ಗಾಹಿ ನಾನಾಗಿರ್ದು
ಕೃತರ್ಘ್ನರು ಗ್ರಹಕ್ಕೆ ಬಂದೆಡೆ ಬೇಕು ಬೇಡೆನ್ನೆ''[೪೦].

ಈ ಶರಣರ ವಚನದ ಅರ್ಥದಲ್ಲಿ ಮನೆ ಮತ್ತು ಮಠ ಎಂಬ ಎರಡು ಅರ್ಥ [illegible]ಹೋಲುತ್ತವೆ. ಮನೆಯೇ ಮಠವೆಂದು ಈ ಶರಣನ ನಿಲುವಾಗಿತ್ತು.

''ಎರಡು ಲಕ್ಷ ಎಂಬತ್ತೈದು ಸಾವಿರದ ಏಳುನೂರಾ ಇಪ್ಪತ್ತು ದಾಸೋಹ ಮಠಗಳು'' [೪೨]. ಇಂತಹ ಸಂದರ್ಭದಲ್ಲಿ ದಾಸೋಹ ಅಂದರೆ, ಅನ್ನ ನೀರು ಕೊಡುವ ಮಠಗಳು ಎಂದರ್ಥ. ಮತ್ತೊಂದರ್ಥದಲ್ಲಿ ಶರಣರ ವಾಸದ ಮನೆಗಳೆಲ್ಲ ಮಠಗಳೆಂದು ಕರೆಯುತ್ತಿದ್ದರೆಂದು ತಿಳಿದುಬರುತ್ತದೆ. ''ಭಕ್ತನ ಮಠವೆಂದು ಮುನ್ನವೆ ಅರದರಿದು ಒಂದು ಮತ್ತೊಂದು ಮತ್ತೊಂದು ನೆನೆವರೆ''[೪೩]. ಎಂಬ ಶರಣರ ಹಡಪದ ಅಪ್ಪಣ್ಣನ ವಚನದಲ್ಲಿ ಮಠದ ಉಲ್ಲೇಖ ಬರುತ್ತದೆ. ಇಲ್ಲಿಯೂ ಸಹ ಮನೆ ಮಠಗಳು ಒಂದೆ ಎಂಬ ಅರ್ಥವನ್ನು ಕೊಡುತ್ತವೆ.

''ಲಿಂಗಾರ್ಚನೆಯ ಮಾಡುವೆನಯ್ಯ
ಜಂಗಮ ಮಠಕ್ಕೆ ಬರಬೇಕೆಂದು
ಆ ಜಂಗಮವೆನ್ನ ಮಠಕ್ಕೆಬಂದೆಡೆ
ಲಿಂಗಾರ್ಚನೆಯ ಮಾಡು, ಜಂಗಮಾರ್ಚನೆಯ ಮಾಡುವೆನೆಯ್ಯ'' [೪೪].

ಭಕ್ತರು ಮಠಕ್ಕೆ (ಮನೆಗೆ) ಬರಬೇಕೆಂದು ಮನೆಯೊಡೆಯ ದೇವರಲ್ಲಿ ವಿಶ್ವಾಸದ ಭಕ್ತಿಯಿಂದ ಪ್ರಾರ್ಥಿಸುವರು. ಭಕ್ತರು ಮನೆಗೆ (ಮಠಕ್ಕೆ) ಬಂದರೆ ಅದರ ಲಕ್ಷಣವಂತಾಗುತ್ತದೆಂದು ಅವರ ನಂಬಿಕೆ ಅದ್ದರಿಂದ ಶ್ರೀ ಶಿವಶರಣರ ಸುತ್ತ ಭಕ್ತರ ಬಳಗ ಅಪಾರ ವಿರುತಿತ್ತೆಂದು ತಿಳಿದು ಬರುತ್ತದೆ.

'' ಜಡರುಗಳ ಮನದ ಕತ್ತಲೆಯ ಕಳೆಯಬೇಕೆಂದು
ಕಟ್ಟಿತ್ತು ಕಲ್ಯಾಣದಲ್ಲಿ ಮಹಾ ಮಠವು '' [೪೫].

ಎಂಬ ಚನ್ನಬಸವಣ್ಣನವರ ವಚನದ ಅರ್ಥದಲ್ಲಿ ಇಂದಿನ ಬಸವ ಕಲ್ಯಾಣದಲ್ಲಿರುವ ಅನುಭವ ಮಂಟಪ ವೆಂದೆ ತಿಳಿದುಬರುತ್ತದೆ. ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಗೆ ತಕ್ಕಂತೆ ಸ್ಥಾನಮಾನ ಕಲ್ಪಿಸಿಕೊಡುವ ಪವಿತ್ರ ಕ್ಷೇತ್ರವಾಗಿತ್ತು. ಅದೊಂದು ಧಾರ್ಮಿಕ ಸಂಸ್ಥೆಯಾಗಿದೆ. ಈ ಅನುಭವ ಮಂಟಪದಲ್ಲಿ ಶರಣರ ಚರ್ಚೆಗಳ ಮೂಲಕ ಜನರಲ್ಲಿರುವ ಕಲ್ಮಶಗಳ ಗುಣಗಳನ್ನು ತೆಗೆದು ಅರಿವಿನ ಬೀಜವನ್ನು ಬಿತ್ತಿ ಬೆಳೆಸುತ್ತಿದ್ದರು. ಇದರಲ್ಲಿ ಪ್ರತಿಯೊಬ್ಬರಿಗೆ ಚರ್ಚೆಗಳಿಗೆ ಸಮಾನ ಅವಕಾಶವಿರುತ್ತಿತ್ತು.

" ಮಠವೇಕೋ ಪರ್ವತವೇಕೋ

ಜನವೇಕೋ ನಿರ್ಜನವೇಕೋ

ಚಿತ್ತಸಮಾಧಾನವುಳ್ಳ ಶರಣಂಗೆ?

ಮತ್ತೆ ಹೊರಗಣ ಚಿಂತೆ – ಧ್ಯಾನ –ಮೌನ

ಜಪ – ತಪವೇಕೋ ತನ್ನ ತಾನಾದ ಶರಣಂಗೆ ಗುಹೇಶ್ವರ" [೪೫].

ಅಲ್ಲಮ ಪ್ರಭುದೇವರ ಈ ವಚನದಲ್ಲಿ ಚಿತ್ತ ಸಮಾಧಾನವಿರುವ ಸಾಧಕನಿಗೆ ಜನ ಜಾತ್ರೆಗಳಿಗೆ ಲಕ್ಷ ಕೊಡದೆ ಮನೆ ಮಠ ಅರಣ್ಯಗಳಿಗೆ ಲೆಕ್ಕಿಸದೆ ಇರಬೇಕು. ತನ್ನ ಅಂತರಾತ್ಮದಲ್ಲಿ ತಿಳಿದುಕೊಂಡು ಮುಂದೆ ತನ್ನ ನಿಜ ಜೀವನ ಸಾಗಿಸಬೇಕು. ತನ್ನ ಮನಸ್ಸು ತನ್ನ ಹಿಡಿತದಲ್ಲಿಡದೆ ಜಪ – ತಪಗಳು ಮಾಡಿದರೆ ಅರ್ಥವಿಲ್ಲ ಎಂಬ ಮಾತನ್ನು ಟೀಕಿಸುವಂತಾಗಿದೆ.

" ಜಡರುಗಳಿರಾ ತೊಲಗಿ ಭೋ : ಎನುತಡಿಗಡಿಗೆ ಜಯ

ಘಂಟೆಯನು ಹೊಯಿದು ಎಡೆಗೆಡೆಗೆ ಸಾರುತ್ತ ಶರಣನು

ಮಠಕ್ಕೆ ನಡೆತಂದು ಮೃದುವಾಗಿ ಘಟಿಸಿ". [೪೬].

ಈ ಸಾಲುಗಳಲ್ಲಿ ಕಾವ್ಯದ ರಸವನ್ನು ಹೊರಹೊಮ್ಮಿದೆ. ಇಲ್ಲಿ ಮಠವೆಂದರೆ ಶಿವಶರಣರ ಶಿವಭಕ್ತರ ಪವಿತ್ರ ಸ್ಥಾನವಾಗಿರುತ್ತಿತ್ತು.

" ಸಟೆ ದಿಟವಾದಲ್ಲಿ ಮುಟ್ಟಿಯ ಮುಟ್ಟದೆ ಇರಬೇಕು

ಅತಿರತಿಗೆ ಗತಿಮತಿ ಮಂದವಾಯಿತ್ತು.

ಎಂಟು ಹಿಟ್ಟು

ಪಂಚಮಠವುಂಟು ಧರೆಯ ಮೇಲೆ

ನರಸುರಾದಿಗಳೆಲ್ಲ

ಸಂಚಾರವ ಹೊತ್ತು ಬಂದೈದಾರೆ

ಹಿಟ್ಟು ನಷ್ಟ

ಮಠ ಹಾಳು

ಊರಿಗುಪಟಳ

ಘನ ಮಠವ ಸುಟ್ಟು ಗುಹೇಶ್ವರ ಬೀದಿಗರುವಾದ ". [೪೭]

ಶಿವಶರಣ ಅಲ್ಲಮ ಪ್ರಭುದೇವರ ವಚನ ಸಾಲನ್ನು ವೀಕ್ಷಿಸಿದಾಗ ಮಠ ಮತ್ತು ಮನೆ ಒಂದೆ ಎಂಬ ಅರ್ಥವನ್ನು ಕೊಡುತ್ತವೆ. ಶರಣರ ದೃಷ್ಟಿಯಲ್ಲಿ ಮನೆಗಳೆಲ್ಲ ಮಠವೆಂದೆ ಭಾವಿಸುತ್ತಿದ್ದರೆಂದು ತಿಳಿದು ಬರುತ್ತದೆ.

ಹನ್ನೊಂದನೆ ಶತಮಾನದ ಆರಂಭ ಕಾಲದಲ್ಲಿ, ಕರ್ನಾಟಕದಲ್ಲಿಯೇ ಕರ್ನಾಟಕರ ದೇವಸ್ಥಾನ ಮಠಗಳು ಶ್ರೀಮಂತಿಕೆಯ ಅಗರವಾಗಿದ್ದವು ಆ ಕಾಲದ ಬೃಹತ್ ದೇವಸ್ಥಾನಗಳಲ್ಲಿ ಮೂವತ್ಮೂರರಷ್ಟು ಧಾರವಾಡ, ಬೆಳಗಾವಿ, ಬಿಜಾಪೂರಗಳಲ್ಲಿ ದೊರೆಯುತ್ತವೆ. ೧೨ – ೧೩ ನೇ ಶತಮಾನದ ಹೊತ್ತಿಗೆ ಆಂತರಿಕ ಹಾಗೂ ಬಾಹ್ಯ ಜಗತ್ತಿನೊಂದಿಗೆ ವಾಣಿಜ್ಯ ಸಂಪರ್ಕವನ್ನಿರಿಸಿಕೊಂಡ ಕರ್ನಾಟಕದಲ್ಲಿ ಒಂಬತ್ತು ಟಂಕ ಸಾಲೆಗಳಿದ್ದು, ಅವುಗಳಲ್ಲಿ ಆರು ಟಂಕ ಸಾಲೆಗಳು ಧಾರವಾಡ ಜಿಲ್ಲೆಯಲ್ಲಿಯೇ ಸ್ಥಾಪಿತವಾದವು''[೪೮]. ಹನ್ನೊಂದನೇ ಶತಮಾನದ ಪೂರ್ವಭಾಗದಲ್ಲಾದ ಶಿವರಾತ್ರೀಶ್ವರರು ಸೂತ್ತುರು ಮಠದ ಮೂಲ ಗುರುವೆಂದೂ ಅವರ ನಂತರ ಇಪ್ಪತ್ಮೂರು ಜಂಗಮರು ಮಠದ ಅಧಿಕಾರ ವಹಿಸಿಕೊಂಡು ಬಂದರೆಂದು ಮಠದ ಇತಿಹಾಸಕಾರರು ಹೇಳುತ್ತಾರೆ''[೪೯].

ಸಿದ್ದಲಿಂಗ ಎಡಬಲದಲ್ಲಿರುವ ಶಿವಗಂಗೆ, ಗೂಳೂರು, ಗುಬ್ಬಿ ,ಎಡೆಯಾರು, ಹರಪನಹಳ್ಳಿ ಗುಮ್ಮಳಾಪೂರ, ಮುಂತಾದ ಊರುಗಳು ಲಿಂಗಾಯತ ಧರ್ಮಗ್ರಂಥಗಳನ್ನು ಬರೆದು ಅದರ ಸಂಸ್ಕೃತಿಯನ್ನು ಪ್ರಸಾರ ಮಾಡಿದ ಶರಣ ಸ್ಥಳವಾಗಿದೆ. ''ಹದಿನಾಲ್ಕನೆಯ ಶತಮಾನದಿಂದ ಹದಿನೆಂಟನೆಯ ಶತಮಾನದ ವರೆಗಿನ ಅವಧಿಯಲ್ಲಿ ಈ ಊರುಗಳು ಶರಣ ಸಂಪ್ರದಾಯದ ಅಭಿವೃದ್ಧಿಗಾಗಿ ವಿಶೇಷ ಪ್ರಯತ್ನಪಟ್ಟಿವೆ. ಒಂದು ಎಣಿಕೆಯ ಮೇರೆಗೆ ಶಿವಗಂಗೆಯಲ್ಲಿ ಆರವತ್ನಾಲ್ಕು (೬೪) ಲಿಂಗಾಯತ ಮಠಗಳಿದ್ದವೆಂದು ತಿಳಿಯುತ್ತದೆ''. ೫೦ ಪ್ರಾಚೀನ ಕಾಲದಿಂದಲೂ ಆಸ್ತಿತ್ವಕ್ಕೆ ಬಂದಿರುವ ವೀರಶೈವ ಮಠಗಳಿಗೆ ಧಾನ ದತ್ತಿ ನಿಡಿದ ಉಲ್ಲೇಖಗಳು ಶಾಸನಗಳಲ್ಲಿ ಕಂಡು ಬರುತ್ತವೆ.

ಮಠಗಳ ಉಗಮವನ್ನು ವಿವರಿಸಿದಾಗ, ೧೨ನೇ ಶತಮಾನದಲ್ಲಿ ವಿರಕ್ತ ಸಂಪ್ರದಾಯದ ಮಠಗಳ ಉಗಮವಾಗಿವೆ, ಎಂಬ ಮಾತು ಸತ್ಯವಾಗಿದೆ. ಸಮಾಜದ ಸರ್ವತೋಮುಖ ಬೆಳವಣಿಗೆಗೆ ಶಿಕ್ಷಣ ಮತ್ತು ಧರ್ಮ ಎಂಬ ಎರಡು ಕಣ್ಣುಗಳನ್ನು ನೀಡಿ ಬೆಳೆಸಿದವರು ವೀರಶೈವ ಮಠಾಧೀಶರು. ''ವಿಜ್ಞಾನ ಮೂಢ ನಂಬಿಕೆ ಕಳೆದು ಧರ್ಮ ತತ್ವಾನುಚರಣೆಯ ಮೂಲಕ ಮಾನಸಿಕ ಸಾಮಾಜಿಕ ಸ್ವಸ್ಥಿಯನ್ನು ಕಾಪಾಡಿಕೊಂಡು ಬರುವಲ್ಲಿ,ವೀರಶೈವ ಮಠಗಳು ಇಂದಿಗೂ ತಮ್ಮ ವಿಶಿಷ್ಟ ಪಾತ್ರವನ್ನು ಮುಂದುವರೆಸಿವೆ''. ೫೧ ವಚನ

ಸಾಹಿತ್ಯದ ಸಂಕಲನ ಹಾಗೂ ಪುನರುತ್ಥಾನದ ಯುಗವೆನಿಸಿದ೧೯ನೇ ಶತಮಾನದ ತರುವಾಯದಲ್ಲಿ ಬರುವ ೨೦ನೇ ಶತಮಾನದ ಆಧುನಿಕ ಯುಗವನ್ನು ವಿನೂತನವಾದ ವಿಮರ್ಶೆ ಪರಮರ್ಶ – ಪ್ರಕಟಣೆಗಳ ವೈಜ್ಞಾನಿಕ ಯುಗವೆಂದು ಪರಿಗಣಿಸಬೇಕಾಗುತ್ತದೆ''. ೫೮ ಸಮಾಜದ ಅವಿಭಾಜ್ಯ ಅಂಗವಾಗಿ ವಿದ್ಯಾಭ್ಯಾಸದ ಕೇಂದ್ರಗಳಾಗಿ ಕಾಲೋಚಿತವಾಗಿ ಬದಲಾವಣೆಯನ್ನು ಅಳವಡಿಸಿಕೊಳ್ಳುತ್ತ, ವೀರಶೈವ ಮಠಗಳು ೧೭ನೇ ಶತಮಾನದಿಂದಲೇ ತಮ್ಮ ಕಾರ್ಯ ಕ್ಷೇತ್ರ ವಿಸ್ತರಿಸಿಕೊಳ್ಳುತ್ತ ಬಂದಿರುವುದು ಕಾಣುತ್ತವೆ''. ೫೩

ಹೀಗೆ ವೀರಶೈವ ಮಠಗಳ ಪ್ರಾಚೀನತೆಯನ್ನು ವಿಸ್ತರಿಸಿ, ಅವುಗಳ ವ್ಯಾಪ್ತಿಯನ್ನು ಬೆಳೆಸಿಕೊಂಡು ಬಂದಿರುವುದು ನೋಡಲಾಗಿದೆ. ೧೭ನೇ ಶತಮಾನದ ಆದಿಯಿಂದ ಕಾಣಿಸಿಕೊಂಡ ಮಠಗಳು ತಮ್ಮ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿವೆ. ಹನ್ನೆರಡನೆ ಶತಮಾನದಲ್ಲಿ ವಿರಕ್ತ ಮಠಗಳು ಹೆಚ್ಚು ಬೆಳೆಯ ತೊಡಗಿದವು. ಪ್ರಾಚೀನ ಕಾಲದಲ್ಲಿ ಮಠಗಳು ಧಾರ್ಮಿಕ ಕೇದ್ರಬಿಂದುಗಳಾಗಿದ್ದವು. ಅದರೆ ಆಧುನಿಕ ಕಾಲದಲ್ಲಿ ಊರಿಗೊಂದು ಮಠ ಹುಟ್ಟಿ, ಧಾರ್ಮಿಕ ಪ್ರಚಾರ ಕಡಿಮೆ ಮಾಡಿ, ಶೈಕ್ಷಣಿಕತೆಯತ್ತ ತಮ್ಮ ಚಲವನ್ನು ಹೆಚ್ಚಿಸಿಕೊಂಡಿವೆ. ಆದ್ದರಿಂದ ಆದಾಯದ ಆಸೆ ಹೊತ್ತ ಎಷ್ಟೋ ಮಠಗಳು ದೊರೆಯುತ್ತವೆ. ಮಠಗಳ ಮಠಾಧಿಪತಿಗಳು ಹೆಚ್ಚುತ್ತಾ ಹೋದಂತೆ ಕಂಡ ಕಂಡಲ್ಲಿ ಅಂದರೆ ಸಾರ್ವಜನಿಕ ಸ್ಥಳಗಳಲ್ಲಿ ಉದ್ಯಾನವನಗಳ ಸ್ಥಳದಲ್ಲಿ ಒಂದು ಮಠ ಕಟ್ಟಿಸಿಯೇ ಬಿಡುವ ಹಂತಕ್ಕೆ ಮಠಗಳು ಬೆಳೆದು ನಿಂತಿವೆ.

## ೩. ಮಠಗಳ ಪ್ರಭೇದಗಳು

ಮಠಗಳು ಹನ್ನೆರಡನೇ ಶತಮಾನದ ಶರಣರ ಕಾಲದ ನಂತರ ವೀರಶೈವ ಧರ್ಮವನ್ನು ಉಳಿಸಿ ಬೆಳೆಸಿದ ಕೀರ್ತಿಗೆ ಪಾತ್ರವಾಗಿದೆ. ಮಠಗಳು ಸಮಾಜದ ಅವಿಭಾಜ್ಯ ಅಂಗ. ಎಲ್ಲ ಜಾತಿ, ಮತ, ವರ್ಗದ ಜನರಿಗೆ ಮುಕ್ತ ದ್ವಾರಗಳಿದ್ದಂತೆ ಇದ್ದವು. ವೀರಶೈವ ಮಠಗಳಲ್ಲಿ ನೂರಾರು ಪ್ರಕಾರಗಳು ಕಂಡು ಬರುತ್ತವೆ. ಶಿವಶರಣರ ಕಾಲದಲ್ಲಿಯೇ ಅಸಂಖ್ಯಾತ ಮಠಗಳಿದ್ದ ಬಗ್ಗೆ ಶೂನ್ಯ ಸಂಪಾದನೆಕಾರರು ಹೇಳಿದ್ದಾರೆ.

ಒಂದು ಸಾವಿರ ಜಂಗಮಕ್ಕೆ ಆರೋಗಣೆಯ ಮಾಡಿಸುವ ದಾಸೋಹ ಮಠಗಳು ಮೂವತ್ತೆರಡು ಸಾವಿರ, ನಿತ್ಯ ಐದನೂರ ಜಂಗಮಕ್ಕೆ ದಾಸೋಹ ಮಾಡಿಸುವ ಸತ್ಯ ಸದಾಚಾರಿಗಳ ಮಠಗಳು, ಐವತ್ತೆರಡು ಸಾವಿರ ನಿತ್ಯ ಸಾವಿರದ ನೂರು ಜಂಗಮಕ್ಕೆ ದಾಸೋಹ ಮಾಡಿಸುವ ದಾಸೋಹ ಮಠಗಳು, ಹನ್ನೊಂದು

ಸಾವಿರ. ಎಂದು ಹೇಳಿದ್ದಾರೆ. ಮತ್ತೊಂದು ಕಡೆ ಹೇಳಿರುವಂತೆ ''ಎರಡು ಲಕ್ಷ ಏಂಬತ್ತೈದು ಸಾವಿರದ ಏಳುನೂರೆಪ್ಪತ್ತು ದಾಸೋಹ ಮಠಗಳು''. ೫೪ ಎಂದು ಶ್ರೀ ಗುಮಾಳಪೂರದ ಶ್ರೀ ಸಿದ್ದಲಿಂಗದೇವರ ಸೂನ್ಯ ಸಂಪಾದನೆಯಲ್ಲಿ ಹೇಳಿರುವುದನ್ನು ಗಮನಿಸಿದಾಗ, ವೀರಶೈವ ಮಠಗಳು ದಾಸೋಹದ ಭಾವನೆಯಲ್ಲಿಯೇ ಹುಟ್ಟಿಕೊಂಡಿದೆಯೆಂಬುದನ್ನು ಕಂಡು ಬರುತ್ತದೆ.

ಚಾಲುಕ್ಯ ವಿಕ್ರಮಾಧಿತ್ಯನ ದಂಡಾಧೀಶನಾಗಿದ್ದ ಮಹಾದೇವನು ಇಟ್ಟಿಗೆಯಲ್ಲಿ ವಿದಾಯ ಧಾನಕ್ಕಾಗಿಯೇ ಮಠವೊಂದನ್ನು ಕಟ್ಟಿಸಿ, ಸರಸ್ವತಿ ಮಠ ವೆಂದು ಹೆಸರಿಸಿದನಂತೆ. ಬೆಳಗಾವಿ ಜಿಲ್ಲೆಯಲ್ಲಿ ಹುಲಿ ಮಠ ಶಿವಮೊಗ್ಗ ಜಿಲ್ಲೆಯ ಕೋಟಿ ಮಠ ವಿಜಾಪುರ ಜಿಲ್ಲೆಯ ಸಾಲೊಟಗಿ ಮಠ...... ಇವು ಅತ್ಯಂತ ಪ್ರಾಚೀನ ಮಠಗಳೆನಿಸಿದವು. ವ್ಯಾಕರಣ ಭಾಷೆ, ಧರ್ಮ, ಕಾವ್ಯ, ನಾಟಕ, ಮುಂತಾದ ವಿಷಯುಗಳಿಗೆ ಸಂಬಂಧ ಪಟ್ಟ ಶಿಕ್ಷಣ ಈ ಮಠಗಳಲ್ಲಿ ನಡೆಯುತ್ತಿತ್ತು. ''ಹದಿಮೂರು ಹದಿನಾಲ್ಕನೆಯ ಶತಮಾನಗಳ ಅನಂತರ ವಿದ್ಯಾಭ್ಯಾಸಕ್ಕಾಗಿಯೇ ಕೆಲ ಮಠಗಳನ್ನು ಸ್ಥಾಪಿಸಿದಂತೆ ಕಾಣುತ್ತದೆ. ಓದಿಸೋ ಮಠ, ಟೀಕಿನ ಮಠ, ಟಿಪ್ಪಣಿ ಮಠ, ಓಲೆ ಮಠ, ಸಾಲಿ ಮಠ, ಇಂತಹ ಹಲವಾರು ಮಠಗಳು ವಿದ್ಯಾಭ್ಯಾಸಕ್ಕಾಗಿಯೇ ಮೀಸಲಾದ ಮಠಗಳಿದ್ದಂತೆ ತಿಳಿದು ಬರುತ್ತದೆ''. ೫೫ ಮಠಗಳಲ್ಲಿ ನಾನಾ ಪ್ರಕಾರಗಳು ಕಂಡು ಬಂದರೂ ಅವುಗಳೆಲ್ಲ ಸಮಾಜದ ಉನ್ನತಿಗಾಗಿ ಹಗಲಿರಳು ಸೇವೆ ಸಲ್ಲಿಸುತ್ತಿದ್ದವು.

ಮಠಗಳಲ್ಲಿ ಸಾಲಿ ಮಠಗಳು, ಓದಿಸುವ ಮಠಗಳು, ನಿತ್ಯ ನೇಮಿಯ ಮಠಗಳು, ಚೌಕಿ ಮಠ, ವೃತಸ್ಥರ ಮಠ, ಅಕ್ಕಪ್ರಸಾದಿ ಮಠ, ಸನ್ಯಾಸಿ ಮಠ, ಹಿರೇಮಠ,ಗುರುಮಠ, ಪುತ್ರವರ್ಗದ ಮಠ, ವಿರಕ್ತಮಠ, ಕೆಂಪಿನ ಮಠ, ಹೀಗೆ ನಾನಾ ಪ್ರಕಾರವಾಗಿ ಮಠಗಳ ಹೆಸರುಗಳನ್ನು ಹೆಸರಿಸಿದರೂ. ವೀರಶೈವ ಮಠಗಳಲ್ಲಿ ಮುಖ್ಯವಾಗಿ ಎರಡು ಪ್ರಕಾರದ ಮಠಗಳು ಮಾತ್ರ ಕಂಡುಬರುತ್ತವೆ. ಅವು ಯಾವುವುವೆಂದರೆ

೧) ಗುರು ವರ್ಗದ ಮಠಗಳು,
೨) ವಿರಕ್ತವರ್ಗದ ಮಠಗಳು.

೧) ಗುರು ವರ್ಗದ ಮಠಗಳು ೧೦೦೮ ಜಗದ್ಗುರು ಪಂಚಾಚಾರ್ಯರಿಂದ ಸ್ಥಾಪನೆಗೊಂಡ ಉಜ್ಜಯನಿ, ರಂಭಾಪೂರಿ, ಹಿಮಮತ್ ಕೇದಾರ, ಕಾಶಿ, ಶ್ರೀಶೈಲ ಗಳೆಂಬ ಐದು ಪವಿತ್ರ ಕ್ಷೇತ್ರಗಳಲ್ಲಿ ತಮ್ಮ ವ್ಯಾಪ್ತಿಯನ್ನು ಬೆಳೆಸಿದವು. ಈ ಪೀಠಗಳು ಹೊಂದಿದ ಮಠಗಳು ಗುರು ವರ್ಗದ ಮಠವೆಂದು ಕರೆಯುತ್ತೇವೆ. ಮತ್ತೆ ಇವುಗಳಲ್ಲಿ ಮೂರು ಪ್ರಕಾರವಾಗಿ ಕಾಣಬಹುದು.

೧.೧ ಹಿರೇಮಠ,

೧.೨ ಶಿಷ್ಯ ವರ್ಗದ ಮಠಗಳು

೧.೩ ಪುತ್ರ ವರ್ಗದ ಮಠಗಳು

### ಹಿರೇಮಠಗಳು

ಹೆಸರೇ ಸೂಚಿಸಿರುವಂತೆ ಈ ಮಠವು ಉಳಿದ ವರ್ಗದ ಮಠಗಳಿಗೆ ಹಿರೇತರವಾಗಿರುತ್ತದೆ. ಅಲ್ಲದೆ ಗ್ರಾಮದ ಭಕ್ತರು ಈ ಮಠಗಳ ಅಧಿನದಲ್ಲಿಯೇ ಬೆಳೆಯುತ್ತಿದ್ದರು. ಇಂತಹ ಮಠಗಳ ಮಠಾಧಿಪತಿಯರಿಗೆ ಗೌರವ ಸ್ಥಾನ ಕೊಡುತ್ತಿದ್ದರು. ಅಲ್ಲದೆ ಇವರಿಗೆ ಮದ್, ಘನ್, ಚಕ್ರವರ್ತಿ ಎಂಬ ಬಿರುದಿನಿಂದ ಕರೆಯುತ್ತಿದ್ದರು. ಹಾಗೆಯೇ ''ಷಟಸ್ಥಲ ಬ್ರಹ್ಮಮೂರ್ತಿ'' ಪಟ್ಟದ್ದೇವರು ಎಂದು ಬಿರುದಾಂಕಿತ ವುಳ್ಳವರಾಗುತ್ತಿದ್ದರು. ಈ ಮಠಗಳಲ್ಲಿ ದಾಸೋಹಂಬಾವ ಏರ್ಪಡಿಸುತ್ತಿದ್ದರು. ಪುರಾಣ ಪ್ರವಚನಗಳ ಕಾರ್ಯಕ್ರಮಗಳು ಹಮ್ಮಿಕೊಳ್ಳುತ್ತಿದ್ದರು. ಈ ಮಠಗಳಿಗೆ ಮರಿಯನ್ನು ಅಯ್ಕೆ ಮಾಡಿಕೊಳ್ಳುವ ಪ್ರಸಂಗ ಬಂದಾಗ, ಮಠಕ್ಕೆ ಬರುವ ಸಾಮಾನ್ಯ ಭಕ್ತರಲ್ಲಿಯೇ ಯೋಗ್ಯವಾದ. ಒಬ್ಬ ಭಕ್ತರನ್ನು ಆರಿಸಿ ಮಠಕ್ಕೆ ಮರಿಯನ್ನಾಗಿ ನೇಮಿಸಿ ಕೆಲವು ವರ್ಷಗಳ ನಂತರ ಪಟ್ಟಾಧಿಕಾರ ಮಾಡಿಸಿ ಅಧಿಕಾರ ಕೊಡುತ್ತಾರೆ.

### ಶಿಷ್ಯ ವರ್ಗದ ಮಠ

ಹಿರೇಮಠಕ್ಕೆ ಸಂಬಂಧ ಪಟ್ಟಂತೆ ಇರುವ ಇನ್ನೊಂದು ಶಿಷ್ಯ ವರ್ಗದ ಮಠ. ಈ ಮಠಗಳಲ್ಲಿ ಮರಿಯನ್ನು ಆಯ್ಕೆ ಮಾಡಬೇಕಾದರೆ, ಈ ಮಠದ ಶಿಷ್ಯರಾದವರಲ್ಲಿಯೇ ಮಾತ್ರ ಯೋಗ್ಯವಾದ ಒಬ್ಬರನ್ನು ಆಯ್ಕೆ ಮಾಡುತ್ತಾರೆ. ಶಿಷ್ಯರನ್ನು ಹೊರತು ಇಲ್ಲಿ ಬೇರೆಯವರಿಗೂ ಅವಕಾಶ ದೊರೆಯುದಿಲ್ಲ. ಆದ್ದರಿಂದ ಈ ಮಠಕ್ಕೆ, ಶಿಷ್ಯವರ್ಗದ ಮಠವೆಂದು ಕರೆಯುತ್ತಾರೆ. ಕೆಲವು ದಿವಸಗಳ ನಂತರ ಆಯ್ಕೆಯಾದ ಮರಿಗೆ ಅಧಿಕಾರಕೊಟ್ಟು ಪಟ್ಟಾಧಿಕಾರ ಮಾಡುವ ವ್ಯವಸ್ಥೆ ಇರುತ್ತದೆ.

### ಪುತ್ರ ವರ್ಗದ ಮಠ

ಈ ಮಠವು ಗುರುಸ್ಥಲ (ಹಿರೇಮಠ) ಗಳಲ್ಲಿಯೇ ಒಂದಾಗಿದೆ. ಇಂತಹ ಮಠಗಳಲ್ಲಿ ಮರಿಯನ್ನು ಆಯ್ಕೆ ಮಾಡಿಕೊಳ್ಳಬೇಕಾದರೆ, ಬೇರೆ ಯಾರಿಗೂ, ಅಂದರೆ ಮಠದ ಭಕ್ತರೆ, ಇರಲಿ ಶಿಷ್ಯರೇ ಇರಲಿ,

ಜನಸಾಮಾನ್ಯರೇ ಇರಲಿ, ಇವರಲ್ಲಿ ಯಾರಿಗೂ ಆಸ್ಪದವಿಲ್ಲ. ಅಣ್ಣನ ಮಕ್ಕಳೊ, ತಮ್ಮನ ಮಕ್ಕಳೋ, ಚಿಕ್ಕಪ್ಪನ ಮಕ್ಕಳೋ, ಹೀಗೆ ಮಠಾಧಿಪತಿಗಳ ರಕ್ತ ಸಂಬ್ಧಂಧಿಕರನ್ನೇ ಮಠಕ್ಕೆ ಮರಿಯನ್ನಾಗಿ ನೇಮಿಸಿಕೊಳ್ಳುವ ಸಂಪ್ರದಾಯವಿದೆ. ಹೀಗೆ ನೇಮಿಸಿಕೊಂಡ ಮರಿಗೆ ಪಟ್ಟಾಧಿಕಾರ ಮಾಡಿ ಅಧಿಕಾರವನ್ನು ವಹಿಸಿಕೊಡುತ್ತಾರೆ.

ಹೀಗೆ ಹಿರೇಮಠಗಳಲ್ಲಿ ಮುಖ್ಯವಾಗಿ ಮೂರು ಪ್ರಕಾರದ ಮಠಗಳು ಕಂಡು ಬರುವುದನ್ನು ನೋಡಿದ್ದೇವೆ. ಈ ಮೂರು ಮಠಗಳು ಒಂದೇ ರೀತಿಯಲ್ಲಿ ಕಂಡು ಬಂದರೂ, ಮಠಕ್ಕೆ ಬರುವ ''ಮರಿ'' ಯನ್ನು ಅಯ್ಕೆ ಮಾಡಿಕೊಳ್ಳುವ ರೀತಿ ಭಿನ್ನರೂಪವಾಗಿ ತೋರುತ್ತವೆ.

ವಿರಕ್ತ ವರ್ಗದ ಮಠಗಳು

ವೀರಶೈವ ಮಠಗಳಲ್ಲಿ ವಿರಕ್ತ ಮಠಗಳು ಪ್ರಮುಖವಾದ ಪಾತ್ರ ವಹಿಸಿದೆ. ವಿರಕ್ತ ಮಠಗಳಲ್ಲಿ ಹಿರೇಮಠಗಳಲ್ಲಿ ಕೆಲವು ವ್ಯಾತ್ಯಾಸಗಳು ಕಂಡು ಬರುತ್ತವೆ, ವಿರಕ್ತ ಮಠಗಳು ಹನ್ನೆರಡನೆ ಶತಮಾನಕ್ಕಿಂತ ಪೂರ್ವದಲ್ಲಿ ಕೆಲವು ಮಠಗಳು ಕಾಣಿಸಿಕೊಂಡರೂ, ಹನ್ನೆರಡನೇ ಶತಮಾನದಲ್ಲಿ ಬೆಳವಣಿಗೆ ಹೊಂದಿದವು. ಈ ಸಂಧರ್ಭದಲ್ಲಿ ಅಸಂಖ್ಯಾತ ವೀರ ಶರಣ – ಶರಣೆಯರಿಂದ ಅಂದರೆ ಅಲ್ಲಮ ಪ್ರಭು ದೇವರು, ಬಸವಣ್ಣ ಅಕ್ಕಮಹಾದೇವಿ, ಚನ್ನಬಸವಣ್ಣ ....... ಮುಂತಾದ ವೀರ ಶರಣ ಶರಣೆಯರಿಲ್ಲಿ ನಾಡಿನಲ್ಲಿ ಅನೇಕ ವೀರಶೈವ ವಿರಕ್ತ ಮಠಗಳು ಹುಟ್ಟಿಗೆ ಕಾರಣಭೂತರಾದರು.

ವಿರಕ್ತ ಎಂದರೆ ತ್ಯಜಿಸು ಯಾವುದೆ ಸುಖ ದುಃಖಗಳಿಗೆ ಆಸೆ ಪಡದೆಮನೆಯನ್ನು, ಬಂಧು ಬಳಗದವರನ್ನು, ಆಸ್ತಿ ಪಾಸ್ತಿಗಳನ್ನು ತ್ಯಜಿಸಿ, ಉಟ್ಟ ಬಟ್ಟೆಯಿಂದ, ದೇಶ ಸಂಚಾರ ಗೈಯುತ್ತಾ ಒಂದು ಪವಿತ್ರವಾದ ಸ್ಥಳದಲ್ಲಿ ತಂಗಿ, ಜನ ಸಾಮಾನ್ಯರಿಗೆ ಧರ್ಮದ ಉಪದೇಶ. ಮಾನವತೆಯ ತತ್ವ ನಡೆ – ನುಡಿಗಳನ್ನು ತಿಳಿಸುತ್ತಾರೆ. ಇಂತಹ ವೀರರೂ ತಂಗಿದ ಸ್ಥಳಗಳೇ ಮುಂದೆ ಮಠಗಳಾಗಿ ಪರಿಣಮಿಸುತ್ತವೆ. '' ತ್ಯಾಗಕ್ಕೆ ಇರುವಷ್ಟು ಮೌಲ್ಯ ವೀರತ್ವಕ್ಕೂ ಇದೆ''. ಇಂತಹ ವಿರಕ್ತರಲ್ಲಿ ಐದು ಪೀಠದ ಐದು ಸ್ಥಳಗಳು ಹುಟ್ಟಿಕೊಂಡಿವೆ.

೧) ಮುರಘಾ (ಮಾರ್ಗ) ಸಮಯ
೨) ಕುಮಾರ ಸಮಯ
೩) ಚಿಲ್ಲಾಳ ಸಮಯ
೪) ಕೆಂಪಿನ ಸಮಯ
೫) ಸಂಪಾದನೆ ಸಮಯ

ಕಾವಿ ಬಟ್ಟೆಯನ್ನು ಧರಿಸಿ ಮನೆಯನ್ನು ತ್ಯಜಿಸಿದ ವ್ಯಕ್ತಿಯ ಗುಣಮಟ್ಟವನ್ನು ಅಳೆದು, ಪವಿತ್ರ ಕ್ಷೇತ್ರಗಳಲ್ಲಿ ತಂಗಲು ಅವಕಾಶ ಕೊಡುತ್ತಾರೆ. ಈ ಕ್ಷೇತ್ರದಲ್ಲಿ ಪ್ರವೀಣತೆಯನ್ನು ಹೊಂದಿದವರು ಗುರುವಿನ ಆಶೀರ್ವಾದ ಪಡೆದು ಗುರುವಾಗುವ ಸಾಧ್ಯತೆ ಇದೆ. ಇವರಿಗೆ ಜಂಗಮ ವೆಂದು ಕರೆಯುವ ವಾಡಿಕೆ ಇದೆ. ಗುರುವಿನ ಆಶೀರ್ವಾದ ಪಡೆದುಕೊಳ್ಳುತ್ತಾರೆ. ನಂತರ ಹಾನಗಲ್ಲ ಕುಮಾರ ಸ್ವಾಮಿಗಳು ಸ್ಥಾಪಿಸಿದ ಶಿವಯೋಗ ಮಂದಿರದಲ್ಲಿ ಅಭ್ಯಾಸಕ್ಕೆ ಅವಕಾಶ ಪಡೆದುಕೊಂಡು, ಅಲ್ಲಿ ಧಾರ್ಮಿಕ ಅಭ್ಯಾಸದ ವಾಕ್ಯವನ್ನು ಅಕ್ಷರಃಶ ತಪ್ಪದೆ ಪಾಲಿಸಿ ಕಲಿತುಕೊಳ್ಳುತ್ತಾರೆ. ಧರ್ಮದ ಜತೆಗೆ ಆಧ್ಯಾತ್ಮಿಕ ಮತ್ತು ಸಾಂಸ್ಕೃತಿಕ ಅಭ್ಯಾಸಗಳು ಮನನ ಮಾಡುತ್ತಾರೆ, ಇಂತಹ ಪವಿತ್ರ ಕ್ಷೇತ್ರದಲ್ಲಿ ಅಧ್ಯಯನ ಕೈಗೊಂಡು ಧರ್ಮ ಪ್ರಸಾರಕ್ಕೆ ಹೊರಬಿದ್ದು ಜನರ ಒತ್ತಾಯದ ಮೇರೆಗೆ ಒಂದು ಸ್ಥಳದಲ್ಲಿ ತಂಗುತ್ತಿದ್ದರು. ಶ್ರೀ ಗಳು ತಂಗಿದ ಸ್ಥಳಗಳೇ ಮಠಗಳಾಗಿ ಪರಿಣಮಿಸಿದವೆಂದು ಹೇಳಬಹುದು.

ಧರ್ಮ ಸಮ್ಮೇಳನಗಳು, ವಿವಿಧ ವಿಷಯದ ಮೇಲೆ ವಿಚಾರ ಗೋಷ್ಠಿಗಳು, ಮತ್ತು ಉಪನ್ಯಾಸ ಶಿಬಿರಗಳು, ವಿರಕ್ತ ಮಠದ ಆಶ್ರಯದಲ್ಲಿ ನಡೆಯುಃ ತ್ತಿದ್ದವು. ಬಸವೇಶ್ವರರು ಸ್ಥಾಪಿಸಿದ ಅನುಭಾವ ಮಂಟಪದ ಮಾದರಿಯಲ್ಲಿ ವಿರಕ್ತ ಮಠಗಳು ಕಾರ್ಯ ಮಾಡುತ್ತಿರುತ್ತವೆ. ಸಾಲಿಮಠ, ಓದಿಸುವ ಮಠಗಳಲ್ಲಿ ಅಧ್ಯಯನ ಮುಗಿಸಿ ವಿದ್ಯಾರ್ಥಿಗಳು ಉಚ್ಚವ್ಯಾಸಂಗಕ್ಕಾಗಿ ಈ ವಿರಕ್ತ ಮಠಗಳಿಗೆ ಹೋಗುತ್ತಿದ್ದರು. ''ಇಂದಿನ ಸ್ನಾತಕೋತ್ತರ ವಿದ್ಯಾಕೇಂದ್ರಗಳನ್ನು ಇವು ಹೋಲುತ್ತಿದ್ದವು. ಸಮಾಜಕ್ಕೆ ಉಪಯುಕ್ತವಾದ ಒಂದು ನೂರಾ ಒಂದು ಕಾಯಕ,ಇಲ್ಲವೇ ವೃತ್ತಿಗಳನ್ನು, ಇಲ್ಲಿ ಕೆಲಸವಾಗುತಿತ್ತೆಂದು ಹೇಳಲಾಗುತ್ತಿದೆ''[೫೬]. ವಿರಕ್ತ ಮಠಗಳು ಸಮಾಜದ ಸರ್ವತೋಮುಖ ಬೆಳವಣಿಗೆಗೆ ಸಹ ಕಾರಿವಾಗುತ್ತಿದ್ದವು. ''ಮೂಲ ಶಿಕ್ಷಣ ಹಾಗೂ ಪ್ರೌಢ ಶಿಕ್ಷಣ ಪಡೆದ ಮೇಲೆ ಉನ್ನತ ವ್ಯಾಸಂಗವಕಾಶಗಳನ್ನು ಈ ವಿರಕ್ತ ಮಠಗಳು ನೀಡುತ್ತಿದ್ದವು''[೫೭]. ವಿರಕ್ತ ಮಠಗಳು ಧಾರ್ಮಿಕ ಸೇವೆಯ ಜತೆಗೆ ಶೈಕ್ಷಣಿಕ ಸೇವೆಯನ್ನು ಸಲ್ಲಿಸುತ್ತಿದ್ದವು. ಅಲ್ಲಿರುವ ಮಠಾಧೀಶರುಗಳಿಗೆ ಜಂಗಮ ವೆಂದು ಕರೆಯುತ್ತಿದ್ದರು, ಇಂತಹ ಜಂಗಮರಲ್ಲಿ ಎರಡು ಪ್ರಕಾರಗಳು ಕಂಡು ಬರುತ್ತದೆ.

### ಚರ ಜಂಗಮರು

ವಿರಕ್ತ ವರ್ಗದ ಮಠಗಳಲ್ಲಿ ಚರ ಜಂಗಮರು, . ಚರ ಜಂಗಮವೆಂದರೆ, ಸಂಚರಿಸುವರು ''ಹಳ್ಳಿಗೆ ಏಕ ರಾತ್ರಿ ಪಟ್ಟಣಕ್ಕೆ ಪಂಚರಾತ್ರಿ'' ಎಂದು ವಿರಕ್ತ ಜಂಗಮರು ಸಂಚಾರ ಗೈಯುತ್ತ ಹಳ್ಳಿ

ಪಟ್ಟಣಗಳಿಗೆ ಅಲೆಯುತ್ತಿದ್ದರು. ಚಿಕ್ಕ ಹಳ್ಳಿಗೆ ಒಂದು ದಿವಸ ಪಾಠ ಪ್ರವಚನ ಮಾಡಿ ಧರ್ಮೋಪದೇಶದ ತತ್ವಗಳನ್ನು ಜನರಿಗೆ ತಿಳಿಸುತ್ತಿದ್ದರು. ಪಟ್ಟಣ ಅಂದರೆ ದೊಡ್ಡ ಗ್ರಾಮಗಳಿಗೆ ಜಿಲ್ಲೆಗಳಿಗೆ ಐದು ದಿವಸಗಳ ಕಾಲ ತೆಗೆದುಕೊಂಡು ಪಾಠ – ಪ್ರವಚನಗಳ ಮೂಲಕ ಜನರಲ್ಲಿರುವ ಅಂಧಕಾರದ ಬೀಜವನ್ನು ಕಿತ್ತೊಗೆಯುವರು, ಇಂತಹ ವಿರಕ್ತರು ಎಡಗೈಯಲ್ಲಿ ಬಸವ ಮಹಾಜೋಳಿಗೆ ಹಿಡಿದು ಬಲಗೈಯಲ್ಲಿ ಕೋಲಿನ ದಂಡು ಸಹಿತ ಸಂಚಾರ ಗೈಯುತ್ತಿದ್ದರು. ಹೀಗೆ ಹಳ್ಳಿ ಪಟ್ಟಣಗಳಿಗೂ ಸಂಚಾರ ಮಾಡಿ ಧರ್ಮ ಸುಧಾರಣೆಯ ತತ್ವಗಳ ಬೀಜ ಬಿತ್ತುವುದು ಈ ಚರ ಜಂಗಮನ ಮುಖ್ಯ ಕರ್ತವ್ಯವಾಗಿತ್ತು.

ಸ್ಥಿರ ಜಂಗಮ

ವಿರಕ್ತರಲ್ಲಿ ಸ್ಥಿರ ಜಂಗಮರು ಒಬ್ಬರು. ಸ್ಥಿರ ಜಂಗಮರು ದೇಶ ಸಂಚಾರ ಗೈದು ಒಂದು ಪವಿತ್ರ ಕ್ಷೇತ್ರ ಸ್ಥಳವನ್ನು ಜಾಗೃತಿ ಮಾಡಿಕೊಂಡು ಕಸಬರಿಗಿಯೆ ತನ್ನ ನಿಜವಾದ ಆಸ್ತಿ ಎಂದು ತಿಳಿದಿರುವವರೆ ಸ್ಥಿರ ಜಂಗಮರು. ಈ ಜಂಗಮರು ತಮ್ಮ ಸ್ಥಳವನ್ನು ಬಿಟ್ಟು ಅನ್ಯ ಸ್ಥಳಕ್ಕಾಗಲಿ, ಅನ್ಯರ ಕರೆಗಳಿಗೆ ಒಗೊಡುತ್ತಿರಲಿಲ್ಲ. ತಮ್ಮ ಪವಿತ್ರವಾದ ಸ್ಥಳದಲ್ಲಿಯೇ ಕುಳಿತು, ಬಂದ ಭಕ್ತರಿಗೆ ಪಾಠ – ಪ್ರವಚನಗಳ ಮೂಲಕ ತಿಳಿಸಿ ಹೇಳುತ್ತಿದ್ದರು. ಭಕ್ತರಿಗೆ ಒಳ್ಳೆಯ ರೀತಿಯ ನಡೆನುಡಿಗಳ ಭೋದನೆಯನ್ನು ನೀಡುತ್ತಿದ್ದರು. ಧರ್ಮ ತತ್ವಗಳ ಉಪದೇಶ ನೀಡುತ್ತಾ ಸಮಾಜದಲ್ಲಿ ಲೋಕಕಲ್ಯಾಣಕ್ಕಾಗಿ, ಜನಕಲ್ಯಾಣಕ್ಕಾಗಿ ಹಗಲಿರುಳೆನ್ನದೇ ಕಂಕಣ ಬದ್ದರಾಗಿ ಶ್ರಮಿಸುತ್ತಿದ್ದರು.

''ಗುರುಗಳಂತೆ ಜಂಗಮರು ಮಠ – ಮಾನ್ಯಗಳನ್ನು ಹಾಕಿಕೊಂಡು ಗೊತ್ತಾದ ಶಿಷ್ಯ ಮಂಡಲ್ಲಿಯುಳ್ಳವರಲ್ಲ. ಯದೃಚ್ಛಾಲಾಭಸಂತುಷ್ಟರಾಗಿ ನಿಂತೆಡೆಯೇ ಮಠವಾಗಿ ಹತ್ತಿರ ಬಂದವರೇ ಶಿಷ್ಯರಾಗಿ ಇತರಕ್ಕವರು. ಯಾರಾದರೂ ಭಕ್ತಿಯಿಂದ ಮಠವನ್ನು ಕಟ್ಟಿಸಿಕೊಟ್ಟುಇರ ಹೇಳಿದರೆ, ಒಂದು ಕಡೆ ನಿಲ್ಲುವುದುಂಟು''[೫೮].

ಚರ, ಸ್ಥಿರ ಜಂಗಮರ ಬಗ್ಗೆ ಉಲ್ಲೇಖವನ್ನು ನೀಡಿ, ಪರ ಜಂಗಮ ಒಂದು ವಿಶಿಷ್ಟ ಸಂಪ್ರದಾಯದವರು. ''ಪರ ಜಂಗಮನಾದ ಅಲ್ಲಮ ಪ್ರಭು ಕಲ್ಯಾಣ ಪಟ್ಟಣದಲ್ಲಿ ಶೂನ್ಯ ಸಿಂಹಾಸವನ್ನು ಏರಿದ ಕಾರಣ ಶೂನ್ಯ ಸಿಂಹಾಸ 'ನದ ಪರಂಪರೆಯ ವಿರಕ್ತ ಮಠಗಳು ನೂರಾರು ದೇಶದಲ್ಲಿವೆ. ಆ ಮಠಗಳ

ಶಿಷ್ಯರು ಲಕ್ಷಗಟ್ಟಲೆ ಇದ್ದಾರೆ''[೫]. – ಎಂದು ಹೇಳುವ ಪರಿಭಾಷೆಯಲ್ಲಿ ಅರಿತುಕೊಳ್ಳಬೇಕು. ವಿರಕ್ತ ಪರಂಪರೆಯ ಮಠಗಳೆಲ್ಲಾ ಹನ್ನೆರಡನೇ ಶತಮಾನದ ಕಾಲದಲ್ಲಿಯೇ ಉದ್ಭವಿಸಿವೆ.

ವಿರಕ್ತ ಮಠಗಳಲ್ಲಿ ಭಕ್ತರಿಂದಲೇ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಮಾಡಿಸುತ್ತಿದ್ದರು. ಇಂತಹ ಸಾಂಸ್ಕೃತಿಕ ಕಾರ್ಯಕ್ರಮಗಳ ಮೂಲಕ ಜಾತೀಯತೆ ಡಂಭಾಚಾರ ನಿರ್ಮೂಲನೆ ಮಾಡಿಸುತ್ತಿದ್ದರು. ಉಪನ್ಯಾಸ ಶಿಭಿರಗಳ ಮೂಲಕ ನೇರವಾಗಿ ಜನರ ಮನವನ್ನು ಮುಟ್ಟುವಂತೆ ಹೇಳಿ, ಅವರ ನಡೆ – ನುಡಿಯನ್ನು ಸುಧಾರಿಸುತ್ತಿದ್ದರು. ತಮ್ಮ ಸ್ಥಳದಲ್ಲಿಯೇ ಕುಳಿತು ಜನರ ಕಲ್ಯಾಣವನ್ನು ಮಾಡಿಸಲು ಹಗಲಿರುಳು ಪ್ರಯತ್ನಪಡುತ್ತಿದ್ದರು. ಇವರಿಗೆ ಸ್ಥಿರ ಜಂಗಮರೆಂದು ಕರೆಯುತ್ತಾರೆ.

ಹೀಗೆ ವಿರಕ್ತರಲ್ಲಿಯೇ ಎರಡು ಪ್ರಕಾರಗಳು ಕಂಡು ಬರುತ್ತವೆ, ಇವುಗಳಲ್ಲಿ ಸಾಲಿಮಠ, ಓದಿಸುವ ಮಠಗಳೆಂದು ಭಿನ್ನವಾಗಿ ಕಂಡು ಬರುತ್ತದೆ.

## ಸಾಲಿ ಮಠ

ಸಂಸ್ಕೃತದ ''ಶಾಲಾ'' ಎಂಬ ಪದದ ತಾತ್ಪರ್ಯವೇ ಸಾಲಿ ಎಂಬ ಶಬ್ದ ಬಳಕೆಯಾಗಿದೆ. ಈ ಪದವು ವೃತ್ತಿಪರ ಜನಾಂಗದವರು ಹೆಸರಿಸುವಲ್ಲಿ ಬಳಕೆಯಾಗುತ್ತದೆ. ಉದಾಃ ಚಕ್ರಸಾಲಿ, ಅಕ್ಕಸಾಲಿ, (ಗ) ಎಂದು ಮುಂತಾದ ಕಸಬುಗಳನ್ನು ಗುರುತಿಸಲಾಗಿದೆ. ಪ್ರಾಚೀನ ಕಾಲದಲ್ಲಿ ವೀರಶೈವ ಮಠಗಳಲ್ಲಿ ಸಾಲಿ ಅಂದರೆ ಶಾಲೆಗಳು ನಡೆಸುತ್ತಿದ್ದವು. ಅದಕ್ಕೆ ''ಸಾಲಿ'' ಮಠಗಳೆಂದು ಕರೆಯುತ್ತಿದ್ದರು. ಮುಂದೆ ಇವು ಸಾಲಿಮಠಗಳೆಂದೇ ಪ್ರಖ್ಯಾತಿ ಪಡೆದವು. ''ಕಾಗದ ಮತ್ತು ದಪ್ಪಕಾಗದ ಅಥವಾ ರಟ್ಟು ತಯ್ಯಾರಿಸುವುದನ್ನು ಹೇಳಿಕೊಡಲಾಗುತ್ತಿತ್ತು. ಅದು ನಿಂತಹೋಗಿ ಆ ವೃತ್ತಿಗೆ ಸಂಬಂಧಿಸಿದ ಸಾಧನೋಪಕರಣಗಳು ಆ ಮಠದಲ್ಲಿ ಆಲಕ್ಷಿತವಾಗಿ ಬದ್ದಿರುವುದನ್ನು ಈಗಲೂ ಕಾಣಬಹುದು''[೬೦]. ಮಠಗಳಲ್ಲಿ ಶೈಕ್ಷಣಿಕ ವೃತ್ತಿ ಸುವ್ಯವಸ್ಥಿತ ರೀತಿಯಲ್ಲಿ ನಡಿಸಿಕೊಂಡು ಬರುತ್ತಿದ್ದರು.

''ಆಧುನಿಕ ಮೂಲ ಶಿಕ್ಷಣ ಶಾಲೆ (Bassic School) ಗಳನ್ನು ಹೋಲುತ್ತಿದ್ದವು. ಗಾಂಧೀಜಿಯವರ ಮೂಲ ವಾರ್ಧಾ ಶಿಕ್ಷಣ ಪದ್ದತಿಯ ಪ್ರತಿ ರೂಪಗಳನ್ನು ಇಲ್ಲಿ ಗುರುತಿಸಬಹುದು. ಓದು ಬರಹ, ಗಣಿತ ಹಾಗೂ ಲೆಕ್ಕಚಾರಗಳಲ್ಲದೆ ಕಡ್ಡಾಯವಾಗಿ ಯಾವುದಾದರೊಂದು ಕೈಗಾರಿಕೆಯನ್ನು ಕಲಿಸಲಾಗುತ್ತಿತ್ತು. ನೂಲುವುದು, ನೆಯುವುದು, ಕೃಷಿ ವ್ಯವಸಾಯಗಳು ಮುಖ್ಯ ಕಾರ್ಯಗಳಾಗಿದವು. ಪ್ರಥಮ ಚಿಕಿತ್ಸೆ

ಮಾದರಿಯ ವೈದ್ಯಕೀಯ ಜ್ಞಾನವನ್ನು ಕೊಡಲಾಗುತ್ತಿತ್ತು. ಸಾಲಿ ಮಠಗಳು ಕೈಗಾರಿಕೆಯ ಶಾಲೆಗಳಾಗಿದ್ದವು''[೬೧]. ಹೀಗೆ ಹೆಸರೆ ಸೂಚಿಸಿರುವಂತೆ ಮಠಗಳಲ್ಲಿ ಶೈಕ್ಷಣಿಕ ಬುನಾದಿಯ ತಳ ಪಾಯ ಹಾಕಿಕೊಡುತ್ತಿದ್ದವು. ಅವುಗಳಲ್ಲಿ ಕಲಿತ ವಿದ್ಯಾರ್ಥಿಗಳ ಜ್ಞಾನವು ವೃದ್ಧಿಸುತಿತ್ತು. ಇಲ್ಲಿ ಒಳ್ಳೆಯ ರೀತಿಯಲ್ಲಿ ಅಭ್ಯಾಸ ಅಧ್ಯಾಯನ ನಡೆಸುತ್ತಿದ್ದರು. ಇಂದು ಹೀಗೆ ಸಿಗುವುದು ಅಪರೂಪವಾಗಿರುತ್ತದೆ.

## ಓದಿಸುವ ಮಠಗಳು

ವಿರಕ್ತ ಸಂಪ್ರದಾಯದ ಮಠಗಳು ಪ್ರಾಚೀನ ಕಾಲದಲ್ಲಿ ಓದಿಸುವ ಮಠಗಳೆಂದೇ ಪ್ರಖ್ಯಾತಿ ಪಡೆದವುಗಳಾಗಿದ್ದವು. ಈ ''ಸಾಲಿ'' ಮಠಗಳು ಕೈಗಾರಿಕಾ ಕೆಲಸಗಳಲ್ಲಿ ಹೆಚ್ಚಾಗಿ ಆಸಕ್ತಿ ವಹಿಸುತ್ತಿದ್ದವು. ಆದರೆ ಈ ಮಠಗಳಲ್ಲಿ ಕೇವಲ ಅಧ್ಯಾಪನ - ಕಲಿಸುತ್ತಿದ್ದರು. ''ಓದಿಸುವ ಮಠ'' ಗಳಲ್ಲಿ ಯಾವುದೆ ಕೈಕೆಲಸಗಳಿರಲಿಲ್ಲ ಓದು ಬರಹ ಇಲ್ಲಿ ಕಲಿಸಲಾಗುತಿತ್ತು. ಸಾಲಿ ಮಠದಲ್ಲಿ ಅಧ್ಯಯನ ಮುಗಿಸಿದ ನಂತರ ಅನೇಕ ವಿದ್ಯಾರ್ಥಿಗಳು ಈ ಮಠಗಳಲ್ಲಿ ಇತರ ವಿಷಯಗಳ ಜತೆಗೆ ಸಾಹಿತ್ಯಾಭ್ಯಾಸವನ್ನು ಮಾಡುತ್ತಿದ್ದರು. ಕ್ರಿ.ಶ. ಹತ್ತೊಂಬತ್ತನೆಯ ಶತಮಾನದ ಕೊನೆಗೆ ಓದಿಸುವ ಮಠಗಳು ಸಂಸ್ಕೃತ ಪಾಠ ಶಾಲೆಗಳಾಗಿ ಪರಿವರ್ತಿತವಾದವು. ''ಓದಿಸುವ ಮಠಗಳನ್ನು ಈಗ ''ಉದಾಸಿ ಮಠ'' ಗಳೆಂದು ಕರೆಯಲಾಗುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಅನೇಕ ಹಿರೇಮಠಗಳು ಓದಿಸುವ ಮಠಗಳಂತೆ ಕಾರ್ಯಮಾಡಿದವು''[೬೨]. ಓದಿಸುವ ಮಠಗಳು ಮುಖ್ಯವಾಗಿ ಹಿರೇಮಠಗಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತಿತ್ತು, ಮುಂದೆ ವಿರಕ್ತ ಮಠಗಳಲ್ಲಿಯೂ ಹೆಚ್ಚಾಗಿ ಕಾಣುತ್ತವೆ. ಇಂತಹ ಮಠಗಳಲ್ಲಿ ಸಾಹಿತ್ಯಿಕ ಕೊಡುಗೆಗಳನ್ನು ಕೊಟ್ಟಿರುವುದು ಇಲ್ಲಿ ಕಾಣಬಹುದು.

''ಓದಿಸುವ ಬೀದರ ಹಳ್ಳಿಯ ಮಠದಲ್ಲಿ ಕುಳಿತು ಮುಗಿಯ ಬರಹದ ಮಲ್ಲಪದೇವರ ಹಸ್ತಾಂತರ''[೬೩]. ಈ ಪುಸ್ತಕ ಬರೆದವರು ಯಾರುಯೆಂದರೆ ಶಿಂತ ಕೆಲೂರ ಪೊನಿಸೊ ಮಠದ ಮುದ್ದು ಸಂಗಪ್ಪಗಳ ತನುದ್ಭವರಾದ ಗುರುಪಾದಯ್ಯನವರು ತಮ್ಮ ಸುಹಸ್ತದಿಂದ ಬರೆದುಯಿದ್ದಾರೆ.''[೬೪]. ಇಂತಹ ಉಲ್ಲೇಖಗಳು ಸಿಗುವುದರಿಂದ ''ಓದಿಸುವ ಮಠಗಳು'' ಗುರುಗಳು ಸಾಹಿತ್ಯ ಸೃಷ್ಟಿಗೈಯುತ್ತಿದ್ದರೆಂದು ಹೇಳಬಹುದು. ಇದಲ್ಲದೆ ಕೆಲವು ಮಠಗಳಲ್ಲಿ ಒಂದು ಕೃತಿಯ ಪ್ರತಿಗಳು ಒಂದಕ್ಕಿಂತ ಹೆಚ್ಚು ಕಾಣಸಿಗುತ್ತವೆ. ಇವಕ್ಕೆ ಕಾರಣ ಬಹುಶಃ ಭಕ್ತರು ತಮ್ಮ ಇಚ್ಛಾನುಸಾರ ಕಾಲಕಾಲಕ್ಕೆ ಬರೆದು ಅರ್ಪಿಸಿದುದು ಇಲ್ಲವೆ ಈ

ಸಾರ್ವಜನಿಕ ಭಂಡಾರಗಳಲ್ಲಿ ಓದಲು ಏಕಕಾಲಕ್ಕೆ ಹಲವು ಪ್ರತಿಗಳು ಬೇಕೆಂಬುದು ಇದಕ್ಕೆ ಕಾರಣವಾಗಿರಬಹುದು''[೬೫]. ಮಠಗಳಲ್ಲಿ ಓದು ಮತ್ತು ಬರಹಗಳಿಗೆ ಸಮಯ ಕೊಡುತ್ತಿದ್ದರು. ಅನ್ಯ ಕಾಯಕಕ್ಕೆ ಅಲ್ಲಿ ಆಸ್ಪದವಿರುವುದು ತೀರಾ ಅಪರೂಪ. ಮಠಗಳು ಗ್ರಂಥಾಲಯಗಳಿದ್ದಂತೆ ಇರುತ್ತಿದ್ದವು. ಈ ಮಠಗಳಲ್ಲಿ ಎಲ್ಲ ವರ್ಗದ ಜನರಿಗೆ ಮುಕ್ತ ಅವಕಾಶವಿರುತ್ತಿತ್ತು. ಇಂದು ಕೆಲವೊಂದು ಮಠಗಳಲ್ಲಿ ಮಾತ್ರ ಅಲ್ಪಮಟ್ಟಿನ ಗ್ರಂಥಗಳು ದೊರೆಯುತ್ತವೆ. ಸಾಹಿತ್ಯಾ ಸಕ್ತಿ ಕಡಿಮೆಯಾಗುತ್ತಿದೆ.

ಹೀಗೆ ವೀರಶೈವ ಮಠಗಳಲ್ಲಿ ವಿವಿಧ ವೃತ್ತಿಯ ಆಧಾರದ ಮೇಲೆ ಮಠಗಳನ್ನು ಹೆಸರಿಸಬಹುದು. ಮಠಗಳು ಧಾರ್ಮಿಕ ಜತೆಗೆ ಸಾಂಸ್ಕೃತಿಕ ಸಾಹಿತ್ಯಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳಲ್ಲಿ ತಮ್ಮ ಕಾರ್ಯವನ್ನು ಮಾಡುತ್ತಿದ್ದವು.

"ಕಡಿತ ಹಲಗೆ ಬಳಹ ವೋಲೆ ಕಂಠವ
ಪಿಡಿದು ಹಸ್ತದಿ ವಿನೋದದಲ್ಲಿ
ಸಡಗರದಿಂದ ಮಠಕ್ಕೆ ಪೋಪ ಕುವರರ
ವೃಂದವ ಕಂಡಳಾ ಚದುರೆ''.[೬೬]

– ಎಂಬ ವಾಕ್ಯವು ವೀರಶೈವ ಮಠಗಳಲ್ಲಿನ ಸಾಹಿತ್ಯವನ್ನು ಕಾವ್ಯದ ಮೂಲಕ ತಿಳಿಸಿದ್ದಾರೆ. ಮಠಗಳಲ್ಲಿ ಶೈಕ್ಷಣಿಕ ಕೇಂದ್ರಗಳಾಗಿದ್ದವೆಂದು ಒಪ್ಪಬೇಕಾಗುತ್ತದೆ. ಅಲ್ಲಿದ್ದ ಶಿಕ್ಷಣಕ್ಕೆ, ಹೆಚ್ಚಿನ ಪ್ರೋತ್ಸಾಹ ಕೊಡುತ್ತಿದ್ದರೆಂದು ತಿಳಿದುಬರುತ್ತದೆ.

## ೪. ಮಹತ್ವ

ಪ್ರಾಚೀನ ಕಾಲದಲ್ಲಿ ವೀರಶೈವ ಮಠಗಳಿಗೆ ಮಹತ್ವದ ಸ್ಥಾನವಿತ್ತು. ಐತಿಹಾಸಿಕ ಪರಂಪರೆ ಹೊಂದಿದ ಮಠಗಳು ಸಾಮಾಜಿಕ ಧಾರ್ಮಿಕ, ಸಾಹಿತ್ಯಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ಮಹತ್ವದ ಪಾತ್ರ ವಹಿಸಿವೆ. ಭಾರತೀಯ ಇತಿಹಾಸದಲ್ಲಿ ಅರಮನೆಗೆ ಪರಂಪರೆ ಇರುವಂತೆ ಗುರು ಮನೆಗಳಲ್ಲಿ ಮಹತ್ವದ ಸ್ಥಾನವಿದೆ. ಋಷಿ ಮುನಿಗಳ ಆಶ್ರಯದಲ್ಲಿಯೇ ಭಾರತೀಯ ಸಂಸ್ಕೃತಿ ಬೆಳೆದು ಬಂದಿದೆ. ಲೌಕಿಕದೊಂದಿಗೆ ಪರಮಾರ್ಥಿಕ ವಿದ್ಯೆಯನ್ನು ಐಹಿಕ ಭೋಗಗಳೊಂದಿಗೆ, ಆ ಮುಷ್ಮಿಕ ಸಿದ್ಧಿಯನ್ನು ಸಾಧಿಸುವ ಕಲೆಯನ್ನು ಕಲ್ಪಿಸುವ ಸತ್ಪರಂಪರೆ ಗುರು ಕುಲಗಳಿಗೆ, ಋಷಿ ಮುನಿಗಳ ಆಶ್ರಮಗಳಿಗಿವೆ. ರಾಜಕುಮಾರರು ಬ್ರಹ್ಮಚಾರಿಗಳಾಗಿ ಆಶ್ರಮದಲ್ಲಿದ್ದ ಗುರುಸೇವೆ ಮಾಡುತ್ತ ನೀತಿಧರ್ಮಗಳನ್ನು ಶಸ್ತ್ರ–

ಶಾಸ್ತ್ರವಿದ್ಯೆಗಳನ್ನು ಕಲಿಯುತ್ತಿರಲಿಲ್ಲವೇ? ಜೀವನೋಪಾಯಕ್ಕೆ ಕಾಯಕ ಕಲೆಯನ್ನು ಕಲಿಯುತ್ತಿದ್ದರಲ್ಲದೆ, ಕೀರ್ತಿ ವಾರ್ತೆಗಾಗಿ ರಾಜ್ಯ ಸಂಪಾದನೆಗಾಗಿ ಧನುರ್ವಿದ್ಯೆಯನ್ನು ಸಂಪಾದಿಸುತ್ತಿದ್ದರು. ಆತ್ಮ ವಿಕಾಸಕ್ಕಾಗಿ ಆಧ್ಯಾತ್ಮಿಕ ಅನುಭವಗಳನ್ನು ಮಾಡಿಕೊಳ್ಳುತ್ತಿದ್ದರು. ಧರ್ಮ ಗುರುಗಳಾದ ವಟುಗಳೊಂದಿಗೆ ದೇಶವನ್ನು ರಕ್ಷಿಸುವ ರಾಜಕುಮಾರರಿಗೆ ಅಧ್ಯಯನ ಮಾಡುವ ಕಮ್ಮಟಗಳಾಗಿದ್ದವು''[೬೭]. ಸಾಮಾಜದ ಒಳತಿಗಾಗಿ ಮಠಗಳು ವಿವಿಧ ರೀತಿಯಲ್ಲಿ ಮಹತ್ವಕಾರ್ಯಗಳು ಮಾಡುತ್ತಿರುವುದು ಕೆಳಗಿನಂತೆ ವಿವರಿಸಲಾಗಿದೆ.

ಧರ್ಮ ತತ್ವಗಳ ಪ್ರಚಾರ

ಮಠಗಳ ಪೀಠಾಧಿಪತಿಗಳು ವೀರಶೈವ ಧರ್ಮದ ಸಂಘಟನೆ ಮಾಡುವುದು. ಸಂಘಟನೆಯಿಂದ ಧರ್ಮ ತತ್ವಗಳ ಜಾಗೃತಿ ಪ್ರಚಾರ ಮಾಡುವುದು. ಹಳ್ಳಿ – ಪಟ್ಟಣಗಳಿಗೆ ಸಂಚರಿಸಿ ಸಮಾಜದ ಕಲ್ಯಾಣ ಮಾಡುವುದು, ಧರ್ಮವನ್ನು ಬೆಳೆಯಿಸಿ, ಧರ್ಮ ಕಾಪಾಡುವುದು. ಮಠಗಳಲ್ಲಿರುವ ಧಾರ್ಮಿಕ ಹಸ್ತಪ್ರತಿಗಳನ್ನು ಸಂರಕ್ಷಿಸುವುದು. ಧರ್ಮ ರಕ್ಷಣೆಯ ಉದ್ದೇಶದಿಂದ ಮಠಗಳಲ್ಲಿ ಪುರಾಣಪ್ರವಚನ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಸುತ್ತಿದ್ದರು. ''ಭಾರತದ ಪ್ರಥಮ ರಾಷ್ಟ್ರಪತಿಯಾದ ಡಾಃ ರಾಜೇಂದ್ರ ಪ್ರಾಸಾದ ಹೇಳಿರುವಂತೆ ಮಠವೆಂದರೆ ಕೇವಲ ಒಂದು ಭವ್ಯ ಕಟ್ಟಡವಲ್ಲ, ಅದೊಂದು ಧಾರ್ಮಿಕ ಸೌಧನವಾಗಿ ಸಮಸ್ತ ಸಮಾಜವೇ ಸಾಂಘಿಕವಾಗಿ ವಿಕಾಸಗೊಳ್ಳುವಂತೆ ಮಾಡುವ ಪೂಜಾಗ್ರಹ ಎನ್ನಬಹುದು''. ಮಠಗಳು ಮಾನವ ಕುಲದ ನಂದಾದೀಪಗಳು, ಮಠಗಳಿಂದಲೇ ಭಾರತದ ಸಂಸ್ಕೃತಿ ಉಳಿದಿರುವುದು[೬೮]. ಎಂದು ಹೇಳಿದ ಮಾತು ಧಾರ್ಮಿಕ ಕ್ಷೇತ್ರದಲ್ಲಿ ಮಠಗಳು ಪ್ರಚಾರ ಮಾಡಿ, ಉಪನ್ಯಾಸ, ಉಪದೇಶಗಳ ಗೋಷ್ಠಿಗಳನ್ನು ನಡೆಸಿಕೊಂಡು ಬಂದವೆಂದು ತಿಳಿದು ಬರುತ್ತದೆ''.

ಧರ್ಮದ ಉಪಕರಣವಾದ ಮಠಗಳ ಹೊಸ ಪರಿಸ್ಥಿತಿಗೆ ಅನುಗುಣವಾಗಿ ನವಿನ ಹಕ್ಕು ಹೊಣೆಗಳನ್ನು ಪಡೆದವು. ವೈರುದ್ಯವೆಂಬಂತೆ ಅತ್ಯಂತ ಸೋಜಿಗವೆಂಬಂತೆ ಲೌಕಿಕ ಮತ್ತು ವೈಜ್ಞಾನಿಕ ಪ್ರಭಾವದ ಹೆಚ್ಚಳವನ್ನು ಕಂಡುಂಡ ಅಧುನಿಕ ವಾತಾವರಣದಲ್ಲಿ ಮಠಗಳ ಮತ್ತು ಮಠಾಧೀಶರ ಪೀಠಗಳ ಮತ್ತು ಪೀಠಾಧಿಪತಿಗಳ ದೇವಸ್ಥಾನ ಮತ್ತು ಪೂಜಾರಿಗಳ ಧಾರ್ಮಿಕ ಕ್ರೀಯಾವಿಧಿಗಳ ಆಚರಣೆಗೆ ಮತ್ತು ಭಕ್ತಿವೃಂದಗಳ ಸಂಸ್ಥೆಯು/ಏರುತ್ತ ನಡೆಯುತ್ತಿದೆ. ಆ ಧಾರ್ಮಿಕ ಎಂದು ಹೇಳುವುದು ಕಠಿಣವಾದರೂ,

ಧಾರ್ಮಿಕ ಚಿಂತನಾಚಾರಣೆಗಳಿಗೆ ಸಾಪೇಕ್ಷವಾಗಿಯಾದರೂ ಅತೀವವಾದ ಚಟುವಟಿಕೆಗಳನ್ನು ಮಠಗಳು ಕೈಗೊಳ್ಳುತ್ತಿರುವುದು ನಾವು ಕಾಣುತ್ತೇವೆ''.[೧೯]

ಹೀಗೆ ವೀರಶೈವ ಮಠಗಳು ಧಾರ್ಮಿಕ ಪ್ರಚಾರದಲ್ಲಿ ತೊಡಗಿ ವಚನ ಸಾಹಿತ್ಯದ ರಕ್ಷಣೆಯನ್ನು ಮಾಡುತ್ತಿವೆ. ಜತೆಗೆ ಬಸವ ತತ್ವದ ಪ್ರಚಾರ ಮಾಡುತ್ತವೆ. ಪರಧರ್ಮದವರೊಡನೆ ನಿಕಟ ಸಂಬಂಧವನ್ನಿಟ್ಟುಕೊಳ್ಳುತ್ತಿವೆ. ದಯವಿಲ್ಲದ ಧರ್ಮದಾವುದಯ್ಯಾ ದಯವೇ ಬೇಕು ಸಕಲ ಪ್ರಾಣಿಗಳಲ್ಲಿಯೂ ದಯವೇ ಧರ್ಮದ ಮೂಲವಯ್ಯ ........ ಎಂಬ ಬಸವಣ್ಣನವರು ಬಿತ್ತಿದ ಧರ್ಮದ ಬೀಜವನ್ನು ಅಂದಿನ ಮಠಗಳು ಪಾಲಿಸಿಕೊಂಡು ಬರುತಿದ್ದವು. ಭಕ್ತರಿಗೆ ಲಿಂಗದೀಕ್ಷೆಯನ್ನು ಕೊಟ್ಟು ಸುಮಾರ್ಗದಲ್ಲಿ ನಡೆಯಲು ಕಲಿಸಿದರು.

## ಸಾಮಾಜಿಕ ಸೇವೆ

ಧರ್ಮದ ಸಂಘಟನೆ ಮತ್ತು ಪ್ರಚಾರಗಳು ಮಠಗಳ ಪ್ರಥಮ ಮಹತ್ವದ ಕರ್ತವ್ಯವಾದರೂ, ಸಮಾಜ ಸುಧಾರಣೆಯು ಮಠಗಳ ಎರಡನೆ ಪ್ರಮುಖ ಅಂಶವಾಗಿದೆ. ಮಠಾಧೀಶರು ತಮ್ಮ ವಿಚಾರಗಳನ್ನು ತಾತ್ವಿಕ ಚಿಂತನೆಗಳನ್ನು ಕಾರ್ಯಲೋಚನೆಗಳನ್ನು, ಅನುಷ್ಠಾನ ಮಾರ್ಗಗಳನ್ನು, ಶರಣರ ವಚನಗಳ ವಾಗ್ಮಯದ ಮೂಲಕ ಜನ ಸಾಮಾನ್ಯರ ಜೀವನವನ್ನು ಸುಧಾರಿಸುವುದು. ''ಅಡವಿಯಲ್ಲಿಯ ಆಶ್ರಮ ಬೇರೆ ಊರಲ್ಲಿಯ ಮಠ ಬೇರೆ, ಒಂದರ ಗುರಿ ಆತ್ಮ ಕಲ್ಯಾಣ,ಇನ್ನೊಂದರ ಗುರಿ ಆತ್ಮ ಕಲ್ಯಾಣದೊಂದಿಗೆ ಸಮಾಜ ಕಲ್ಯಾಣ. ಹೀಗಾಗಿ ಮಠವೆನ್ನುವುದು ಧರ್ಮದೊಂದಿಗೆ ಸಮಾಜದ ಆರೋಗ್ಯಕ್ಕೆ ಅವಶ್ಯಕವಾಗಿರುವ ಶಿಕ್ಷಣ ಪ್ರಸಾರ, ಸಾಹಿತ್ಯ ಸೃಷ್ಟಿ, ನ್ಯಾಯ ಪರಿಪಾಲನೆ ಔಷದೋಪಚಾರ, ವೃತಿವ್ಯವಸ್ಥೆ ಕಲಾಪೋಷಣೆ, ಸಂಸ್ಕೃತಿ ಸಂವರ್ಧನೆ, ಇತ್ಯಾದಿ ಚಟುವಟಿಕೆಗಳಿಗೆ ಚ್ಯುತಿ ಬಾರದಂತೆ ನೋಡಿಕೊಳ್ಳುವ ಒಂದು ಸಾಮಾಜಿಕ ಸಂಸ್ಥೆ''.[೨೦] ಗಳಾಗಿ ಕೆಲಸ ನಿರ್ವಹಿಸುತ್ತಿವೆ. ಮಠಗಳು ಸಮಾಜದ ಅವಿಭಾಜ್ಯ ಅಂಗ, ಸರ್ವತೋಮುಖ ಬೆಳವಣಿಗೆಗಾಗಿ ಹಗಲಿರುಳು ಶ್ರಮಿಸುತ್ತಿವೆ. ಸಮಾಜದಲ್ಲಿ ತುಂಬಿರುವ ಕಲ್ಮಷಗಳನ್ನು ಹೊಗಲಾಡಿಸಲು ಪಾಠ –ಪ್ರವಚನಗಳ ಮುಖಾಂತರ ಅವರಲ್ಲಿ ಅರಿವಿನ ಬೀಜವನ್ನು ಬಿತ್ತುತ್ತಿದ್ದಾರೆ.

ಐತಿಹಾಸಿಕ ಪರಂಪರೆಯನ್ನು ಹೊಂದಿ ಮಠಗಳು ಸಾಮಾಜಿಕವಾಗಿ ಮಹತ್ವದ ಕೆಲಸಗಳನ್ನು ಮಾಡಿದವು. ''ಕಷ್ಟ ಕಾರ್ಪಣ್ಯಗಳ ಹೊಸಲಿನಲ್ಲಿ ಈಜುತ್ತಿರುವ ಸಂಸಾರಿಯು ಅದೆಷ್ಟೋ ಬಾರಿ ತನ್ನ ವಿಶಾಲ

ಭಾವನೆಯನ್ನು ಕಳೆದುಕೊಂಡು ಸಂಕುಚಿತವಾಗಿ ದ್ವೇಷಾಸೂಯೆಗಳಿಗೆ ಎಡೆ ಮಾಡಿಕೊಡುತ್ತದೆ. ದ್ವೇಷಾಸೂಯೆಗಳಿಗೆ ಎಡೆಯಿತ್ತೊಡನೆ ಮಾನವ ದಾನವ ನಾಗಿ ತಾನು ಮುಗ್ಗರಿಸುವುದು ಸಾಲದೆಂದು ಅನ್ಯರನ್ನು ಅದೋಗತಿಗಿಳಿಸಲು ಹವಣಿಸುತ್ತಾನೆ. ಇಂತಹ ಸಮಯದಲ್ಲಿ ಜನರನ್ನು ತಪ್ಪು ದಾರಿಗೆ ಬೀಳದಂತೆ ಎಚ್ಚರಿಸಲೋಸುಗವೇ ಗುರುವಾದವನು ಜನತೆಯ ಮಧ್ಯ ಮಠ ಕಟ್ಟಿಕೊಂಡು ವಾಸಿಸುತ್ತಾನೆ''[೧೧]. ಅಂದು ಮಠಾಧಿಪತಿಗಳು ನಿಸ್ವಾರ್ಥದಿಂದ ಸೇವೆಯನ್ನು ಸಲ್ಲಿಸುತ್ತಿದ್ದರು.

ಸಮಾಜದಲ್ಲಿ ಅಸಮಾನತೆ ಅಸ್ಪೃಶ್ಯತೆ ಮೂಢನಂಬಿಕೆ, ತಾರತಮ್ಯ ಭಾವನೆ, ಮೇಲು ಕಿಳೆಂಬ ಅಂತಸ್ತುಗಳನ್ನು ನಿರ್ಮೂಲನೆ ಮಾಡಿ, ಶರಣರ ಸಮಾಜದಂತೆ ''ಮಾನವರು ಎಲ್ಲರೂ ಒಂದೆ'' ಸಮಾಜ ಒಂದೆ, ಎಂಬ ತತ್ವವನ್ನು ಜನರಿಗೆ ಭೋಧಿಸುತ್ತಿದ್ದರು. ಸಮಾಜದಲ್ಲಿ ಪ್ರತಿಯೊಬ್ಬ ಮಾನವನಿಗೂ ಲಿಂಗದೀಕ್ಷೆಯನ್ನು ಕೊಟ್ಟು ಅವರಲ್ಲಿ ವೈಚಾರಿಕತೆಯ ಪ್ರಜ್ಞೆಯನ್ನು ಬೆಳಿಸುವುದು. ಭಕ್ತರೊಡನೆ ನಿಕಟ ಸಬಂಧವನ್ನಿಟ್ಟುಕೊಳ್ಳುವುದು ಸಮಾಜದಲ್ಲಿ ಎಷ್ಟೋ ಜನರು ತಂದೆ–ತಾಯಿ–ಬಂಧು ಬಳಗಗಳಿಲ್ಲದೆ ಇರುವ ಅನಾಥರನ್ನು ತಮ್ಮ ಮಠದಲ್ಲಿಟ್ಟುಕೊಂಡು ರಕ್ಷಿಸುವುದು, ಮಠಗಳಲ್ಲಿ ಕುಲ – ಗೋತ್ರ ಜಾತಿ – ಮತ ಪಂಥಗಳ ಭೇದವನ್ನು ಎಣಿಸದೆ ಅಂತರ್ಜಾತಿಯ ವಿವಾಹಕ್ಕೆ ಪ್ರೋತ್ಸಾಹ ನಿಡುವುದು.

ಮಠಗಳಲ್ಲಿ ಆರೋಗ್ಯ ಕೇಂದ್ರವನ್ನು ತೆರೆಯುವುದು, ಭಕ್ತರ ಆರೋಗ್ಯವನ್ನು ಕಾಪಾಡುವುದು, ಜತೆಗೆ ಮಠಕ್ಕೆಬಂದ ಭಕ್ತರಿಗೆ ಅನ್ನ ಛತ್ರ ವ್ಯವಸ್ಥೆ ಇಡುವುದು. ಬರಗಾಲದಲ್ಲಿ ಗಂಜಿ ಊಟ ನೀಡುವುದು. ಈ ಸಮಾಜದಲ್ಲಿ ಉತ್ತಮ ಸೇವೆಗೈದ ವ್ಯಕ್ತಿಗೆ ಸನ್ಮಾನಿಸಲಾಗುವುದು. ಇಂತಹ ಸಾಮಾಜಿಕವಾದ ಕಾರ್ಯಗಳನ್ನು ಮಾಡಲು ಈ ಮಠ ಮಹತ್ವಪೂರ್ಣಗಳಾಗಿವೆ.

ಲೌಕಿಕ ಹಿತಾಸಕ್ತಿಯನ್ನು ಕಡೆಗಣಿಸದೆ, ಪಾರ ಲೌಕಿಕ ಚಿಂತನೆಯಲ್ಲಿ ಸದಾ ತಮನ್ನು ತೊಡಗಿಸಿಕೊಂಡಿರುವ, ನಮ್ಮ ನಾಡಿನ ಪೀಠಾಧಿಪತಿಗಳು, ಭಕ್ತರು ಕಟ್ಟಿಸಿಕೊಟ್ಟ ಭವ್ಯವಾದ ಮಠಗಳಲ್ಲಿ ಕೇವಲ ಲಿಂಗ ಪೂಜೆ ಮಾಡುತ್ತ ತಮ್ಮ ಆತ್ಮೋದ್ಧಾರಕ್ಕೆ ಹಂಬಲಿಸಲಿಲ್ಲ. ರುದ್ರಾಕ್ಷಿ ಮಣಿಗಳೆನ್ನೆಣಿಸುತ್ತ ಜಪ – ತಪಗಳಲ್ಲಿ ತಲ್ಲಿನರಾಗಲಿಲ್ಲ. ವಿರಾಗಿ ವಿರಕ್ತರೆಂದು ಎಲ್ಲವನ್ನು ತ್ಯಜಿಸಿ ಗುಡ್ಡ – ಬೆಟ್ಟವನ್ನು ಸೇರಿ ತಪಸ್ಸನ್ನು ಗೈಯಲಿಲ್ಲ. ''ಭಕ್ತರ ಉದ್ಧಾರವೇ ಭಗವಂತನ ಸಾಕ್ಷಾತ್ಕಾರ'' ಜನ ಸೇವೆಯೇ ಶಿವಪೂಜೆ, ಪತಿತೋದ್ಧಾರವೆ ಪರಮಾತ್ಮನ ಆರಾಧನೆ, ಎಂಬ ವಿಚಾರ ಕ್ರಾಂತಿಯ ಹರಿಕಾರರಾಗಿ, ಜನತೆಯ ಮಧ್ಯದಲ್ಲಿದ್ದುಕೊಂಡು ಅವರ ಸುಖ ದುಃಖಗಳಿಗೆ ಸ್ಪಂಧಿಸುತ್ತ ಸಮಾಜದ ಒಳಿತಿಗಾಗಿ ತಮ್ಮ ಶಿವಬದುಕನ್ನು ಸಾಗಿಸಿ ಶಿವಾನುಭವಿಗಳಾಗಿ

ಜನರಿಗೆ ಸಮಾಜಕ್ಕೆ ಶಿವಬೆಳಕನ್ನು ನೀಡಿದ್ದಾರೆ. ಲೋಕದ ಮಧ್ಯದಲ್ಲಿದ್ದರೂ ನೀರ ತಾವರೆಯಂತೆ ಸಕಲ ಜೀವಿಗಳಿಗೆ ಲೇಸನ್ನೆ ಬಯಸುವ ಸ್ವಾಮಿಗಳವರು ವೈಯಕ್ತಿಕ ಸಾಧನೆ, ಸಿದ್ಧಿಗಳು, ಸಮಾಜದ ಬಹುಮುಖ ಶುದ್ಧಿಗಾಗಿ ಕೈಗೊಂಡ ಕಾರ್ಯಗಳು ನಾಡಿನ ಇತಿಹಾಸದಲ್ಲಿ ಒಂದು ಸುವರ್ಣ ಸಂಪುಟ ಚರಿತ್ರೆಯಲ್ಲಿ ಧವಳ ಕೀರ್ತಿ'' [೨]. – ಮಠಾಧಿಪತಿಗಳು ನಾಡಿನಲ್ಲಿ ಮಾಡಿರುವ ಸಾಮಾಜಿಕ ಸೇವೆ ಅವಿಸ್ಮರಣೆಯವಾದುದು. ಸಾಮಾಜದ ಜನತೆಯ ಸುಖವನ್ನು ಬಯಸಿದ ಮಠಗಳು ನಾಡಿನಲ್ಲಿ ಪ್ರೀತಿಗೆ ಪಾತ್ರವಾಗಿ ಬೆಳೆಯತೊಡಗಿದೆ.

## ಸಾಹಿತ್ಯಿಕ ಸೇವೆ

ಧಾರ್ಮಿಕ, ಸಾಮಾಜಿಕ, ಮಹತ್ವಗಳ ಜತೆಗೆ ಮಠಗಳು ಸಾಹಿತ್ಯಿಕವಾಗಿಯೂ ಮಹತ್ವ ಪೂರ್ಣವೆನಿಸಿದೆ. ಮಠಗಳಲ್ಲಿ ದೊರೆಯುವ ಧಾರ್ಮಿಕ ಹಸ್ತಪ್ರತಿಗಳು ಹಾಗೂ ವಿವಿಧ ಮಹಾನ ವಿದ್ವಾಂಸರು ಬರೆದ ಹಸ್ತಪ್ರತಿಗಳು, ಮಠಗಳು ಪ್ರಕಟಿಸುತ್ತ ಪ್ರಚೋದಿಸುತ್ತವೆ. ಧಾರ್ಮಿಕ ಗ್ರಂಥಗಳನ್ನು ಪ್ರಕಟಿಸಿ ಜನರ ಹೃದಯದಿಂದ ಹೃದಯಕ್ಕೆ ಮುಟ್ಟಿಸುವ ಕಾರ್ಯ ಮಾಡುತ್ತವೆ. ಸಾಹಿತ್ಯಿಕ ಸೇವೆಗಳ ಜತೆಗೆ ಶೈಕ್ಷಣಿಕ ರಂಗದಲ್ಲಿ ಪ್ರೇರೆಪಿಸಿವೆ. ಜನರ ಕಲ್ಯಾಣಕ್ಕಾಗಿ ಲೋಕದುದ್ಧಾರಕ್ಕಾಗಿಯೇ ಮಠಗಳಲ್ಲಿ ಶೈಕ್ಷಣಿಕ ಸಂಸ್ಥೆಯನ್ನು ತೆರೆದು ಅಕ್ಷರಜ್ಞಾನ ಕಲಿಸಲು ಮುಂದಾಗಿದ್ದವು. ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಮಾಡುವುದರೊಂದಿಗೆ, ನಾಡಿನಲ್ಲಿ ಸೇವೆ ಸಲ್ಲಿಸಿದವರಿಗೆ ಗೌರವಿಸಿ ಪ್ರಮಾಣ ಪತ್ರ ನೀಡುವುದು ಕಾಣುತ್ತದೆ.

ಹೀಗೆ ವೀರಶೈವ ಮಠಗಳು ಧಾರ್ಮಿಕ, ಸಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತಮ್ಮ ವ್ಯಾಪ್ತಿಯನ್ನು ಬೆಳೆಸಿದವು. ಅಂಥಹ ಮಠಗಳು ಇಂದು ಸಿಗುವುದು ತೀರಾ ಕಡಿಮೆ. ಮಠಗಳು ಸಿಕ್ಕರೂ, ಮಠದ ಪೀಠಾಧಿಪತಿಗಳು ಇಂತಹ ವಿವಿಧ ಕ್ಷೇತ್ರಗಳಲ್ಲಿ ಕಾರ್ಯ ಮಾಡಲು ತೀರಾ ಅಪರೂಪ. ಮಠಾಧೀಶರಿಗೆ ಸಮಾಜ ಸೇವೆಯ ಸಲ್ಲಿಸುವುದು ಕಡಿಮೆಯಾಗಿ ರಾಜಕೀಯ ರಂಗದಲ್ಲಿ ಹೆಚ್ಚು ಪಾತ್ರ ವಹಿಸಿರುವುದು ಕಂಡು ಬರುತ್ತವೆ.

ಆಧುನಿಕ ಕಾಲದ ಕೆಲವು ಮಠಗಳು ತಮ್ಮ ಹಿಂದಿನ ಪರಂಪರೆಯ ಸೇವೆ ಗೈಯುತ್ತಿವೆ. ಹಲವಾರು ಮಠಗಳು ನಸಿಸಿ ಹೋಗಿವೆ. ಕೆಲವು ಮಠಾಧಿಪತಿಗಳು ಹಣದ ಆಸೆಗಾಗಿ ಸಾರ್ವಜನಿಕ ಸೇವೆ ಮಾಡುವುದು ನಿಲ್ಲಿಸ್ದಾರೆ. ವೀರಶೈವ ಮಠಗಳು ಸಾರ್ವಜನಿಕರಿಗೆ ಉತ್ತಮ ಮಾರ್ಗದರ್ಶನವಾಗಿದ್ದವು. ''ಮಠ ದೇವಾಲಯ ಬಸದಿ ಮುಂತಾದ ನೆಲೆಗಳಲ್ಲಿ ವಾಸಿಸುತ್ತಿದ್ದ ಇಲ್ಲವೆ ಚಾತುರ್ಮಾಸ್ಯವನ್ನಾಚರಿಸುತ್ತಿದ್ದ ಯತಿಗಳು, ಸನ್ಯಾಸಿಗಳು ಮಠದೊಡೆಯರು ತಮ್ಮ ಸಾರ್ಥಕವಾದ ಕಾಲಯಪನೆಗಾಗಿಯೂ ಮತ್ತು ಬರವಣಿಗೆಯೂ, ನಿಷ್ಠಾ

ಪೂರ್ಣವಾಗಿ ಸಾಧಿಸಬೇಕಾದ ಒಂದು ಕಲೆಯೆಂಬ ಭಾವನೆಯಿಂದಲೂ ಹಸ್ತ ಪ್ರತಿಗಳ ಲೇಖಕ ಕಾರ್ಯವನ್ನು ಕೈಗೊಳ್ಳುತ್ತ ಬಂದಿರುವುದು ಸರ್ವ ಸಾಮಾನ್ಯವಾಗಿದೆ'' [೬೩]. ವೀರಶೈವ ಮಠಗಳಲ್ಲಿ ಲೇಖನ ಕಾರ್ಯ ಸಾಹಿತ್ಯಿಕ ವೃತ್ತಿಯನ್ನು ಕಲಿಸುತಿದ್ದದ್ದು ಕಂಗೋಳಿಸುತ್ತದೆ.

೫. ಮಠಾಧಿಪತಿಯ ಸ್ಥಾನ

ಮಠಗಳಲ್ಲಿ ಮಠಾಧಿಪತಿಯ ಸ್ಥಾನ ಅಗ್ರಗಣ್ಯವಾಗಿದೆ. ಮಠಾಧಿಪತಿಗಳಿಲ್ಲದ ಮಠಗಳು ಹಾಳುದೇಗುಲಗಳಂತೆ. ಮಂದಿರಗಳಲ್ಲಿ ಪೂಜಾರಿಗಳಿದ್ದಂತೆ, ಮಠಗಳಲ್ಲಿ ಮಠಾಧೀಶರಿರುತ್ತಾರೆ. ಮಠ ಮತ್ತು ಮಠಾಧೀಶರು ಒಂದು ನಾಣ್ಯದ ಎರಡು ಮುಖಗಳಿದ್ದಂತೆ, ಎರಡೂ ಕೂಡಿದಾಗ ಬೆಲೆ ಬರುವುದು ಖಂಡಿತ. ಈ ಸ್ಥಾನವನ್ನು ವಹಿಸಿಕೊಂಡ ಮಠಾಧಿಪತಿಯೂ ಯೋಗ್ಯವಾದ ಕಾರ್ಯಗಳನ್ನು ಕೈಗೊಳ್ಳಬೇಕಾಗುತ್ತದೆ. ಸಮಾಜದ ಎಲ್ಲಾ ವರ್ಗದ ಜನರೊಂದಿಗೆ ನಿಕಟ ಸಂಬಂಧವನ್ನಿರಿಸಿಕೊಂಡಿರಬೇಕು. ಮಠಾಧೀಶರ ಸ್ಥಾನ ಹೇಗಿರಬೇಕೆಂಬುದು ಕಟ್ಟಿಯ ಬಸವೇಶ್ವರರ ಒಂದು ವಚನವೇ ಮನವರಿಕೆಯಾಗುತ್ತದೆ.

''ಮಠಗಳೆಂದು ಮಠಸ್ಥರೆಂದು ಹೋಗಳಿಕೊಂಬರು ಮಠಗಳ
ಮಠಸ್ಥರ ಕರ್ತವ್ಯಗಳನ್ನರಿಯರು, ಅವುಗಳ ವಿವರ ಹೇಳಿಕೆ ಕೇಳಿರಯ್ಯ
ಆತ್ಮ ಭೋದ, ಜೀವನ ವಿದ್ಯಾಭ್ಯಾಸ ವಿಶ್ವಭ್ರಾತ ಪ್ರೇಮ
ದರಿದ್ರ, ದೀನ, ಅನಾಥ, ಸೇವೆ, ಸತ್ಯನ್ಯಾಯ ದಯಾಮಾನ
ಪ್ರಾಣಾಭಿಮಾನ ರಕ್ಷಣೆ – ಇಂತಿವೆ ಮಠಗಳ, ಮಠಸ್ಥರ
ಪಂಚ ಕರ್ತವ್ಯಗಳೆಂದರಿಯವುದು ಬಸವಲಿಂಗ ಪ್ರಿಯಾ ಕಟ್ಟಿಯ ಬಸವೇಶ್ವರನಲ್ಲಿ.'' [೬೪]

ಮಠಾಧಿಪತಿಯ ಸ್ಥಾನವನ್ನು ಸ್ವೀಕರಿಸುವರು ಆತ್ಮಜ್ಞಾನವಿರಬೇಕಾಗುತ್ತದೆ. ಅವರಲ್ಲಿ ಧರ್ಮದ ಬಗ್ಗೆ ಕಳಕಳಿವಿರಬೇಕು. ವಿಶ್ವದ ಜನತೆಗೆ ವಿಧ್ಯಾದಾನವನ್ನು ಕೊಡಿಸುವಂತವರಿರಬೇಕು. ಮಠಕ್ಕೆ ಬಂದ ಅನಾಥರ ಸೇವೆ ಮಾಡುವಂತರಿರಬೇಕು. ಮುಂತಾದ ಯೋಗ್ಯತೆಯುಳ್ಳವರಿಗೆ ಮಾತ್ರ ಮಠದ ಸ್ವಾಮಿಯೆಂದು ಕರೆಯಿಸಿಕೊಳ್ಳುತ್ತಾರೆಂದು ಮೇಲಿನ ವಚನದಿಂದ ತಿಳಿಯುತ್ತದೆ.

''ಸಮಾಜದಲ್ಲಿನ ಜನತೆಯ ಡೊಂಕುಗಳನ್ನು ತಿದ್ದಬೇಕಾದರೆ ಮೊದಲು ತಮ್ಮ ತಮ್ಮ ಡೊಂಕುಗಳನ್ನು ತಿದ್ದಿಕೊಳ್ಳಬೇಕು. ಅಂತರಂಗ ಬಹಿರಂಗಗಳೆರಡರಲ್ಲಿಯೂ ಶುದ್ದವಾಗಿರುವ ಯೋಗ್ಯರು ಮಠಗಳಲ್ಲಿರಬೇಕು. ಆಂತರಿಕವಾಗಿರುವ ವೈಯಕ್ತಿಕ ಮತ್ತು ಕಿರು ಬಣ್ಣಗಳ ದ್ವೇಶಾಸೂಯೆಗಳನ್ನು ಮಲೋತ್ಪಾಟನೆ ಮಾಡಿಕೊಂಡಿರಬೇಕು. ಮಠಗಳಲ್ಲಿ ಜಗಳಗಳು ಉಲ್ಬಣಗೊಳ್ಳದಂತೆ ನ್ಯಾಯಾಲಯಗಳ ಕಟ್ಟೆ ಹತ್ತದಂತೆ

ಎಚ್ಚರಿಕೆಯಿಂದ ನೋಡಿಕೊಳ್ಳಬೇಕು'' [೨೨]. ಜಂಗಮನ ಸುಳಿಯು ವಸಂತನ ಗಾಳಿಯಿದ್ದಂತೆ ಇರಬೇಕು. ಎಂದು ಹೇಳುವ ಮಾತಿನಲ್ಲಿ ಔಚಿತ್ಯಪೂರ್ಣವಿದೆ. ಅಧಿಕಾರ ಬಂದಾಗ ಮಠಾಧೀಶರು ಭಕ್ತರಲ್ಲಿ ತಾರತಮ್ಯ ಭಾವನೆಯಿಂದ ನೋಡಬಾರದು. ಎಲ್ಲರು ನಮ್ಮವರು ನನ್ನವರು ಎಂಬ ದೊಡ್ಡ ಮನಸುಳ್ಳವರಾಗಬೇಕು. ''ಕಾಗೆ ಒಂದಗಳು ಕಂಡರೆ ಕರೆಯುವುದು ತನ್ನ ಬಳಗವನ್ನೆಲ್ಲವನ್ನುವಂತೆ ಸ್ವಾಮಿಗಳು ಭಕ್ತರಲ್ಲಿ ಉದಾರ ಪ್ರೇಮವನ್ನಿಟ್ಟುಕೊಂಡಿರಬೇಕು. ಎಲ್ಲ ಭಕ್ತರನ್ನು ಸಮಾನ ದೃಷ್ಟಿಯಿಂದ ನೋಡಿಕೊಳ್ಳಬೇಕು, ಭಕ್ತರಿಗೆ ಕೋಪದಿಂದ ನೋಡಬಾರದು. ಭಕ್ತರು ಕೊಪಗೊಳ್ಳ ದಂತೆ ಮಠಾಧೀಶರು ನಡೆದುಕೊಳ್ಳಬೇಕಾಗುತ್ತದೆ.

ಮಠಾಧಿಪತಿಯ ಸ್ಥಾನ ವಹಿಸಿಕೊಳ್ಳುವವರು ಬ್ರಹ್ಮಚಾರಿಯಾಗಿರಬೇಕು. ವಿದ್ಯಾವಂತರಾಗಿರಬೇಕು. ಶಾಂತ ಸ್ವಭಾವದವರಾಗಿರಬೇಕು. ಸಮಾಜದ ಕಲ್ಯಾಣದ ಚಿಂತೆ ಮಾಡುವಂತಿರಬೇಕು. ತಪಸ್ವಿಯಾಗಿರಬೇಕು. ದುಷ್ಟಟಗಳಿಗೆ ದೂರವಿರಬೇಕು ಅಂತರಂಗ ಬಹಿರಂಗಗಳೆರಡು ಶುದ್ಧವಾಗಿರಬೇಕು. ಕಾಯಕ ಪ್ರೇಮಿಯಾಗಿರಬೇಕು, ಪಾಠ – ಪ್ರವಚನ ಬಲ್ಲವರಾಗಿರಬೇಕು. ಪರಧನ, ಪರಸ್ತ್ರೀ ಪರವಸ್ತು ಬೇಡವೆಂಬ ಛಲದವರಿರಬೇಕು. ತನ್ನ ಕುರಿತು ಬಂದ ಠಾವಿನಲ್ಲಿ ಸತ್ಯನಾಗಿರಬೇಕು. ಹಿತ ವಚನವ ನುಡಿಯಬೇಕು. ಲಿಂಗ ಜಂಗಮರಲ್ಲಿ ಕುಂದು ನಿಂದೆಗಳಿಲ್ಲದಿರಬೇಕು. ಅಪಾತ್ರ ದಾನವಗೆಯ್ಯುದಿರಬೇಕು. ಸಕಲ ಇಂದ್ರಿಯಾಗಳು ತನ್ನ ವಶಗತವಾಗಿರಬೇಕು. ಛಲ ಬೇಕು ಶರಣಂಗೆ ಪರಧನವನೊಲ್ಲೆನೆಂಬ, ಛಲಬೇಕು ಶರಣಂಗೆ ಲಿಂಗ ಜಂಗಮ ಒಂದೇ ಎಂಬ ಶರಣರ ವಚನಕ್ಕೆ ವಿರುದ್ಧವಾಗದಂತೆ ಮಠಾಧೀಶರು ಸೂಕ್ಷ್ಮವಾಗಿ ಸ್ಥಾನವನ್ನು ವಹಿಸಿಕೊಳ್ಳಬೇಕಾಗುತ್ತದೆ.

ಬಾಲ್ಯದಿಂದಲೇ ಆರೋಗ್ಯವಾಗಿರಬೇಕು, ಸ್ನೇಹಿತರ ಸಮುದಾಯ ಒಳ್ಳೆಯದಾಗಿರಬೇಕು. ''ಸತ್ಯಮೇವ ಜಯತೆ'' ಎಂಬ ಮಹಾ ಮಂತ್ರವನ್ನು ಗಟ್ಟಿಯಾಗಿ ಹಿಡಿದಿರಬೇಕು. ಮಠಕ್ಕೆ ಬರುವ ಭಕ್ತರ ಅಂತರಗದಲ್ಲಿನ ಕಲ್ಮಷಗಳನ್ನು ಹೋಗಲಾಡಿಸಬೇಕು. ಅಸೆಯಾಮಿಷ,ತಾಮಸ, ಹುಸಿ, ವಿಷಯ, ಕುಟಿಲ, ಕುಹಕ,ಕ್ರೋಧ, ಕ್ಷುದ್ರ, ಮಿಥ್ಯ ಇವನ್ನೆಲ್ಲಾ ನಾಲಿಗೆಯಾ ಮೆಲಿಂದ ತೆಗೆದು ಕಳೆಯಯ್ಯ ಅದೆಕಂಡಡೆ ನಿಮ್ಮತ್ತಲೆನ್ನ ಬರಲಿಯವು, ಇದು ಕಾರಣ ಇವೆಲ್ಲನ ಕಳೆದು ಎನ್ನ ಪಂಚಯ್ಯವರ ಭಕ್ತರ ಮಾಡು ಎಂದು ಕಠೋರವಾಗಿ ನುಡಿಯುವಘನ್ನು ಮಠದ ಮರಿಯನ್ನಾಗಿ ಮಾಡಲು ಯೋಗ್ಯರೆಂದು ಬಸವಣ್ಣನವರ. ಷಟ್‌ಸ್ಥಳ ತಿಳಿಸುತ್ತದೆ. ಆಧ್ಯಾತ್ಮಿಕ ವಿದ್ಯಾ ಬಲ್ಲವರಾಗಿರಬೇಕು, ತತ್ವ ನಿಷ್ಟರಾಗಿರಬೇಕು. ಹಾನಗಲ್ಲ ಕುಮಾರ ಸ್ವಾಮಿಗಳು ಸ್ಥಾಪಿಸಿದ ಶಿವಯೋಗ ಮಂದಿರದಲ್ಲಿ ಅಧ್ಯಾತ್ಮಿಕ ವಿದ್ಯೆ ಕಲಿಯಬೇಕು, ಧಾರ್ಮಿಕ ಪ್ರಚಾರ

ಮಾಡುವಂತಿರಬೇಕು. ಗಂಡು – ಹೆಣ್ಣು ಎಂಬ ಭೇದವನೆಣಿಸದವರಿರಬೇಕು. ಬಡವ ಬಲ್ಲಿದನೆಂದು ಭೇದ ಭಾವ ಮಾಡಕೂಡದಂತಿರಬೇಕು.

ಮಠಗಳ ಸುತ್ತ – ಮುತ್ತ ಪರಿಸರವು ಪವಿತ್ರವಾಗಿಡಬೇಕು, ನಸುಕಿನಲ್ಲಿಯೇ ಎದ್ದು ಕಸಬರಿಗೆ ಕೈಯಲ್ಲಿಡಿದುಕೊಂಡು ಮಠವನ್ನು ಹಸನು ಮಾಡಬೇಕು. ದಿನಾಲು ಎರಡು (ಬೆಳಿಗ್ಗೆ ನಸುಕಿನಲ್ಲಿ ಮತ್ತೆ ಸಾಯಂಕಾಲ ೮ ಗಂಟೆಗೆ) ಸಮಯ ಸ್ನಾನ ಮಾಡಿ ಪೂಜೆಯನ್ನು ಮಾಡಿಕೊಳ್ಳಬೇಕು. ಹುಳಿ ಉಪ್ಪು ಖಾರಾ ಕಡಿಮೆ ಪ್ರಮಾಣದಲ್ಲಿ ಸೇವಿಸಬೇಕು. ಹೆಚ್ಚು ಬಾಯಿ ಬಡಿಯಬಾರದು. ತಣ್ಣೀರು ಸ್ನಾನವೇ ಮಾಡಬೇಕು. ಮಠಗಳಲ್ಲಿ ಹೆಣ್ಣು ಮಕ್ಕಳಿಗೆ ವಾಸ್ತವ್ಯ ಕೊಡಬಾರದು. ಭಕ್ತರು ಸದುವಿನಯ ಸಂಪನ್ನರು ಭ್ರಷ್ಟಮನಸ್ಸಿನಿಂದ ವಿಧೂರನ ಆಗಿರುವಂತೆ ನೋಡಿಕೊಳ್ಳುವುದು ಅವರ ಆದ್ಯ ಕರ್ತವ್ಯವಾಗಿರುತ್ತದೆ. ದುರ್ವೆಸನಗಳಿಗೆ ತುತ್ತಾದ ವ್ಯಕ್ತಿಗಳನ್ನು, ಸರಿಯಾದ ಮಾರ್ಗದಲ್ಲಿ ತರಲು ಹಲವಾರು ಉಪಾಯದ ಮಾರ್ಗಗಳನ್ನು ಹುಡುಕುವಂತಿರಬೇಕು.

ಮಠಾಧಿಪತಿಗಳು ಹಳ್ಳಿಪಟ್ಟಣಗಳಿಗೆ ಸಂಚರಿಸಿ ಧರ್ಮದ ಸಂಘಟನೆ ಮಾಡುವಂತರಿರಬೇಕು. ಜಾತೀಯತೆ ಮತ್ತು ಮೂಢನಂಬಿಕೆಯನ್ನು ಹೋಗಲಾಡಿಸಬೇಕು, ಸಮಾಜದಲ್ಲಿ ಮಾನವನಿಗೆ ಲಿಂಗಧಾರಣೆ ಹಾಗೂ ಲಿಂಗದೀಕ್ಷೆ ಕೂಡುವ ಕಾರ್ಯ ಕೈಗೊಳ್ಳಬೇಕು. ಮಠಗಳಲ್ಲಿ ಹಾಗೂ ಇನ್ನಿತರ ಸ್ಥಳಗಳಲ್ಲಿ ವಚನ ಸಾಹಿತ್ಯದ ರಕ್ಷಣೆಯನ್ನು ಮಾಡುವಂತಿರಬೇಕು. ಅನಾಥರ ಸೇವೆ ಸಲ್ಲಿಸಬೇಕು. ಅಂತರ್ಜಾತಿ ವಿವಾಹಕ್ಕೆ ಪ್ರೋತ್ಸಾಹ ನೀಡಬೇಕು. ವರದಕ್ಷಿಣೆಯನ್ನು ನಿಷೇಧಿಸಬೇಕು, ಪರಧರ್ಮದವರೊಡನೆ ನಿಕಟ ಸಂಬಂಧಗಳನ್ನಿಟ್ಟುಕೊಳ್ಳಬೇಕು. ಅವರನ್ನು ಕಂಡು ಹಂಗಿಸಬಾರದು. ಅವರ ಒಳ್ಳೆತನಗಳನ್ನು ಎತ್ತಿ ಹೇಳಬೇಕು. ಭಕ್ತರಿಂದ ಯಾವುದೇ ರೀತಿಯ ಕಾಣಿಕೆ ತೆಗೆದುಕೊಳ್ಳಬಾರದು.

ಒಟ್ಟಾರೆಯಾಗಿ ಮಠಗಳ ಮಠಾಧೀಶರು ಸಮಾಜದ ಸೇವಕರಾಗಬೇಕು, ಅವರು ಯಾವುದೇ ರೀತಿಯ ಆಸೆ ಆಕಾಂಕ್ಷೆಗಳಿಗೆ ಒಳಗಾಗಬಾರದು. ತಾನು ಮಾಡಿದ್ದೂ, ಮತ್ತು ಮಾಡುತ್ತಿರುವುದೇ ಜನರ ಹಿತಕೆಂದು ಭಾವಿಸಬೇಕು. ಆರ್ಥಿಕ ಸಂಪಾದನೆ ಮಾಡಬಾರದು, ಸಮಾಜ ಸುಧಾರಣೆಯ ಕಾರ್ಯಕ್ರಮಗಳು ನಡೆಸಬೇಕು. ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಹಾಗೂ ಸಾಂಸ್ಕೃತಿಕವಾಗಿ ಸೇವೆಯನ್ನು ಸಲ್ಲಿಸಬೇಕು. ಇಂತಹ ಮುಂತಾದ ಗುಣಗಳಿಗೆ ಅರ್ಹತೆ ಹೊಂದಿಕೊಳ್ಳುವವರೆ ನಿಜವಾದ ಮಠಗಳ ಮಠಾಧೀಶರು.

✲✲

## ಅಡಿ ಟಿಪ್ಪಣಿ

೧. ಎರಿಸೀಮೆ ಚೆನ್ನಪ್ಪ(ಸಂ), ಟಿ.ಆರ್. ಮಹಾದೇವಯ್ಯಾ (ಲೆ), ದಾಸೋಹ ಸಿರಿ; ಪುಟ ೪೩೪, ೧೯೮೧.

೨. ಡಾ. ಮಲ್ಲೇದೇವರು ಎಚ್.ಪಿ. (ಸಂ) ಡಾ. ಜಿ. ಶಿವರುದ್ರಪ್ಪಾ (ಲೆ), ಅರ್ಚನ; ಪುಟ ೧೦೦೫, ೧೯೮೪.

೩. ಡಾ. ಮಲ್ಲೇದೇವರು ಎಚ್.ಪಿ. (ಸಂ) ಡಾ. ಎಚ್. ಎಸ. ಸದಾಶಿವಯ್ಯಾ (ಲೆ), ಅರ್ಚನ; ಪುಟ ೯೯೮, ೧೯೮೪.

೪. ಎರಿಸೀಮೆ ಚೆನ್ನಪ್ಪ(ಸಂ), ಕೊಟ್ರೇಶ ಆರಾಧ್ಯ(ಲೆ), ದಾಸೋಹ ಸಿರಿ; ಪುಟ ೪೪೩, ೧೯೮೧.

೫. ಪಿ. ಎಂ. ಜಯಸೆಂದಿಲ್‌ನಾಥ, ಪವಿತ್ರ ಕ್ಷೇತ್ರಗಳು; ಪುಟ ೬, ೧೯೮೯.

೬. ಎರಿಸೀಮೆ ಚೆನ್ನಪ್ಪ (ಸಂ), ಡಾ. ಎಚ್. ಎಸ. ಸದಾಶಿವಯ್ಯಾ(ಲೆ), ದಾಸೋಹ ಸಿರಿ; ಪುಟ ೫೫೨, ೧೯೮೧.

೭. ಡಾ. ವ್ಹಿ. ಶಿವಾನಂದ, ಹೈದ್ರಾಬಾದ – ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು; ಪುಟ ೧೧, ೧೯೯೨.

೮. ಎರಿಸೀಮೆ ಚೆನ್ನಪ್ಪ (ಸಂ), ಷಣ್ಮುಖಯ್ಯಾ ಅಕ್ಕೂರ ಮಠ (ಲೆ), ದಾಸೋಹ ಸಿರಿ; ಪುಟ ೩೩೧, ೧೯೮೧.

೯. ಎರಿಸೀಮೆ ಚೆನ್ನಪ್ಪ (ಸಂ), ಷಣ್ಮುಖಯ್ಯಾ ಅಕ್ಕೂರ ಮಠ (ಲೆ), ದಾಸೋಹ ಸಿರಿ; ಪುಟ ೩೩೦, ೧೯೮೧.

೧೦. ಎರಿಸೀಮೆ ಚೆನ್ನಪ್ಪ (ಸಂ), ಷಣ್ಮುಖಯ್ಯಾ ಅಕ್ಕೂರ ಮಠ (ಲೆ), ದಾಸೋಹ ಸಿರಿ; ಪುಟ ೩೩೨, ೧೯೮೧.

೧೧. ಶಾಂತರಸ ರಾಯಚೂರ (ಸಂ), ಡಾ. ಜಿ. ಶಿವರುದ್ರಪ್ಪಾ (ಲೆ), ಕಾಯಕ ಪರಿಣಾಮಿ; ಪುಟ ೧೬೯, ೧೯೯೧.

೧೨. ಎರಿಸೀಮೆ ಚೆನ್ನಪ್ಪ (ಸಂ), ಷಣ್ಮುಖಯ್ಯಾ ಅಕ್ಕೂರ ಮಠ (ಲೆ), ದಾಸೋಹ ಸಿರಿ; ಪುಟ ೩೩೩, ೧೯೮೧

೧೩. ಫಾಲಾಕ್ಷ, ಕರ್ನಾಟಕ ಇತಿಹಾಸದ ಪರಿಚಯ, ಪುಟ ೧೩೨, ೧೯೮೯.

೧೪. ಡಾ. ಮಲ್ಲೇದೇವರು ಎಚ್.ಪಿ. (ಸಂ), ಡಾ. ಜಿ. ಶಿವರುದ್ರಪ್ಪಾ(ಲೆ), ಅರ್ಚನ; ಪುಟ ೧೦೦೬, ೧೯೮೪.

೧೫. ಡಾ.ಮಲ್ಲೇದೇವರು ಎಚ್.ಪಿ. (ಸಂ), ಡಾ. ಎಚ್. ಎಸ. ಸದಾಶಿವಯ್ಯಾ(ಲೆ), ಅರ್ಚನ; ಪುಟ ೯೯೯, ೧೯೮೪.

೧೬. ಡಾ. ಮಲ್ಲೇದೇವರು ಎಚ್.ಪಿ. (ಸಂ), ಡಾ. ಜಿ. ಶಿವರುದ್ರಪ್ಪಾ(ಲೆ), ಅರ್ಚನ; ಪುಟ ೧೦೦೩, ೧೯೮೪.

೧೭. ಡಾ. ಸಂಗಮೇಶ ಸೌದತ್ತಿಮಠ , ವೀರಶೈವ ವಿನ್ಯಾಸ; ಪುಟ ೨, ೨೦೦೦.

೧೮. ಸಿದ್ದಯ್ಯಾ ಪುರಾಣಿಕ, ಶರಣರ ಚರಿತಾಮೃತ; ಪುಟ ೬೩, ೧೯೯೭.

೧೯. ಡಾ. ಕೆ. ರವೀಂದ್ರನಾಥ, ಕನ್ನಡ ಸಾಹಿತ್ಯಕ್ಕೆ ಮಠ ಮಾನ್ಯಗಳ ಕೊಡುಗೆ;(ಮಹಾ ಪ್ರಬಂಧ ಅ ಪ್ರಕಟೀತ ಪುಟ ೧೦.)

೨೦. ಡಾ. ಮಲ್ಲೇದೇವರು ಎಚ್.ಪಿ. (ಸಂ), ಡಾ. ವಿಜಾಪುಧಿನ(ಲೆ), ಅರ್ಚನ; ಪುಟ ೯೨೨, ೧೯೮೪.

೨೧. ಪ್ರೊ: ಎಲ್. ಎಸ. ಶೇಷಗಿರಿರಾವ, ಕಿರಿಯರ ಕರ್ನಾಟಕ; ಪುಟ ೨೬೩, ೧೯೯೨.

೨೨. ಡಾ. ವೀರೇಶ ಬಡಿಗೇರ, ಉತ್ತರ ಕರ್ನಾಟಕ ಜಾನಪದ ಗೀತಮೇಳಗಳು; ಒಂದು ಸಾಂಸ್ಕೃತಿಕ ಅಧ್ಯಯನ; ಪುಟ ೩೮೪, ೧೯೯೯

೨೩. ಹಿರೇಮಲ್ಲೂರ ಈಶ್ವರನ್, ಲಿಂಗಾಯತ ಜೈನ ಮತ್ತು ಬ್ರಾಹ್ಮಣ ಮಠಗಳು, ತೌಲನಿಕ ಅಧ್ಯಯನ; ಪುಟ ೧೧, ೧೯೯೭

೨೪. ಎಪಿ ಗ್ರಾಫಿಕ್ ಆಫ್ ಇಂಡಿಯನ್ XV, ಪುಟ ೮೯; ೧೯೬೬.

೨೫. ಸೌತ್ ಇಂಡಿಯನ್ ಇಮೆಗ್ರಾಫಿಕ್ಸ್ IX, ಪುಟ ೧೨೮; ೧೯೬೬.

೨೬. ಸೌತ್ ಇಂಡಿಯನ್ ಇಮೆಗ್ರಾಫಿಕ್ಸ್ IX – ಪುಟ ೧೩೫; ೧೯೬೬.

೨೭. ಎ.ಆರ್.ಎನ್.ಎಸ್.ಇ.ಇ. ಪುಟ – ೨೮, ೧೯೨೭.

೨೮. ಸೌತ್ ಇಂಡಿಯನ್ ಇಮೆಗ್ರಾಫಿಕ್ಸ್ XX, ಸಂ. ೫೧, ಪುಟ ೬೩, ೧೯೨೭.

೨೯. ಸೌತ್ ಇಂಡಿಯನ್ ಇಮೆಗ್ರಾಫಿಕ್ಸ್ XX, ಸಂ. ೮೩; ಪುಟ ೧೦೫, ೧೯೬೬

೩೦. ಎಪಿ ಗ್ರಾಫಿಕ್ ಆಫ್ ಇಂಡಿಯನ್ V, ಪುಟ ೨೨; ೧೯೬೬.

೩೧. ಡಾ. ಎಂ. ಎಂ. ಕಲಬುರ್ಗಿ, ಕರ್ನಾಟಕ ಕೈಫಿಯತ್ತುಗಳು; ಪುಟ ೨೩೦, ೧೯೯೪.

೩೨. ಡಾ. ಎಂ. ಎಂ. ಕಲಬುರ್ಗಿ, ಕರ್ನಾಟಕ ಕೈಫಿಯತ್ತುಗಳು; ಪುಟ ೨೩೯, ೧೯೯೪.

೩೩. ಡಾ. ಎಂ. ಎಂ. ಕಲಬುರ್ಗಿ, ಕರ್ನಾಟಕ ಕೈಫಿಯತ್ತುಗಳು; ಪುಟ ೨೫೦, ೧೯೯೪.

೩೪. ಡಾ. ಎಂ. ಎಂ. ಕಲಬುರ್ಗಿ, ಕರ್ನಾಟಕ ಕೈಫಿಯತ್ತುಗಳು; ಪುಟ ೩೦೬, ೧೯೯೪.

೩೫. ಡಾ. ಎಂ. ಎಂ. ಕಲಬುರ್ಗಿ , ಕರ್ನಾಟಕ ಕೈಫಿಯತ್ತುಗಳು; ಪುಟ ೩೧೩, ೧೯೯೪.

೩೬. ಡಾ. ಎಂ. ಎಂ. ಕಲಬುರ್ಗಿ, ಕರ್ನಾಟಕ ಕೈಫಿಯತ್ತುಗಳು; ಪುಟ ೩೧೯, ೧೯೯೪.

೩೭. ಡಾ. ಎಂ. ಎಂ. ಕಲಬುರ್ಗಿ, ಕರ್ನಾಟಕ ಕೈಫಿಯತ್ತುಗಳು; ಪುಟ ೩೭೦, ೧೯೯೪.

೩೮. ಡಾ. ಎಂ. ಎಂ. ಕಲಬುರ್ಗಿ, ಕರ್ನಾಟಕ ಕೈಫಿಯತ್ತುಗಳು; ಪುಟ ೩೭೪, ೧೯೯೪.

೩೯. ಡಾ. ಎಂ. ಎಂ. ಕಲಬುರ್ಗಿ, ಸಮಗ್ರ ವಚನ ಸಯುಟ; (ಜೇಡರ ದಾಸಿಮಯ್ಯನ ವಚನ) ಸಂ ೪, ೧೯೮೬.

೪೦. ಡಾ. ಆರ್.ಸಿ. ಹಿರೇಮಠ, ಗುಮಳಾಪೂರದ ಸಿದ್ಧಲಿಂಗ ದೇವರ ಶೂನ್ಯಸಂಪಾದನೆ; ಪುಟ ೧೩೩, ೧೯೭೨.

೪೧. ಡಾ. ಆರ್.ಸಿ. ಹಿರೇಮಠ, ಗುಮಳಾಪೂರದ ಸಿದ್ಧಲಿಂಗ ದೇವರ ಶೂನ್ಯಸಂಪಾದನೆ; ಪುಟ ೧೧೭, ೧೯೭೨.

೪೨. ಡಾ. ಆರ್.ಸಿ. ಹಿರೇಮಠ, ಗುಮಳಾಪೂರದ ಸಿದ್ಧಲಿಂಗ ದೇವರ ಶೂನ್ಯಸಂಪಾದನೆ; ಪುಟ ೧೩೩, ೧೯೭೨.

೪೩. ಡಾ. ಆರ್.ಸಿ. ಹಿರೇಮಠ, ಗುಮಳಾಪೂರದ ಸಿದ್ಧಲಿಂಗ ದೇವರ ಶೂನ್ಯಸಂಪಾದನೆ; ಪುಟ ೧೪೦, ೧೯೭೨.

೪೪. ಡಾ. ಆರ್.ಸಿ. ಹಿರೇಮಠ, ಗುಮಳಾಪೂರದ ಸಿದ್ಧಲಿಂಗ ದೇವರ ಶೂನ್ಯಸಂಪಾದನೆ; ಪುಟ ೩೦೧, ೧೯೭೨.

೪೫. ಡಾ. ಎಲ್. ಬಸವರಾಜು(ಸಂ), ಅಲ್ಲಮನ ವಚನಗಳು; ಪುಟ ೨೦೬, ೧೯೯೫.

೪೬. ಡಾ. ಎಲ್.ಬಸವರಾಜು(ಸಂ), ಬಸವ ಪುರಾಣ, ಸಂಧಿ ೨೦, ಪದ್ಯ ೧೦,

೪೭. ಡಾ. ಎಲ್. ಬಸವರಾಜು, ಅಲ್ಲಮನ ವಚನಗಳು; ಪುಟ ೧೨೨, ೧೯೯೫.

೪೮. ನಿಸ್ವರ. ಎಂ. ಲೈಸಿರಿಯಾ, ಸೋಸಿಯಲ್ ಆ್ಯಂಡ ಏಕೋನೊಮಿಕ ಹಿಸ್ಟರಿ ಆಫ್ ಕರ್ನಾಟಕ; ಪುಟ ೧೮೪, ೧೯೬೮.

೪೯. ಡಾ. ಮಲ್ಲೇದೇವರು (ಸಂ), ಚಂದ್ರಶೇಖರಯ್ಯಾ (ಲೆ), ಅರ್ಚನ; ಪುಟ ೨೫, ೧೯೮೪.

೫೦. ಎರಿಸೀಮೆ ಚೆನ್ನಪ್ಪ (ಸಂ)ಡಾ. ಟಿ. ಆರ್. ಮಹಾದೇವಯ್ಯಾ, ದಾಸೋಹ ಸಿರಿ; (ಸಿದ್ಧಗಂಗಾ ಶ್ರೀ), ಪುಟ ೪೬, ೧೯೮೧.

೫೧. ಡಾ. ಸಂಗಮೇಶ ಸೌದತ್ತಿಮಠ, ಸನ್ನಿಧಿ:ಪುಟ ೧೦, ೧೯೯೬.

೫೨. ಡಾ. ಆರ್. ಸಿ. ಹಿರೇಮಠ, ಶಿವದೀಪ್ತಿ; ಪುಟ ೧೩೩, ೧೯೭೧.

೫೩. ಡಾ. ಜಿ.ಬಿ. ವಿಸಾಜಿ (ಲೆ) ಡಾ. ಚನ್ನವೀರ ಕಣವಿ ಮುನ್ನುಡಿ; ಡಾ. ಚನ್ನಬಸವ ಪಟ್ಟದೇವರು, ಪುಟ ೩, ೧೯೯೦.

೫೪. ಡಾ. ಆರ್. ಸಿ. ಹಿರೇಮಠ, ಗುಮಳಾಪೂರದ ಸಿದ್ಧಲಿಂಗದೇವರ ಶೂನ್ಯ ಸಂಪಾದನೆ; ೧೩೩, ೧೯೭೨.

೫೫. ಎರಿಸೀಮೆ ಚೆನ್ನಪ್ಪ (ಸಂ), ಡಾ. ಸಂಗಮೇಶ ಸೌದತ್ತಿಮಠ (ಲೆ), ದಾಸೋಹ ಸಿರಿ; ಪುಟ ೩೩೮, ೧೯೮೧.

೫೬. ಡಾ. ಮಲ್ಲೇದೇವರು (ಸಂ), ಡಾ. ಜಿ. ಶಿವರುದ್ರಪ್ಪಾ (ಲೆ), ಅರ್ಚನ; ಪುಟ ೧೦೧೨, ೧೯೮೪.

೫೭. ಡಾ. ಕೆ. ರವೀಂದ್ರನಾಥ, ಕನ್ನಡ ಸಾಹಿತ್ಯಕ್ಕೆ ಮಠ ಮಾನ್ಯಗಳ ಕೊಡುಗೆ,( ಮಹಾಪ್ರಬಂಧ ಅಪ್ರಕಟಿತ ) ಪುಟ ೫೦

೫೮. ಎಂ. ಆರ್. ಶ್ರೀನಿವಾಸ ಮೂರ್ತಿ, ವಚನ ಧರ್ಮಸಾರ; ಪುಟ ೧೨೬, ೧೯೭೭.

೫೯. ಆರ್. ಎಂ. ಶ್ರೀನಿವಾಸ ಮೂರ್ತಿ, ವಚನ ಧರ್ಮಸಾರ; ಪುಟ ೧೨೭, ೧೯೭೭.

೬೦. ಡಾ. ಬಿ. ಕೆ. ಹಿರೇಮಠ, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ; ಪುಟ ೪೦,

೬೧. ಡಾ. ಮಲ್ಲೇದೇವರು (ಸಂ), ಡಾ. ಜಿ. ಶಿವರುದ್ರಪ್ಪಾ (ಲೆ), ಅರ್ಚನ ; ಪುಟ ೧೦೧೨, ೧೯೮೪.

೬೨. ಡಾ. ಶಾಂತರಸ ರಾಯಚೂರ (ಸಂ), ಕಾಯಕ ಪರಿಣಾಮಿ; ಪುಟ ೪೭೧, ೧೯೯೧.

೬೩. ಮೈಸೂರ ಹಸ್ತಪ್ರತಿ ಸೂಚಿ, ಸಂಪುಟ ೩ ಪುಟ ೧೨೩೨, ಭೈರೇಶ್ವರ ಕಾವ್ಯಕಥೆಗಳು; ಪುಟ ೨೨೨, ೧೯೯೬.

೬೪. ಡಾ. ಚಿದಾನಂದ ಮೂರ್ತಿ, ಕೇಳದಿ ಗೂಂಡಾ ಜೊಯಿಸ, ವರ್ಣನಾತ್ಮಕ ಹಸ್ತಪ್ರತಿ,ಸೂಚಿ;ಪುಟ ೩೩೬, ೧೯೯೬

೬೫. ಡಾ. ಎಂ. ಎಂ. ಕಲಬುರ್ಗಿ, ಕನ್ನಡ ಹಸ್ತಪ್ರತಿ ಶಾಸ್ತ್ರ; ಪುಟ ೫೩, ೧೯೮೯.

೬೬. ಡಾ. ಬಿ. ಕೆ. ಹಿರೇಮಠ, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ; ಪುಟ ೨೬, ೧೯೮೯.

೬೭. ಅನ್ನದಾನೇಶ್ವರ ಮಾಹಸ್ವಾಮಿಗಳು, ಶ್ರೀ ಶಿವಯೋಗ ಮಂದಿರ; ಪುಟ ೪, ೧೯೯೦.

೬೮. ಜಿ. ಎಸ. ಹನ್ನೆರಡು ಮಠ, ಪ್ರೊ: ನಿರ್ಮಲಾ ಪಟ್ಟಣಶಟ್ಟಿ; ರಜತ ದೀಪ್ತಿ; ಪುಟ ೨, ೧೯೯೫.

೬೯. ಎರಿಸೀಮೆ ಚೆನ್ನಪ್ಪ (ಸಂ), ಡಾ. ಎಚ್. ಎಂ. ಮರುಳಸಿದ್ದಯ್ಯಾ (ಲೆ), ದಾಸೋಹ ಸಿರಿ; ಪುಟ ೩೫೪, ೧೯೮೧.

೭೦. ಡಾ. ಜೆ. ಎಂ. ನಾಗಯ್ಯಾ, ಆರನೆ ವಿಕ್ರಮಾದಿತ್ಯನ ಶಾಸನಗಳು; ಒಂದು ಅಧ್ಯಯನ ಪುಟ ೭, ೧೯೯೫.

೭೧. ಡಾ. ಎಚ್. ತಿಪ್ಪೆರುದ್ರಸ್ವಾಮಿ, ಪ್ರಾಸಾದ; ಪುಟ ೨, ೧೯೯೬.

೭೨. ಎರಿಸೀಮೆ ಚೆನ್ನಪ್ಪ (ಸಂ), ಮಹಾಲಿಂಗ ಯಾಳಗಿ (ಲೆ), ದಾಸೋಹ ಸಿರಿ; ಪುಟ ೪೬೬, ೧೯೮೧.

೭೩. ಡಾ. ಬಿ. ಕೆ. ಹಿರೇಮಠ, ಕನ್ನಡ ಹಸ್ತಪ್ರತಿಗಳು ಒಂದು ಅಧ್ಯೆಯನ; ಪುಟ ೫೭, ೧೯೮೯.

೭೪. ಜಿರಗೆ ಕಟ್ಟೆಬಸಪ್ಪ, ಕಟ್ಟೆಬಸವೇಶ್ವರ ವಚನಗಳು; ಪುಟ ೬೮, ೧೯೬೬.

೭೫. ಎರಿಸೀಮೆ ಚೆನ್ನಪ್ಪ (ಸಂ), ಡಾ. ಎಚ್. ಎಂ. ಮರುಳಸಿದ್ದಯ್ಯ(ಲೆ) ದಾಸೋಹ ಸಿರಿ; ಪುಟ ೩೫೫, ೧೯೮೧.

# ಅಧ್ಯಾಯ : ನಾಲ್ಕು

## ಹೈದ್ರಾಬಾದ – ಕರ್ನಾಟಕ ವೀರಶೈವ ಮಠಗಳು

(೧) ಭಾಲ್ಕಿ ಹಿರೇಮಠ (೨) ಹುಲಸೂರ ವಿರಕ್ತಮಠ (೩) ಹಾರಕೂಡ ಹಿರೇಮಠ (೪) ಹುಡಗಿ ಹಿರೇಮಠ

(೫) ಭೀಮಳ ಖೇಡ ಹಿರೇಮಠ (೬) ನಿಡವಂಚಾ ಮಠ (೭) ಹುಲಿ ಕುಂಠಿ ಮಠ (೮) ಭಾತಂಬ್ರಾ ವಿರಕ್ತ ಮಠ

(೯) ತಾಣಾ ಕುಶನೂರ ಮಠ (೧೦) ಹೆಡಗಾಪುರ ಹಿರೇಮಠ (೧೧) ಸಿದ್ಧಾರೂಢ ಮಠ

(೧೨) ಆಲಿಯಂಬರ ಹಿರೇಮಠ (೧೩) ಇಟಗಾ ವಿರಕ್ತಮಠ (೧೪) ಕೋರಿ ಸಿದ್ದೇಶವರ ಮಠ

(೧೫) ಭರತನೂರ ವಿರಕ್ತಮಠ (೧೬) ಸುಲೇಪೇಟೆಯ ವಿರಕ್ತಮಠ (೧೭) ಖಜೂರಿ ವಿರಕ್ತಮಠ

(೧೮) ಮಾದನ ಹಿಪ್ಪರಗಾ ವಿರಕ್ತಮಠ (೧೯) ರುದ್ದನೂರ ವಿರಕ್ತಮಠ (೨೦) ಚಿಣಮಗೇರಿ ಹಿರೇಮಠ

(೨೧) ಸೊನ್ನದ ವಿರಕ್ತಮಠ (೨೨) ಸುರಪುರ ವಿರಕ್ತಮಠ (೨೩) ಕಡಕೋಳದ ಮಡಿವಾಳ ಮಠ

(೨೪) ಜೇವರಗಿ ವಿರಕ್ತಮಠ (೨೫) ರಾಮಕೋಂಡದ ಹಿರೇಮಠ (೨೬) ಜಂಳಾ ಹಿರೇಮಠ (೨೭) ಹೊನ್ನಕಿರಣಗಿ ಮಠ

(೨೮) ನಂದೂರಿನ ಹಿರೇಮಠ (೨೯) ಬೆಳಗುಂದಿಯ ಹಿರೇಮಠ (೩೦) ಕಲಬುರ್ಗಿ ಶ್ರೀ ಶರಣ ಬಸವೇಶ್ವರ ಮಠ

(೩೧) ಗುಲಬರ್ಗಾ ಚವದಾಪೂರಿ ಹಿರೇಮಠ (೩೨) ಕಲಬುರ್ಗಿಯ ಗುರುಬಸವನ ಮಠ (೩೩) ಕಲಬುರ್ಗಿಯ ಗದ್ದುಗೆ ಮಠ

(೩೪) ಗುರುಮಠಕಲ್ಲು ಮಠ (೩೫) ಮಸ್ಕಿ ಗಚ್ಚಿನ ಮಠ (೩೬) ದೇವರ ಭೂಪುರ ಹಿರೇಮಠ

(೩೭) ಲಿಂಗಸುಗೂರು ಮಹಾಂತೇಶ್ವರ ಮಠ (೩೮) ಶ್ರೀ ತೋಂಟದಾರ್ಯ ಮಠ (೩೯) ಗುರು ಗುಂಟು ವಿರಕ್ತಮಠ

(೪೦) ಜಾಲಹಳ್ಳಿ ಹಿರೇಮಠ (೪೧) ಗಬ್ಬೂರ ವಿರಕ್ತಮಠ (೪೨) ಮಸುರ ಕಲ್ಲುಗಲ್ಲು ಹಿರೇಮಠ (೪೩) ಮಾನವಿ ಕಲ್ಮಠ

(೪೪) "ಚಿಕ್ಕಲ ಪರ್ವಿ" ವಿರಕ್ತಮಠ (೪೫) ನೀಲಗಲ್ಲು ಹಿರೇಮಠ (೪೬) ಗೆಜ್ಜೆಬಾವಿ ಹಿರೇಮಠ

(೪೭) ದೇವ ದುರ್ಗ ಸಿದ್ಧರಾಮೇಶ್ವರ ಶಿಖರ ಮಠ (೪೮) ಸವಿಲ ಕಲ್ಲು ಹಿರೇಮಠ (೪೯) ಅಮರೇಶ್ವರ ವಿರಕ್ತ ಮಠ

(೫೦) ಊಟಕನೂರ ವಿರಕ್ತಮಠ (೫೧) ಮುಳ್ಳೂರ ವಿರಕ್ತಮಠ (೫೨) ಗೋಪುರಕಲ್ಲು ಹಿರೇಮಠ

(೫೩) ತುರುಬಿ ಹಾಳು ಹಿರೇಮಠ (೫೪) ಚಿಕ್ಕ ಸುಗುರ ಚೌಕಿ ಮಠ (೫೫) ಕೊಪ್ಪಳ ಗವಿ ಮಠ (೫೬) ಎತ್ತಿನ ಹಟ್ಟಿ ವಿರಕ್ತಮಠ

(೫೭) ಅಳವಂಡಿ ಹಿರೇಮಠ (೫೮) ಹಿರೇ ಸಿಂದೂಗಿ ವಿರಕ್ತಮಠ (೫೯) ಕುಷ್ಟಗಿ ಹಿರೇಮಠ (೬೦) ಚಳಗೇರಿ ಹಿರೇಮಠ

(೬೧) ನಿಡಸೋಸಿ ಹಿರೇಮಠ (೬೨) ಪುರ್ತಗೇರಿ ಹಿರೇಮಠ (೬೩) ಗುಡದೂರ ವಿರಕ್ತಮಠ

(೬೪) ಯಲಬರ್ಗಾ ಹಿರೇಮಠ (೬೫) ಶ್ರೀಧರ ಮಡಿ ಹಿರೇಮಠ (೬೬) ಖೇದವಟ್ಟಿ ಹಿರೇಮಠ

(೬೭) ಕುದುರೆ ಮೋತಿ ವಿರಕ್ತಮಠ (೬೮) ಗಂಗಾವತಿ ವಿರಕ್ತಮಠ (೬೯) ಕನಕಗಿರಿ ವಿರಕ್ತಮಠ (೭೦) ಹೆಬ್ಬಾಳ ಹಿರೇಮಠ

(೭೧) ಬುದಗುಂಪಾ ವಿರಕ್ತಮಠ (೭೨) ಅರಳಹಳ್ಳಿ ಹಿರೇಮಠ (೭೩) ಆರಾಳು ಹಿರೇಮಠ

ಬೀದರ, ಗುಲಬರ್ಗಾ, ರಾಯಚೂರ ಹಾಗೂ ಕೊಪ್ಪಳ ಜಿಲ್ಲೆಯನ್ನೊಳಗೊಂಡ ಹೈದ್ರಾಬಾದ – ಕರ್ನಾಟಕ ವ್ಯಾಪ್ತಿಯಲ್ಲಿ ಸುಮಾರು ನೂರಾಐವತ್ತು ವೀರಶೈವ ಮಠಗಳು ಅಸ್ತಿತ್ವದಲ್ಲಿವೆ. ಅವುಗಳಲ್ಲಿ ಕೇವಲ ಎಂಬತ್ತೊಂದು ವೀರಶೈವ ಮಠಗಳು ತನ್ನದೆಯಾದ ಒಂದು ಮಹತ್ವದ ಪಾತ್ರವನ್ನು ವಹಿಸುತ್ತ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ, ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಗಣನೀಯವಾದ ಸೇವೆಯನ್ನು ಸಲ್ಲಿಸುತ್ತಿವೆ. ಅಲ್ಲದೆ ಮಠದ ಆಸ್ತಿ – ಪಾಸ್ತಿಯನ್ನು ಸುವ್ಯವಸ್ಥಿತ ರೀತಿಯಲ್ಲಿ ಕಾಪಾಡಿಕೊಂಡು ಬರುತ್ತಿವೆ. ಮಠದ ಐತಿಹಾಸಿಕ ಪರಂಪರೆ, ಮಠ ಬೆಳೆದು ಬಂದ ದಾರಿ, ಹಾಗೂ ಮಠಗಳಿಂದ ಉತ್ಪತ್ತಿಯಾದ ಶಾಖಾ ಮಠಗಳನ್ನು ಉಳಿಸಿ ಬೆಳೆಸಿಕೊಂಡು ಬರುತ್ತಿವೆ. ಉಳಿದ ಮಠಗಳು ತನ್ನ ಆಸ್ತಿ– ಪಾಸ್ತಿಗಳನ್ನು ಕಳೆದುಕೊಂಡು ಸಾಮಾನ್ಯರ ಮನೆಗಳಂತೆ ಪರಿವರ್ತನೆಗೊಂಡಿವೆ. ಮಠವೆ ಮನೆಯನ್ನಾಗಿಸಿಕೊಂಡು ಸಂಸಾರಿಕ ಜೀವನದಲ್ಲಿ ತೊ' ಡಗಿವೆ. ಇಲ್ಲಿ ಯಾವುದೆ ಐತಿಹಾಸಿಕ ಪುರಾವೆಗಳು ದೊರೆಯುವುತ್ತವೆ. ಕೆಲವು ಹೆಸರಿಗೆ ಮಾತ್ರ ಮಠಗಳಾಗಿ ಉಳಿದಿವೆ.

## ೧. ಬೀದರ

### ೧.೧. ಭಾಲ್ಕಿ ಹಿರೇಮಠ

ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕವಾದ ಮಹತ್ಕಾರ್ಯಗಳಿಗೆ ಭಾಲ್ಕಿ ಹಿರೇಮಠ ಪ್ರಮುಖವೆನಿಸಿಕೊಂಡಿದೆ. ಹೈದ್ರಾಬಾದ – ಕರ್ನಾಟಕ ವೀರಶೈವ ಮಠಗಳಲ್ಲಿ ಭಾಲ್ಕಿ

ಹಿರೇಮಠವು ಕೇಂದ್ರ ಬಿಂದುವಾಗಿದೆ. ಇದು ಭಾಲ್ಕಿ ತಾಲೂಕು ನಗರದ ಕೇಂದ್ರದಲ್ಲಿರುವ ಹಿರೇಮಠವು ಸುಮಾರು ಎಂಟನೂರ ವರ್ಷಗಳ ಪ್ರಾಚೀನತೆಯ ಇತಿಹಾಸವನ್ನು ಹೊತ್ತಿದೆ. ಶ್ರೀ ಮಠದ ಮೂಲ ಸಂಸ್ಥಾಪಕರು ಶ್ರೀ ಚನ್ನಬಸವೇಶ್ವರರು. ಇವರ ಸಮಾಧಿ ಆಂಧ್ರಪ್ರದೇಶದ ನಾರಾಯಣಖೇಡ ತಾಲೂಕಿನ ಮೈನಳ್ಳಿ ಗ್ರಾಮದಲ್ಲಿ ದೊರೆಯುತ್ತದೆ. ಏಳನೇ ಪೀಠಾಧಿಪತಿಯಾದ ಡಾ: ಚೆನ್ನಬಸವ ಪಟ್ಟದ್ದೇವರ ನೇತೃತ್ವದಲ್ಲಿ ಸರ್ವತೋಮುಖ ಅಭಿವೃದ್ದಿಯಾಗಿದೆ. ಘಟವಿದ್ದ ಸ್ಥಳಕ್ಕೆ ಮಠವನ್ನೆಂದು ಪರಿವರ್ತಿಸಿದ ಕೀರ್ತಿ ಶ್ರೀಗಳಿಗೆ ಸಲ್ಲುತ್ತದೆ. " ಕಾಯಕವೇ ಕೈಲಾಸ " ವೆಂದು ಧರ್ಮೋಪದೇಶ ಬರಿದ್ದಾರೆ. ಶ್ರೀ ಮಠದಿಂದ ಸುಮಾರು ಮೂವತ್ತಾರು ಶಾಖಾ ಮಠಗಳು ಹುಟ್ಟಿಕೊಂಡಿವೆ. ಆದರೆ ಅವುಗಳೆಲ್ಲಾ ಕಾಲನುಕ್ರಮದಿಂದ ನಶಿಸಿ ಹೋಗಿ ಸದ್ಯ ಹನ್ನೆರಡು ಮಠಗಳು ಮಾತ್ರ ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡು ಬರುತ್ತಿವೆ.

ವಂಶಾವಳಿ

ಶ್ರೀ ಮಠದಲ್ಲಿ ಒಟ್ಟು ಎಂಟು ಪೀಠಾಧಿಪತಿಗಳು ಅಧಿಕಾರವನ್ನು ವಹಿಸಿರುತ್ತಾರೆ. ೧) ಲಿಂಗೈಕ್ಯ ಶ್ರೀ ಚೆನ್ನಬಸವೇಶ್ವರ – ಮಠದ ಮೂಲ ಸಂಸ್ಥಾಪಕರು ೨) ಲಿಂಗೈಕ್ಯ ಶ್ರೀ ದೇಶಮುಖ ಸ್ವಾಮಿಗಳು ೩) ಲಿಂಗೈಕ್ಯ ಶ್ರಿ ಸಿದ್ದಬಸವ ಸ್ವಾಮಿಗಳು ೪) ಲಿಂಗೈಕ್ಯ ಶ್ರೀ ಷಣ್ಮುಖಯ್ಯಾ ಸ್ವಾಮಿಗಳು ೫) ಲಿಂಗೈಕ್ಯ ಶ್ರಿ ನೀಲಕಂಠಯ್ಯಾ ಸ್ವಾಮಿಗಳು ೬) ಲಿಂಗೈಕ್ಯ ಶ್ರೀ ಗುರುಲಿಂಗ ಸ್ವಾಮಿಗಳು ೭) ಲಿಂಗೈಕ್ಯ ಶ್ರೀ ಮ.ಘ.ಚ. ಡಾ. ಚೆನ್ನಬಸವ ಪಟ್ಟದ್ದೇವರು ೮) ಪೂಜ್ಯ ಶ್ರೀ ಮ.ಘ.ಚ. ಬಸವಲಿಂಗ ಪಟ್ಟದ್ದೇವರು ನೂತನ ಪೀಠಾಧಿಪತಿಗಳು – ಹೀಗೆ ಮಠದ ವಂಶಾವಳಿ ಬೆಳೆದು ಬಂದಿದೆ. ಏಳನೇ ಪೀಠಾಧಿಪತಿಯಾದ ಚನ್ನಬಸವ ಪಟ್ಟದೇವರು ಶರಣರ ತತ್ವಗಳ ಸಕಾರಾ ಮೂರ್ತಿಯು ಸ್ವರೂಪರು. ಅಚ್ಚ ಶರಣರ ನಡೆ – ನುಡಿಗಳಿಗೆ ತಪ್ಪದೆ ಪಾಲಿಸುತ್ತಿದ್ದರು, ಶಿವಯೋಗ ಮಂದಿರದಲ್ಲಿ ವಿದ್ಯಾಭ್ಯಾಸವನ್ನು ಕೈಗೊಂಡವರು. ಈ ಭಾಗದಲ್ಲಿ ಕನ್ನಡದ ಶಿಕ್ಷಣ ಪ್ರಚಾರ ಮಾಡಬೇಕೆಂದು ಪಣ ತೊಟ್ಟು ಹಗಲಿರುಳು ಶ್ರಮಿಸಿದರು. ಕರ್ನಾಟಕದಲ್ಲಿ ಕನ್ನಡ ಶಿಕ್ಷಣ ಬೆಳೆಸಲು ಹೋರಾಡಿದ ಪ್ರಥಮರು. ಹೊರಗಡೆ ಉರ್ದು ಬೋರ್ಡ ಹಾಕಿ ಒಳಗಡೆ ಕನ್ನಡ ಅಕ್ಷರವನ್ನು ಕಲಿಸಿರುವುದು, ಕನ್ನಡಿಗರಿಗೆ ಹೆಮ್ಮೆಯ ವಿಷಯ. ಇದನ್ನು ಎಲ್ಲರೂ ಒಪ್ಪಬೇಕಾಗುತ್ತದೆ.

ಇಂಥಹ ಶ್ರೀಗಳಿಗೆ ಭಕ್ತರು ವಿಭಿನ್ನ ಅಂಕಿತನಾಮಗಳಿಂದ ಗೌರವಗಳಿಂದ ಕರೆದಿರುವುದು ಕೆಳಗಿನಂತೆ ನೋಡಬಹುದು. ವಿನಯಭಂಡಾರಿ, ಕಾಯಕಪರಿಣಾಮಿ, ಬಸವ ಚೇತನ, ವೈರಾಗ್ಯನಿಧಿ, ಯುಗಪುರುಷ, ಬಾಲಬ್ರಹ್ಮಚಾರಿ, ಶಿವನ ಆಕಾರ, ರತ್ನಮಾಣಿಕ್ಯದಚ್ಚು, ವಿಶ್ವಕುಟುಂಬಿ, ಸರ್ವಜ್ಞ ಪ್ರೇಮಿ, ಸರಳಯೋಗಿ,

ಮಾತೃ ಹೃದಯ, ಬಸವ ದಾಸೋಹಿ, ದಲಿತೋದ್ಧಾರಕ, ಪಾದಯಾತ್ರಾ ಪುರುಷ, ಕನ್ನಡದ ಕಲ್ಪತರು, ತ್ರಿವಿಧ ದಾಸೋಹಿಗಳು, ಧಾರ್ಮಿಕ ಸುಧಾರಕರು, ದೈವಿಶಕ್ತಿ ಪುರುಷರು, ಶೈಕ್ಷಣಿಕ ಪ್ರೇಮಿಗಳು, ಸಾಮಾಜಿಕ ಸೇವಕರು, ಪ್ರಾಣಾರ್ಚನೆ, ಸಾಂಸ್ಕೃತಿಕ ಪ್ರಚಾರಕರು, ಬಚ್ಚಬರಿಯ ಚನ್ನಬಸವ, ಭೃತ್ಯಾಚಾರಿಗಳು, ಮಠದ ರಕ್ಷಕರು, ಗಣಾಚಾರ ನಿಷ್ಠರು, ಕ್ರಾಂತಿ ಪುರುಷರು, ಶಾಂತಿ ಧೂತರು, ಕಾಯಕ ಮೂರ್ತಿ, ಬೆಳೆಕಿನ ಮಲ್ಲಿಗೆ ಬಸವವತಾರಿ. ಜೀವಂತ ದೇವರು, ಮೈಸೂರ ಸ್ವಾರ, ಕನ್ನಡ ರಕ್ಷಾಮಣಿ, ಈಜುವ ಪ್ರೇಮಿ, ಕುದುರೆ ಸವಾರಿ, ಅನುಭವ ಮಂಟಪದ ಉದ್ಧಾರಕರು, ಬಸವ ಬೆಳಕು, ಕಲ್ಯಾಣ ನಾಡಿನ ಬಸವ, ಶಿವಾಚಾರಿಗಳು, ಮಹಾಯೋಗಿಗಳು, ಜಂಗಮ ಪುಂಗವ ...... ಹೀಗೆ ಮುಂತಾದ ಅಂಕಿತ ನಾಮಗಳಿಂದ ಕರೆದಿರುವುದು ಕಂಡು ಬಂದಿರುತ್ತದೆ.

ಶಾಖಾ ಮಠಗಳು

| | ಗ್ರಾಮಗಳು | ತಾಲೂಕ | ಜಿಲ್ಲೆ | ರಾಜ್ಯ |
|---|---|---|---|---|
| ೧. | ಕಮಲನಗರ | ಔರಾದ | ಬೀದರ | ಕರ್ನಾಟಕ |
| ೨. | ಬೋರಾಳ | ಔರಾದ | ಬೀದರ | ಕರ್ನಾಟಕ |
| ೩. | ವಲ್ಲೆಪೂರ | ಔರಾದ | ಬೀದರ | ಕರ್ನಾಟಕ |
| ೪. | ಗಾದಗಿ | ಬೀದರ | ಬೀದರ | ಕರ್ನಾಟಕ |
| ೫. | ಕಾರಾಮುಂಗಿ | ನಾರಾಯಣಖೇಡ | ಮೇದಕ | ಆಂಧ್ರ ಪ್ರದೇಶ |
| ೬. | ಮೊರ್ಗಿ | ನಾರಾಯಣಖೇಡ | ಮೇದಕ | ಆಂಧ್ರ ಪ್ರದೇಶ |
| ೭. | ಮೈನಳ್ಳಿ | ನಾರಾಯಣಖೇಡ | ಮೇದಕ | ಆಂಧ್ರ ಪ್ರದೇಶ |
| ೮. | ಪಗಡಪಲ್ಲಿ | ನಾರಾಯಣಖೇಡ | ಮೇದಕ | ಆಂಧ್ರ ಪ್ರದೇಶ |
| ೯. | ಶಾಹಾಪೂರ | ನಾರಾಯಣಖೇಡ | ಮೇದಕ | ಆಂಧ್ರ ಪ್ರದೇಶ |
| ೧೦. | ಚಕುರ್ತಿ | ನಾರಾಯಣಖೇಡ | ಮೇದಕ | ಆಂಧ್ರ ಪ್ರದೇಶ |
| ೧೧. | ಹೊಕ್ರಾಣಿ | ನಾರಾಯಣಖೇಡ | ಮೇದಕ | ಆಂಧ್ರ ಪ್ರದೇಶ |
| ೧೨. | ಶಿರಡೋಣಾ | ಕಂದಾರ | ನಾಂದೇಡ | ಮಹಾರಾಷ್ಟ್ರ |

ಹೀಗೆ ಭಾಲ್ಕಿ ಹಿರೇಮಠದ ಶಾಖಾಮಠಗಳನ್ನು ಹೆಸರಿಸಲಾಗಿದೆ.

## ೧.೨. ಹುಲಸೂರ ವಿರಕ್ತಮಠ

ಹನ್ನೆರಡನೆ ಶತಮಾನದಲ್ಲಿ ಅಲ್ಲಮ ಪ್ರಭು ದೇವರಿಂದ ಶ್ರೀ ಮಠವು ಸ್ಥಾಪನೆಯಾಗಿದೆ ಎಂಬ ಉಲ್ಲೇಖಗಳಿವೆ. ಬಸವ ತತ್ವ ನಾಡು – ನುಡಿಗಳ ಸೇವೆಗಾಗಿ ಮಿಸಲಾಗಿರುವ ಈ ಮಠವು ಹೈದ್ರಾಬಾದ – ಕರ್ನಾಟಕ ಭಾಗದಲ್ಲಿಯೇ ಶ್ರೇಷ್ಠವೆನಿಸಿಕೊಂಡಿದೆ. ವಿರಕ್ತಸಂಪ್ರದಾಯದ ಶ್ರೀ ಮಠಕ್ಕೆ ಮೊಟ್ಟ ಮೋದಲು ಚೌಕಿ ಮಠ ವೆಂದು ಕರೆಯುತ್ತಿದ್ದರು. ಶ್ರೀ ಗುರು ಬಸವೇಶ್ವರರೆಂಬುವವರು ಈ ಮಠವನ್ನು ವರ್ಗಾವಣೆ ಮಾಡಿ ಅದಕ್ಕೆ ವಿರಕ್ತ ಮಠವೆಂದು ಹೆಸರನ್ನಿಟ್ಟರು. ಅಲ್ಲದೆ ಈ ಮಠಕ್ಕೆ ಪ್ರಭುದೇವರನ್ನು ಪ್ರಥಮ ಪೀಠಾಧಿಪತಿಯಾಗಿ ಆಯ್ಕೆ ಮಾಡಿದರು. ಈ ಪ್ರಭುದೇವರು ಬೇರೆಯಾರುಅಲ್ಲ, ಅಲ್ಲಮ ಪ್ರಭುದೇವರೇ ಇದ್ದರು. ಈ ಮಠದ ಅಧಿಕಾರ ವಹಿಸಿ ಸುವ್ಯವಸ್ಥಿತ ರೀತಿಯಲ್ಲಿ ಮಠ ನಡೆಸಿಕೊಂಡು ಬಂದರೆಂದು ತಿಳಿದು ಬಂದಿದೆ. ಅಂದಿನಿಂದ ಇಂದಿನವರೆಗೆ ಶ್ರೀ ಮಠಕ್ಕೆ ಇಪ್ಪತ್ತು ಸ್ವಾಮಿಗಳು ಅಧಿಕಾರವನ್ನು ವಹಿಸಿ ಮಠದ ವಂಶಪರಂಪರೆಯನ್ನು ಉಳಿಸಿ ಬೆಳಿಸಿಕೊಂಡು ಬಂದಿರುವುದು ಕಾಣುತ್ತೇವೆ.

ವಂಶಾವಳಿ

೧. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಅಲ್ಲಮ ಪ್ರಭುದೇವರು :– (ಪ್ರಥಮ ಪೀಠಾಧಿಪತಿಗಳು)
೨. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಚೆನ್ನಬಸವ ಸ್ವಾಮಿಗಳು.
೩. ಲಿಂಗೈಕ್ಯ ಶ್ರೀ ಮ.ನಿ.ಪ್ರ. ತೋಂಟದಾರ್ಯ ಸ್ವಾಮಿಗಳು.
೪. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಪಂಚಾಕ್ಷರಿ ಸ್ವಾಮಿಗಳು.
೫. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಕಲ್ಯಾಣ ಮಠ ಮಹಾಂತ ಸ್ವಾಮಿಗಳು.
೬. ಲಿಂಗೈಕ್ಯ ಶ್ರೀ ಮ.ನಿ.ಪ್ರ.ನೀಲಕಂಠ ಸ್ವಾಮಿಗಳು.
೭. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಪ್ರಭು ಸ್ವಾಮಿಗಳು.
೮. ಲಿಂಗೈಕ್ಯ ಶ್ರೀ ಮ.ನಿ.ಪ್ರ. ರೇವಣಸಿದ್ಧ ಸ್ವಾಮಿಗಳು.
೯. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಚಿಂತಾಮಣಿ ಸ್ವಾಮಿಗಳು.
೧೦. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಚೆನ್ನಮಲ್ಲ ಸ್ವಾಮಿಗಳು.
೧೧. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಗುರು ಬಸವ ಸ್ವಾಮಿಗಳು.
೧೨. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಗುರುಪಾದ ಸ್ವಾಮಿಗಳು.
೧೩. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಪಂಚಾಕ್ಷರಿ ಸ್ವಾಮಿಗಳು.
೧೪. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಗುರುಲಿಂಗ ಸ್ವಾಮಿಗಳು.

೧೫. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಚಂದ್ರಶೇಖರ ಸ್ವಾಮಿಗಳು.

೧೬. ಲಿಂಗೈಕ್ಯ ಶ್ರೀ ಮ.ನಿ.ಪ್ರ. ದೊಡ್ಡಗುರುಬಸವ ಸ್ವಾಮಿಗಳು.

೧೭. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಪಂಚಾಕ್ಷರಿ ಸ್ವಾಮಿಗಳು.

೧೮. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಗುರು ಬಸವ ಸ್ವಾಮಿಗಳು.

೧೯. ಲಿಂಗೈಕ್ಯ ಶ್ರೀ ಮ.ನಿ.ಪ್ರ.ಬಸವಕುಮಾರ ಸ್ವಾಮಿಗಳು.

೨೦. ಪೂಜ್ಯ ಶ್ರೀ ಮ.ನಿ.ಪ್ರ. ಶಿವಾನಂದ ಮಹಾ ಸ್ವಾಮಿಗಳು. (ಸದ್ಯದ ಶ್ರೀಗಳು)

ಹೀಗೆ ಶ್ರೀ ಮಠದ ಪರಂಪರೆ ಬೆಳೆದು ಬಂದಿದೆ. ನೂತನ ಶ್ರೀಗಳಾದ ಮ.ನಿ.ಪ್ರ. ಶಿವಾನಂದ ಮಹಾಸ್ವಾಮಿಗಳು ಈ ಭಾಗದಲ್ಲಿ ಬಸವಜ್ಯೋತಿಯ ಧರ್ಮವನ್ನು ಬೆಳಗಿದವರು. ಈ ಭಾಗದಲ್ಲಿ ಬಸವತತ್ವ ಅಭಿಮಾನಿಯ ಹುಲಿ ಎಂದು ಕರೆಯುತ್ತಾರೆ. ಅಚ್ಚ ಶರಣರ ನಡೆ ನುಡಿಗಳನ್ನೆ, ಪರಿಪಾಲಿಸಿಕೊಂಡು ಬರುವಂಥವರು. ಅಧ್ಯಾತ್ಮಿಕ ಚಿಂತಕರಾಗಿದ್ದಾರೆ. ಭಕ್ತರು ಮಾಡಿದ ಮಠದ ಸ್ವಾಮಿಗಳಾಗದೆ ಘಟವ ಬೆಳೆಸಿದ ಮಠದ ಸ್ವಾಮಿಗಳಾಗಬೇಕೆಂದು ತಿಳಿಸಿ ಹೇಳುವರು. " ಊರು ಕೆರಿಗೊಂದು ಮಠಗಳಾದರೇನು? ಎಲ್ಲ ಸ್ವಾಮಿಗಳು ಧರ್ಮ ಸುಧಾರಕರಲ್ಲ " ಎಂದು ಕೆಲವು ಮಠಾಧಿಪತಿಯರ ಹಿಂದಿನ ಡಾಂಬಿಕ ವರ್ತನೆಯನ್ನು ಕಂಡು ಕಿಡಿ ಕಾರುವರು. ಪ್ರಪಂಚದಲ್ಲಿ ವಿವಿಧ ಧರ್ಮಗಳ ಮಾನವರು ಒಂದೇ ಎಂದು ತಿಳಿಸಿ ಹೇಳುವರು. ಧಾರ್ಮಿಕ ಸುಧಾರಣೆ ಜೋತೆಗೆ ಶೈಕ್ಷಣಿಕ ಕ್ಷೇತ್ರದಲ್ಲಿ ತಮ್ಮ ಕೊಡಗೆಯನ್ನು ಸಲ್ಲಿಸುತ್ತಿದ್ದಾರೆ. ಅಲ್ಲದೆ ವಿಶ್ವಗುರು ಬಸವ ಧರ್ಮ ಪ್ರಚಾರ ಕೇಂದ್ರ ಸ್ಥಾಪಿಸಿ ಅದರ ಮುಖಾಂತರ ಪ್ರಕಾಶವನ್ನು ತೆರೆದಿದ್ದಾರೆ. ಪ್ರತಿ ವರ್ಷ ಜನೆವರಿ ತಿಂಗಳಿನಲ್ಲಿ ಬಸವ ಕುಮಾರ ಶಿವಯೋಗಿಗಳ ಸ್ಮರಣೋತ್ಸವ ಕಾರ್ಯಕ್ರಮ ಹಮ್ಮಿಕೊಳ್ಳುತ್ತಾರೆ. ನಾಡಿನ ಮಠಾಧೀಶರು, ಪಂಡಿತರು, ಸಾಹಿತಿಗಳನ್ನು ಕರೆಯಿಸಿ ಉಪನ್ಯಾಸ, ಗೋಷ್ಠಿಗಳನ್ನೇರ್ಪಡಿಸಿ ಧರ್ಮೋಪದೇಶದ ತತ್ವಗಳನ್ನು ಬೀರುತ್ತಿದ್ದಾರೆ.

ಶಾಖಾ ಮಠಗಳು

| | ಗ್ರಾಮಗಳು | ತಾಲೂಕ | ಜಿಲ್ಲೆ | ರಾಜ್ಯ |
|---|---|---|---|---|
| ೧. | ಬೇಲೂರ | ಬಸವಕಲ್ಯಾಣ | ಬೀದರ | ಕರ್ನಾಟಕ |
| ೨. | ಪ್ರತಾಪೂರ | ಬಸವಕಲ್ಯಾಣ | ಬೀದರ | ಕರ್ನಾಟಕ |
| ೩. | ಖಂಡಾಳ | ಬಸವಕಲ್ಯಾಣ | ಬೀದರ | ಕರ್ನಾಟಕ |
| ೪. | ಗೌಡಗಾಂವ | ಬಸವಕಲ್ಯಾಣ | ಬೀದರ | ಕರ್ನಾಟಕ |

| | | | |
|---|---|---|---|
| ೫. ಬ್ಯಾಲಹಳ್ಳಿ | ಭಾಲ್ಕಿ | ಬೀದರ | ಕರ್ನಾಟಕ |
| ೬. ಸಾಯಗಾಂವ | ಭಾಲ್ಕಿ | ಬೀದರ | ಕರ್ನಾಟಕ |
| ೭. ಹುಣಜಿ | ಭಾಲ್ಕಿ | ಬೀದರ | ಕರ್ನಾಟಕ |
| ೮. ಕಣಜಿ | ಭಾಲ್ಕಿ | ಬೀದರ | ಕರ್ನಾಟಕ |
| ೯. ಜಾಂತಿ | ಭಾಲ್ಕಿ | ಬೀದರ | ಕರ್ನಾಟಕ |
| ೧೦. ಧನ್ನೂರ | ಭಾಲ್ಕಿ | ಬೀದರ | ಕರ್ನಾಟಕ |
| ೧೧. ನಿರ್ಣಾ | ಹುಮನಾಬಾದ | ಬೀದರ | ಕರ್ನಾಟಕ |
| ೧೨. ಕುಡಂಬಲ | ಹುಮನಾಬಾದ | ಬೀದರ | ಕರ್ನಾಟಕ |
| ೧೩. ನಾಗರಾಳ | ಉದಗೀರ | ಲಾತೂರ | ಮಹಾರಾಷ್ಟ್ರ |
| ೧೪. ಉದಗೀರ | ಉದಗೀರ | ಲಾತೂರ | ಮಹಾರಾಷ್ಟ್ರ |
| ೧೫. ಹೈದ್ರಾಬಾದ | ಹೈದ್ರಾಬಾದ | ಹೈದ್ರಾಬಾದ | ಆಂಧ್ರ ಪ್ರದೇಶ |

ಹೀಗೆ ಹುಲಸೂರು ಶ್ರೀಗುರು ಬಸವೇಶ್ವರ ಸಂಸ್ಥಾನ ಮಠದ ಶಾಖಾ ಮಠಗಳನ್ನು ಹೆಸರಿಸಲಾಗಿದೆ.

### ೧.೩. ಹಾರಕೂಡ ಹಿರೇಮಠ

ಬಸವಕಲ್ಯಾಣ ತಾಲೂಕಿನಲ್ಲಿ ಹಾರಕೂಡ ಹಿರೇಮಠವು ಒಂದು. ಈ ಮಠಕ್ಕೆ ಬೃಹನ್ಮಠ ವೆಂದು ಕರೆಯುತ್ತಾರೆ. ಶ್ರೀ ಮಠವು ಸಾವಿರಾರು ವರ್ಷಗಳ ಇತಿಹಾಸ ಹೊಂದಿದೆ. ಭಕ್ತಿ ವೈರಾಗ್ಯ, ಜ್ಞಾನ, ಗಳೆಂಬ ತ್ರಿವಿಧ ದಾಸೋಹಕ್ಕೆ ಹೆಸರು ವಾಸಿಯಾಗಿದೆ. ಧಾರ್ಮಿಕ ಪರಿಸರದಲ್ಲಿ ಹುಟ್ಟಿಕೊಂಡ ಶ್ರೀ ಮಠದ ಆರನೇ ಪೀಠಾಧಿಪತಿಯಾದ ಶ್ರೀ ಚನ್ನಬಸವ ಶಿವಯೋಗಿಗಳು. ಪವಾಡ ಪುರುಷರು. ಅಲ್ಲದೆ ಬೇಡಿದ ಭಕ್ತರಿಗೆ ಬೇಡಿದ ವರವನ್ನು ಕೊಟ್ಟವರು. ಬಾಲ ತಪಸ್ವಿಗಳು, ವೈರಾಗ್ಯ ಪುರುಷರು, ಸ್ವಯಂ ಸಿದ್ಧಿ ಪುರುಷರು. ಈ ನಾಡಿನ ಸಾಕ್ಷಾತ್ ದೇವರೆಂದೆ ಜನ ನಂಬಿದರು. ಇಂದಿಗೂ ಸಹ ಅವರ ಕೃಪಾಶಿರ್ವಾದ ಪಡೆಯಬೇಕೆಂದು ಜನ ಹಾತೊರೆದು ಕಿಕ್ಕಿರಿದು ಬರುತ್ತಾರೆ. ಅವರ ಕಾಲದಲ್ಲಿ ಮಠದ ಕೀರ್ತಿ ನೆರೆ ರಾಜ್ಯಗಳಾದ ಮಹಾರಾಷ್ಟ್ರ, ಆಂಧ್ರ ಪ್ರದೇಶಗಳಿಗೆ ಹರಡಿತ್ತು. ಯಾವುದೇ ಅಡಂಬರ ಪ್ರಚಾರ ಮಾಡುತ್ತಿರಲಿಲ್ಲ. ಅನೇಕ ಜನಪದಿಯರು ಅವರ ಬಗ್ಗೆ ಹಾಡಿ ಹೊಗಳುತ್ತಿರುವದು ನೋಡಬಹುದು.

" ಹಾರಕೂಡ ಮೂತ್ಯನ ಭಜನಿ,

ಹಗಲ ಇರಳ ಮಾಡುವೆ ನಾನು,

ಸಾವಧಾನ ಶಕ್ತಿಯೂ ನಾ,

ಭಾವದಲ್ಲಿ ಪರಮಾತ್ಮನ ನೆನೆಸುವೆ ನಾ,

ಹೆಳತೀನಿ ಕೇಳಾ ಆತನ ವರ್ಣಾ,

ಕೈಕಾಲು ಮೈಯಾ ಬಣ್ಣ,

ಮಾರಿ ಹಸರ ಚೆನ್ನ

ಶುದ್ಧ ಸೂರ್ಯನ ವರ್ಣಾ ...... "[೧]

– ಎಂಬ ಜಾನಪದ ಹಾಡನ್ನು ನೋಡಬಹುದು. ಇಂಥಹ ಇನ್ನು ಅನೇಕ ಜಾನಪದ ಗೀತೆಗಳು, ಭಕ್ತಿ ಗೀತೆಗಳು, ಭಕ್ತಾದಿಗಳು ಭಜನೆಯಲ್ಲಿ, ಧ್ವನಿ ಸುರಳಿಗಳಲ್ಲಿ ಹಾಡಿರುವುದು ಕಂಡು ಬರುತ್ತದೆ. ಶ್ರೀ ಮಠಕ್ಕೆ ಒಟ್ಟು ಎಂಟು ಮಠಾಧೀಶರು ಸೇವೆ ಸಲ್ಲಿಸಿದ್ದು ಕಾಣುತ್ತೇವೆ.

ವಂಶಾವಳಿ

೧. ಲಿಂಗೈಕ್ಯ ಶ್ರೀ ಷ. ಬ್ರ. ಸಂಗನಬಸವ ಸ್ವಾಮಿಗಳು – ಮೂಲ ಸಂಸ್ಥಾಪಕರು.

೨. ಲಿಂಗೈಕ್ಯ ಶ್ರೀ ಷ. ಬ್ರ. ಸಿದ್ದಲಿಂಗ ಸ್ವಾಮಿಗಳು – ಇವರ ಗದ್ದುಗೆ ಕಾಳಗಿ ಯಲ್ಲಿದೆ.

೩. ಲಿಂಗೈಕ್ಯ ಶ್ರೀ ಷ. ಬ್ರ. ಚೆನ್ನವೀರ ಸ್ವಾಮಿಗಳು – ಇವರ ಗದ್ದುಗೆ ರುಕ್ಮಾಪುರದಲ್ಲಿದೆ.

೪. ಲಿಂಗೈಕ್ಯ ಶ್ರೀ ಷ. ಬ್ರ. ಬಸವಲಿಂಗ ಸ್ವಾಮಿಗಳು – ಇವರ ಗದ್ದುಗೆ ಶ್ರೀಮಠದಲ್ಲಿದೆ.

೫. ಲಿಂಗೈಕ್ಯ ಶ್ರೀ ಷ. ಬ್ರ. ಎರಡನೆ ಸಂಗನ ಬಸವ ಸ್ವಾಮಿಗಳು – ಇವರ ಗದ್ದುಗೆ ಶ್ರೀ ಮಠದಲ್ಲಿದೆ.

೬. ಲಿಂಗೈಕ್ಯ ಶ್ರೀ ಷ. ಬ್ರ. ಚೆನ್ನಬಸವ ಶಿವಯೋಗಿಗಳು – ಇವರ ಗದ್ದುಗೆ ಶ್ರೀ ಮಠದಲ್ಲಿದೆ.

೭. ಲಿಂಗೈಕ್ಯ ಶ್ರೀ ಷ. ಬ್ರ. ಗುರುಲಿಂಗ ಶಿವಾಚಾರ್ಯರು – ಇವರ ಗದ್ದುಗೆ ಶ್ರೀ ಮಠದಲ್ಲಿದೆ.

೮. ಪೂಜ್ಯ ಶ್ರೀ ಷ. ಬ್ರ. ಚನ್ನವೀರ ಶಿವಾಚಾರ್ಯರು – (ಸದ್ಯದ ಶ್ರೀಗಳು)

ಹೀಗೆ ಶ್ರೀಮಠದ ಪರಂಪರೆ ಬೆಳೆದು ಬಂದಿದೆ. ನೂತನ ಪೀಠಾಧಿಶರಾದ ಶ್ರೀ ಚೆನ್ನವೀರ ಶಿವಾಚಾರ್ಯ ಸ್ವಾಮಿಗಳು ಶರಣರ ನಡೆ – ನುಡಿಗಳಿಗೆ ಚ್ಯುತಿ ತಪ್ಪದೆ ನಡೆದುಕೊಂಡು ಬರುವಂಥವರು. ಹಲವಾರು ಧಾರ್ಮಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತಿದ್ದಾರೆ. ಶ್ರೀ ಚೆನ್ನಬಸವೇಶ್ವರ ಶಿಕ್ಷಣ ಸಂಸ್ಥೆಯನ್ನು

ಪ್ರಾರಂಭಿಸಿ ಈ ಭಾಗದ ಜನರಿಗೆ ಶಿಕ್ಷಣ ಕಲಿಯಲು ಅನುಕೂಲ ಮಾಡಿಕೊಟ್ಟಿದ್ದಾರೆ. ಅಲ್ಲದೆ ಪ್ರಕಾಶನ ತೆರೆದು ಸೃಜನ ಶಿಲ, ಸಾಹಿತ್ಯ ಮಾಲೆಯ, ವತಿಯಿಂದ ಹಲವಾರು ಶರಣರ ಪುಸ್ತಕಗಳನ್ನು ಮುದ್ರಿಸಿ ಜನರಿಗೆ ನೀಡಿರುತ್ತಾರೆ. ಅನುಭಾವ ಪ್ರಚಾರೋಪನ್ಯಾಸ ಮಾಲೆಯ ಪ್ರತಿಗಳನ್ನು ಪ್ರಕಟಿಸುತ್ತಿದ್ದಾರೆ. ಶ್ರೀಗಳ ಕ್ರೀಯಾ ಶೀಲ ವ್ಯಕ್ತಿತ್ವತಮ್ಮ ಕಾರ್ಯವೈಖರಿ ಸಾಮಾಜದ ಸೇವೆಯಲ್ಲಿ ಅರ್ಪಿಸುತ್ತಿದ್ದಾರೆ.

ಶಾಖಾ ಮಠಗಳು

| | ಗ್ರಾಮಗಳು | ತಾಲೂಕ | ಜಿಲ್ಲೆ | ರಾಜ್ಯ |
|---|---|---|---|---|
| ೧. | ಗದಲೆಗಾಂವ | ಬಸವಕಲ್ಯಾಣ | ಬೀದರ | ಕರ್ನಾಟಕ |
| ೨. | ಸರಜೋಳಗಾ | ಬಸವಕಲ್ಯಾಣ | ಬೀದರ | ಕರ್ನಾಟಕ |
| ೩. | ದುಬಲಗುಂಡಿ | ಹುಮನಾಬಾದ | ಬೀದರ | ಕರ್ನಾಟಕ |
| ೪. | ಸೆಡೋಳಾ | ಹುಮನಾಬಾದ | ಬೀದರ | ಕರ್ನಾಟಕ |
| ೫. | ಚಿಂಚೋಳಿ | ಚಿಂಚೋಳಿ | ಗುಲಬರ್ಗಾ | ಕರ್ನಾಟಕ |
| ೬. | ತರೂರಿ | ಉಮರ್ಗಾ | ಉಸ್ಮಾನಬಾದ | ಮಹಾರಾಷ್ಟ್ರ |
| ೭. | ದೇವಣಗಿ | ತಾಂಡೂರ | ರಂಗಾರಡ್ಡಿ | ಆಂಧ್ರ ಪ್ರದೇಶ |

ಬಸವ ಕಲ್ಯಾಣ ನಗರದಲ್ಲಿ ಕಳ್ಳಿಮಠ, ಗದ್ದುಗಿ ಮಠ, ದಾಸೋಹ ಮಠ, ಕಂಬಳಿಮಠ, ಕಣಗಿಲ ಮಠ, ಕಟ್ಟಿನ ಮಠ, ಹುಲಕಂಟಿ ಮಠ, ಮಹಾಂತ ಮಠ, ಬಸವರಾಜ ದೇವರ ಮಠ, ಉರಿಲಿಂಗ ಪೆದ್ದಿ ಮಠ, ಜೇಡರದಾಸಿಮಯ್ಯನ ಮಠ, ಅಕ್ಕನ ಮಠ, ಅಣ್ಣನಮಠ, ಅನುಭವ ಮಂಟಪ – ಹೀಗೆ ಹನ್ನೆರಡನೆ ಶತಮಾದಲ್ಲಿ ಎಳನೂರ ಎಪ್ಪತ್ತು (೭೭೦) ಶರಣರ ಮನೆಗಳೆಲ್ಲ ಮಠಗಳಾಗಿದ್ದವು ಎಂಬ ಮಾತಿದೆ. ಇದೆ ತಾಲೂಕಿನಲ್ಲಿ ಮಂಠಾಳ ತಡೋಳಾ ಗಡಿಗೌಡಗಾಂವ ಗೋರ್ಟಾ, ಪ್ರತಾಪೂರ, ಬೆಲೂರ, ಖೇಳಗಿ ಹಿರೇನಾಗಾಂವ ಮುಚಳಂಬ, ರಾಜೇಶ್ವರ, ಬಟಗೇರಾ – ಹೀಗೆ ಹಲವಾರು ಗ್ರಾಮುಗಳಲ್ಲಿ ವೀರಶೈವ ಮಠಗಳು ದೊರೆಯುತ್ತವೆ.

ಹಿರೇನಾಗಾಂವ ಗ್ರಾಮದ ಮಠದ ಶ್ರೀ ಶಾಂತಲಿಂಗೇಶ್ವರ ಸ್ವಾಮಿಗಳ ಸಂಸ್ಥಾಪಕರು. ಇವರ ತರುವಾಯ ಹಲವಾರು ಮಠಾಧೀಶರಾಗಿ ಸೇವೆ ಸಲ್ಲಿಸಿದರು. ಆದರೆ ಅವರ ಹೆಸರು ಪತ್ತೆಯಾಗಿಲ್ಲ. ಇಂದು ಜಯಶಾಂತಲಿಂಗೇಶ್ವರ ಸ್ವಾಮಿಗಳ ಮಠದ ನೂತನ ಪೀಠಾಧಿಪತಿಯಾಗಿ ಧರ್ಮಪ್ರಚಾರದ ಜೊತೆಗೆ ಶೈಕ್ಷಣಿಕ

ಸೇವೆಯಲ್ಲಿ ತೊಡಗಿದ್ದಾರೆ. ಗಡಿ ಗೌಡಗಾಂವ ಹಿರೇಮಠವು ಆರನೂರ ವರ್ಷಗಳ ಪ್ರಾಚೀನತೆಯ ಇತಿಹಾಸವನ್ನು ಹೊಂದಿದೆ. ರಂಭಾಪುರಿ ಶಾಖೆಯ ದೋಣಗಾಂವ ಹಿರೇಮಠದ ಮೂನ್ನೂರ ಎಂಟು ಶಾಖಾ ಮಠಗಳಲ್ಲಿ ಇದು ಒಂದು. ಶ್ರೀ ಹಾವಗಿ ಲಿಂಗೇಶ್ವರರು ಮಠದ ಮೂಲ ಮಠಾಧೀಶರಾಗಿದ್ದರಿಂದ, ಈ ಮಠಕ್ಕೆ ಹಾವಗಿ ಲಿಂಗೇಶ್ವರ ಮಠವೆಂದು ಕರೆಯುತ್ತಾರೆ. ಶ್ರೀ ಬಸವಲಿಂಗ ದೇಶಿಕರು ಕೆಲವು ಕಾಲ ಮಠದ ಜವಾಬ್ದಾರಿಯನ್ನು ವಹಿಸಿಕೊಂಡರು. ನಂತರ ಶ್ರೀ ನಾಗಮೆರೆಪ್ಪ ಸ್ವಾಮಿಗಳು ಮಠಕ್ಕೆ ಸೇವೆ ಸಲ್ಲಿಸಿದ್ದಾರೆ. ಇಂದಿನ ಶ್ರೀಗಳಾದ ಮ.ಘ.ಚ. ಶಾಂತವೀರ ಶಿವಾಚಾರ್ಯರು ಮಠದ ಉನ್ನತಿಯನ್ನು ಎತ್ತರಕ್ಕೆ ಹಾರಿಸುತ್ತಿದ್ದಾರೆ. ಶಾಸ್ತ್ರಪುರಾಣಗಳಲ್ಲಿ ಎತ್ತಿದ ಕೈ ಎನಿಸಿಕೊಂಡವರಾಗಿದ್ದಾರೆ.

ಬೆಲೂರ ಹಿರೇಮಠದ ವೈಶಿಷ್ಟವೆನೆಂದರೆ, ಈ ಮಠಕ್ಕೆ ಸೇವೆ ಸಲ್ಲಿಸಿದ ಆರು ಮಠಾಧೀಶರ ಹೆಸರುಗಳು ಮ.ಘ.ಚ. ಶ್ರೀ ಗುರು ಲಿಂಗಯ್ಯಾ ಮಹಾಸ್ವಾಮಿಗಳು, ಖೇಳಗಿ ಗ್ರಾಮದಲ್ಲಿ ಪುರಾತನ ಮಠವಿದೆ. ಭವ್ಯ ಕಟ್ಟಡವಿದೆ. ಶ್ರೀ ಶಿವಲಿಂಗೇಶ್ವರರು ಮಹಾಸ್ವಾಮಿಗಳು ಮಠದ ನೂತನ ಪೀಠಾಧಿಪತಿಗಳಾಗಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಮುಂತಾಳ ಗ್ರಾಮದ ಚೌಕಿ ಮಠವು ಶ್ರೀ ಗುಹೇಶ್ವರ ಮಹಾ ಸ್ವಾಮಿಗಳವರು ಸ್ಥಾಪಿಸೆ ಮಾಡಿದ್ದಾರೆಂದು ತಿಳಿದು ಬಂದಿದೆ. ಇವರ ತರುವಾಯ ಹಲವಾರು ಶ್ರೀಗಳು ಸೇವೆಸಲ್ಲಿಸಿದ್ದಾರೆ. ಇಂದು ಶ್ರೀ ಗುಹೇಶ್ವರ ಸ್ವಾಮಿಗಳು ಶೈಕ್ಷಣಿಕ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ರೀತಿಯಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

೧.೪ ಹುಡಗಿ ಹಿರೇಮಠ

ಹುಮನಾಬಾದ ತಾಲೂಕಿನಲ್ಲಿ ಬರುವ ಹುಡಗಿ ಗ್ರಾಮದ ಹಿರೇಮಠವು ಅತ್ಯಂತ ಪ್ರಾಚೀನವಾದುದು. ಕಲ್ಯಾಣ ಕಟ್ಟಿಯ ಹುಡಗಿ ಹಿರೇತನ ಮಠ ವೆಂದೇ ಪ್ರಖ್ಯಾತಿ ಪಡೆದಿದೆ. ಶ್ರೀ ಮಠದ ಏಳನೇ ಪೀಠಾಧಿಪತಿಯಾದ ಶ್ರೀ ದಿಗಂಬರ ಕರಿಬಸವೇಶ್ವರರು ಪವಾಡ ಪುರುಷರು. ಸಿದ್ಧಿ ಪುರುಷರು ದೇವತಾ ಪುರುಷರೆಂದು ಜನರು ಭಾವಿಸಿದರು. " ಲಘು ಭಕ್ತಿ ವಿಜಯ " ಎಂಬ ಹಿಂದಿ ಕೃತಿಯ ಹದಿನೆಂಟನೆ ಅಧ್ಯಾಯನದ ದೇವತಾ ಸ್ತುತಿಯಲ್ಲಿ ಇವರು ಪವಾಡಗಳು ದೊರೆಯುತ್ತವೆ.

ವಂಶಾವಳಿ

೧. ಶ್ರೀ ಸೋಮಶೇಖರ ಶಿವಾಚಾರ್ಯರು – ಮೂಲ ಮಠಾಧೀಶರು.

೨. ಶ್ರೀ ಬಸವಲಿಂಗ ಪಟ್ಟದ್ದೇವರು.

೩. ಶ್ರೀ ಚೆನ್ನಮಲ್ಲಪ್ಪ ಸ್ವಾಮಿಗಳು

೪. ಶ್ರೀ ಸಂಗನ ಬಸಪ್ಪಾ ಸ್ವಾಮಿಗಳು.

೫. ಶ್ರೀ ಮಹಾಲಿಂಗಪ್ಪಾ ಪಟ್ಟದ್ದೇವರು.

೬. ಶ್ರೀ ಚೆನ್ನಮಲ್ಲಪ್ಪ ಸ್ವಾಮಿಗಳು.

೭. ಶ್ರೀ ದಿಗಂಬರ ಕರಬಸಪ್ಪಾ ಸ್ವಾಮಿಗಳು.

೮. ಶ್ರೀ ವೀರೂಪಾಕ್ಷಪ್ಪ ಸ್ವಾಮಿಗಳು.

೯. ಶ್ರೀ ಗುರುಲಿಂಗಯ್ಯಾ ಶಿವಾಚಾರ್ಯರು.

೧೦. ಶ್ರೀ ಸೋಮಶೇಖರ ಶಿವಾಚಾರ್ಯರು.

೧೧. ಶ್ರೀ ವಿರೂಪಾಕ್ಷಯ್ಯಾ ಶಿವಾಚಾರ್ಯರು – (ನೂತನ ಪೀಠಾಧಿಪತಿ)

ಶಾಖಾ ಮಠಗಳು

| | ಗ್ರಾಮಗಳು | ತಾಲೂಕ | ಜಿಲ್ಲೆ | ರಾಜ್ಯ |
|---|---|---|---|---|
| ೧. | ರಾಜೇಶ್ವರ | ಬಸವಕಲ್ಯಾಣ | ಬೀದರ | ಕರ್ನಾಟಕ |
| ೨. | ಎಣಕೂರ | ಬಸವಕಲ್ಯಾಣ | ಬೀದರ | ಕರ್ನಾಟಕ |
| ೩. | ಗುತ್ತೆವಾಡಿ | ಬಸವಕಲ್ಯಾಣ | ಬೀದರ | ಕರ್ನಾಟಕ |
| ೪. | ಧುಮನಸೂರ | ಹುಮನಾಬಾದ | ಬೀದರ | ಕರ್ನಾಟಕ |
| ೫. | ಹಳ್ಳಿಖೇಡ | ಹುಮನಾಬಾದ | ಬೀದರ | ಕರ್ನಾಟಕ |
| ೬. | ಸಿಂದನಕೇರಿ | ಹುಮನಾಬಾದ | ಬೀದರ | ಕರ್ನಾಟಕ |
| ೭. | ಮದರಗಾಂವ | ಹುಮನಾಬಾದ | ಬೀದರ | ಕರ್ನಾಟಕ |
| ೮. | ತಾಳಮಡಗಿ | ಹುಮನಾಬಾದ | ಬೀದರ | ಕರ್ನಾಟಕ |
| ೯. | ಕಲ್ಲೂರ | ಹುಮನಾಬಾದ | ಬೀದರ | ಕರ್ನಾಟಕ |
| ೧೦. | ಖಡಕ ಚಿಂಚೋಳಿ | ಭಾಲ್ಕಿ | ಬೀದರ | ಕರ್ನಾಟಕ |

| | | | | |
|---|---|---|---|---|
| ೧೧. | ಮಸ್ಕಲ | ಔರಾದ | ಬೀದರ | ಕರ್ನಾಟಕ |
| ೧೨. | ಬೋರಗಿ | ಔರಾದ | ಬೀದರ | ಕರ್ನಾಟಕ |
| ೧೩. | ವಡಗಾಂವ | ಔರಾದ | ಬೀದರ | ಕರ್ನಾಟಕ |
| ೧೪. | ಕಂದಗೂಳ | ಬೀದರ | ಬೀದರ | ಕರ್ನಾಟಕ |
| ೧೫. | ರಾಯಚೂರ | ರಾಯಚೂರ | ರಾಯಚೂರ | ಕರ್ನಾಟಕ |

## ೧.೫. ವಿಮಲಖೇಡ (ಬೇಮಳಖೇಡ) ಹಿರೇಮಠ

ಈ ಗ್ರಾಮಕ್ಕೆ ವಿಮಲಖೇಡ ವೆಂದು ಜನ ಕರೆಯುತ್ತಾರೆ. ಈ ಮಠಕ್ಕೆ ಹಲವಾರು ವರ್ಷಗಳ ಇತಿಹಾಸವಿದೆ. ವೀರಶೈವ ಧರ್ಮದ ಪ್ರಚಾರ, ಬಸವತತ್ವ ಪ್ರಚಾರ ಮಾಡುವಲ್ಲಿ ಈ ಮಠವು ಗಣನೀಯವಾದ ಸೇವೆಯನ್ನು ಸಲ್ಲಿಸುತ್ತಿದೆ.

ವಂಶಾವಳಿ

೧. ಶ್ರೀ ಮ.ಘ.ಚ. ಲಿಂಗೈಕ್ಯ ಮಹಾಂತೇಶ್ವರು — ಮೂಲ ಮಠ ಸಂಸ್ಥಾಪಕರು.

೨. ಶ್ರೀ ಮ.ಘ.ಚ. ಲಿಂಗೈಕ್ಯ ರುದ್ರ ದೇವರು

೩. ಶ್ರೀ ಮ.ಘ.ಚ. ರಾಚೋಟಿ ದೇವರು

೪. ಶ್ರೀ ಮ.ಘ.ಚ. ಗುರುಲಿಂಗ ದೇವರು.

೫. ಶ್ರೀ ಮ.ಘ.ಚ. ಶಾಂತಯ್ಯಾ ದೇವರು.

೬. ಶ್ರೀ ಮ.ಘ.ಚ. ಸಂಗನ ಬಸಪ್ಪದೇವರು.

೭. ಶ್ರೀ ಮ.ಘ.ಚ. ರುದ್ರ ದೇವರು.

೮. ಶ್ರೀ ಮ.ಘ.ಚ. ಅಯ್ಯಪ್ಪದೇವರು.

೯. ಶ್ರೀ ಮ.ಘ.ಚ. ರಾಚೋಟಿಪ್ಪಾದೇವರು.

೧೦. ಶ್ರೀ ಮ.ಘ.ಚ. ಗುರುಪಾದಯ್ಯಾ ದೇವರು.

೧೧. ಶ್ರೀ ಮ.ಘ.ಚ. ಶಾಂತಪ್ಪಾದೇವರು.

೧೨. ಶ್ರೀ ಮ.ಘ.ಚ. ಎರಡನೆಯ ಮಹಾಂತೇಶ್ವರ ದೇವರು.

೧೩. ಶ್ರೀ ಮ.ಘ.ಚ. ವೀರಭದ್ರಪ್ಪಾದೇವರು.

೧೪. ಶ್ರೀ ಮ.ಘ.ಚ. ರಾಚೋಟಿಪ್ಪ ದೇವರು

೧೫. ಶ್ರೀ ಮ.ಘ.ಚ. ಗುರುಪಾದ ಶಿವಾಚಾರ್ಯರು – (ಸದ್ಯದ ಶ್ರೀಗಳು)

ಹನ್ನೆರಡನೆಯ ಮಠಾಧೀಶರಾದ ಎರಡನೆ ಮಹಾಂತಪ್ಪಾ ನವರು ಪವಾಡ ಪುರುಷರು, ಹದಿಮೂರನೆಯ ಪೀಠಾಧಿಶರಾದ ಶ್ರೀ ವೀರಭದ್ರಪ್ಪ ದೇವರು ತತ್ವಪದಗಳನ್ನು ಬಲ್ಲವರಾಗಿದ್ದರು. "ಬರಬಾರದಿತ್ತು ಹಿಂತ ಮಠಕ ! ಬೇಕಂತ ನಮ್ಮ ತಂದಿ ಕೊಟ್ಟರ ಹಟಕ್! ........ ಎಂದು ಹಾಡುವ ತತ್ವಗಳು ಅರ್ಥ ಪೂರ್ಣವಾದವು. ಶ್ರೀ ಮಠವು ಧಾರ್ಮಿಕ ಕಾರ್ಯಗಳ ಜೊತೆಗೆ ಸಾಮಾಜಿಕ ಸೇವೆಯಲ್ಲಿ ತೊಡಗಿದೆ. ಮಠಕ್ಕೆ ಬಂದ ಭಕ್ತರಿಗೆ ಪ್ರಸಾದದ ವ್ಯವಸ್ಥೆ ಇದೆ. ಸಾಂಸ್ಕೃತಿಕ ಕಾರ್ಯಕ್ರಮಗಳು ಜರಗುತ್ತವೆ.

೧.೬. ನಿಡವಂಚಾ ಮಠ

ಬಸವ ಧರ್ಮದ ಪಂಕ್ತಿಯಲ್ಲಿ ಬರುವ ನಿಡವಂಚಾ ಗ್ರಾಮದ ಚೌಕಿ ಮಠವು ಒಂದು. ಪುಟ್ಟದಾದ ಗ್ರಾಮದಲ್ಲಿ ಚಿಟ್ಟವಾದ ಮಠವನ್ನು ಕಂಗೊಳಿಸುತ್ತಿದೆ. ಈ ಮಠದ ವೈಶಿಷ್ಟವೆಂದರೆ, ಶಿವ ಶರಣೆಯರು ಈ ಮಠದ ಅಧಿಪತಿಯಾಗಿ ಅನುಪಮ ಸೇವೆಯನ್ನು ಸಲ್ಲಿಸಿದ್ದಾರೆ. ಅಲ್ಲದೆ ಯಾವುದೆ ಜಾತಿಯ ಭೇದ ಭಾವವಿಲ್ಲದೆ ಈ ಮಠದ ಮಠಾಧೀಶರಾಗಿದ್ದು ಕಂಡು ಬರುತ್ತದೆ. ನಾಲ್ಕನೇ ಪೀಠಾಧಿಪತಿಯಾದ ಶ್ರೀ ಸುಲ್ತಾನಸಾಬ ಕೊಸಮ ಎಂಬ ಹೆಸರಿನ ಮುಸ್ಲಿಮ ಶರಣನು ಈ ಮಠದ ಅಧಿಪತಿಯಾಗಿದ್ದನೆಂದು ತಿಳಿದು ಬರುತ್ತದೆ. ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಸೇವೆಯಲ್ಲಿ ನಿರಂತರವಾದ ಸೇವೆಯನ್ನು ಸಲ್ಲಿಸುತ್ತಿದೆ.

ಶ್ರೀ ಮಠದ ಸಂಸ್ಥಾಪಕರಾದ ಶ್ರೀ ಭದ್ರೇಶ್ವರರು ಕ್ರಿ. ಶ. ೧೮೩೨ ರಲ್ಲಿ ಸ್ಥಾಪಿಸಿದರೆಂದು ತಿಳಿದು ಬರುತ್ತದೆ. ಇವರು ತತ್ವ ಪದಕಾರರೆಂದು ಖ್ಯಾತಿ ಪಡೆದಿದ್ದರು. ಅವರ ತತ್ವ ಪದಗಳಾದ ಒಂದೆರಡು ಇಲ್ಲಿ ಉದಾರಿಸಬಹುದು.

'' ಗುರುಲಿಂಗ ಜಂಗಮ ತ್ರಿವೇಣಿ ಸಂಗಮ
ಮಹಾತೀರ್ಥವ ಮಹಾತ್ಮ ಶಂಕರ ಮಹಾತೀರ್ಥರ
ಆರು – ಕಿಳರ ಮುದ್ದ ಸ್ವಾಲಿಂಗವ ಮಹಾತ್ಮ ಗಮತು
ಕೊಡಲಿಯ ಆಕೃತಿಯ ಶಂಕರ ಕೊಡಲಿಯ ಆಕೃತಿ
ಗುರುವಿಗೆ ಗುಣವಿಲ್ಲ ಲಿಂಗಕ್ಕೆ ನೆಲೆಯಿಲ್ಲ.
ಜಂಗಮ ಭಕ್ತರಿಗೆ ಜಾತಿ ಜ್ಯೋತಿ ನೀತಿಯಿಲ್ಲ.''[೭]

ಈ ತತ್ವ ಪದದಲ್ಲಿ ಪರಮಾತ್ಮನ ವರ್ಣನೆಯಿದೆ. ಗುರುಲಿಂಗ ಜಂಗಮ ಒಂದೆ ಅದುವೆ ಶಂಕರ ಪರಮಾತ್ಮ ಎಂದು ಈ ತತ್ವದ ಅರ್ಥ – ಗುರು – ಲಿಂಗ – ಜಂಗಮ, ರಲ್ಲಿ ಯಾವುದೆ ರೀತಿಯ ತಾರತಮ್ಯವಿಲ್ಲ. ಎಂದು ಅನುಭವ ಸಾರದಲ್ಲಿ ವೆದ್ಯವಾಗುತ್ತದೆ. ಅವರ ಇನ್ನೊಂದು ತತ್ವಪದದಲ್ಲಿ.

" ನಾಯಿ ಅಂದರೆ ನಾಯಿ ಅಲ್ಲಪ್ಪ
ನಾ ಅಂಬೋ ಅಹಂಕಾರ ನಾಯಪ್ಪ
ಓಂ ಎಂಬೋ ಓಂಕಾರ ಬೀಜಪ್ಪಾ
ಬಿತ್ತಿ ನೋಡೊ, ಚಿತ್ತಿನೋಳಗವಿ."[2]

– ಎಂಬ ತತ್ವದಲ್ಲಿ " ನಾ " ಎಂಬ ಅಹಾಂಕರವನ್ನು ನಾಯಿಗೆ ಹೊಲಿಸಿದ್ದಾರೆ. " ಓಂ" ಎಂಬುವೆ ಸರ್ವ ಶ್ರೇಷ್ಠವಾದುದು. ಅದನ್ನು ಮಾನವ ಜನ್ಮದಲ್ಲಿ ಉಪಯೋಗಿಸಿಕೊಳ್ಳಬೇಕು. ಉತ್ತಮರಾಗಬೇಕು, ಎಂದು ಈ ತತ್ವ ಪದದಿಂದ ತಿಳಿದು ಬರುತ್ತದೆ.

ವಂಶಾವಳಿ

೧. ಶ್ರೀ ನಿಜಗುರು ಭದ್ರೇಶ್ವರರು – ಮಠದ ಮೂಲ ಸಂಸ್ಥಾಪಕರು.
೨. ಶ್ರೀ ಭೀಮರಾಯ ಮಹಾರಾಜರು.
೩. ಶ್ರೀ ಮುದ್ದಪಯ್ಯನವರು.
೪. ಶ್ರೀ ಸುಲ್ತಾನಸಾಬ ಕೊಸಮ.
೫. ಶ್ರೀ ಸಂಗಯ್ಯಾ ಅಪ್ಪನವರು.
೬. ಶ್ರೀ ಮಾತೆ ತುಕ್ಕಮ್ಮಾನವರು.
೭. ಶ್ರೀ ಭಾಗಯ್ಯಾನವರು.
೮. ಶ್ರೀ ನಾಗಪ್ಪಾನವರು.
೯. ಶ್ರೀ ಸಿದ್ದಪ್ಪನವರು.
೧೦. ಶ್ರೀ ಗುಂಡಾರೆಡ್ಡಿ ಚಿನ್ನಮಲ್ಲಯ್ಯಾನವರು.
೧೧. ಶ್ರೀ ಮಡಿವಾಳೇಶ್ವರನವರು.
೧೨. ಶ್ರೀ ಮಾತೆ ಮೈತ್ರಾದೇವಿ – (ನೂತನ ಶ್ರೀಗಳವರು)

ಹುಮನಾಬಾದ ನಗರದಲ್ಲಿ ಕಂಚಿನಮಠ, ಹಿರೇಮಠ, ವಿರಕ್ತಮಠ, ಕೆಂಪಯ್ಯನ ಮಠ, ಕರೆನ ಮಠ, ಕುಂಬಾರ ಮಠ, ಕರಿಬಸವೇಶ್ವರ ಮಠ, ಭಂಗಿ ಮಠ, ಟಂಕಸಾಲಿ ಮಠ, ಸಿದ್ಧೇಶ್ವರ ಮಠ, ಕಾಶಿಮಠ, ಬಸವತೀರ್ಥ ಮಠ, ಮುರುಘ ಮಠ, ಗಡ್ಡದ ಮಠ. ಅನ್ನದಾನದ ಮಠ, ಫಲಹಾರ ಮಠ, ಪತ್ರಿಮಠ ಗವಿ, ಮಠ, ಸ್ವಂತ ಮಠ,............ ಹೀಗೆ ೧೦೧ ಮಠಗಳಿದ್ದವೆಂದು ತಿಳಿದು ಬಂದಿದೆ. ಗುರು ಮಠಗಳು ಅಧಿಕವಾದಂತೆ ವಿರಕ್ತ ಮಠಗಳು ಕಡಿಮೆ ಇವೆ. ಕೆಲವೊಂದು ಮಠಗಳು ಮಾತ್ರ ತನ್ನ ಆಸ್ತಿ – ಪಾಸ್ತಿಯನ್ನು ಕಾಪಾಡಿಕೊಂಡು ಬಂದಿವೆ. ಉಳಿದ ಮಠಗಳೆಲ್ಲ ಮನೆಗಳಾಗಿ ಪರಿವರ್ತನೆಗೊಂಡಿವೆ.

### ೧. ೭ ಹುಲ ಕುಂಠಿ ಮಠ

ಭಾಲ್ಕಿ ತಾಲೂಕಿನಲ್ಲಿ ಬರುವ " ಹುಲಿಕುಂಠಿ ವಿರಕ್ತ " ಮಠವು ಅತ್ಯಂತ ಪ್ರಾಚೀನ ಮತ್ತು ಭವ್ಯ ಮಠವಾಗಿದೆ. ದಟ್ಟವಾದ ಅರಣ್ಯದ ವಿವಿಧ ವೃಕ್ಷಗಳ ಬನವು ಮಠದ ಸುತ್ತ ವ್ಯಾಪಿಸಿವೆ. ವಿಜಯನಗರದ ಚಿಕ್ಕ ದೇವರಾಯನ ಕಾಲಕ್ಕೆ ಪ್ರಸಿದ್ಧರಾದ ೧೦೧ ಜನರು ಇಲ್ಲಿಗೆ ಬಂದು ವಚನಗಳ ವಿಮರ್ಶೆ ಮಾಡಿದ್ದರೆಂದು ಅಲ್ಲದೆ ಸಂಶೋಧನೆ ಮಾಡಿದರೆಂದು ಊಹಿಸಲಾಗಿದೆ. ವಚನಗಳ ಕಟ್ಟಳೆಗಳು, ಹಸ್ತಪ್ರತಿಗಳು ಶ್ರೀ ಮಠದಲ್ಲಿಯೇ ಲಭಿಸಿವೆಯೆಂದು ತಿಳಿದು ಬಂದಿವೆ. ಶ್ರೀ ಮಠಕ್ಕೆ ಹನ್ನೊಂದು ಮಠಾಧೀಶರಾಗಿ ನಿಸ್ವಾರ್ಥತೆಯಿಂದ ಸೇವೆಯನ್ನು ಸಲ್ಲಿಸಿದ್ದಾರೆ. ಆದರೆ ಇಂದು ಈ ಮಠಕ್ಕೆ ಯಾರು ವಾರಸುದಾರರಿಲ್ಲ. ಊರ ಪ್ರಮುಖ ವ್ಯಕ್ತಿಗಳಾದ ಶ್ರೀ ಶಾಂತಪ್ಪಾ ಕಡಗಂಚಿ ಶ್ರೀ ಶಿವಕುಮಾರ ಕೊಟ್ರಯ್ಯಾ ಸ್ವಾಮಿ ಶ್ರೀಮತಿ ಶಂಕುಂತಲಾ ವೈಜಿನಾಥ ಸ್ವಾಮಿ, ಶ್ರೀ ಗಳಂಗಪ್ಪಾ ಕಡಗಂಚಿ ಶ್ರೀ ಮಾಧವರಾವ ಪಾಟೀಲ, ಹೀಗೆ ಮುಂತಾದವರು ಈ ಮಠದ ಜವಬ್ದಾರಿಯನ್ನು ವಹಿಸಿಕೊಂಡು ಬರುತ್ತಿದ್ದಾರೆ.

ವಂಶಾವಳಿ

೧. ಶ್ರೀ ಶಾಂತಲಿಂಗ ಮಹಾ ಶಿವಯೋಗಿಗಳು – ಮೂಲ ಮಠಾಧೀಶರು

೨. ಶ್ರೀ ರುದ್ರಮುನಿ ಸ್ವಾಮಿಗಳು.

೩. ಶ್ರೀ ಚೆನ್ನವೀರ ಸ್ವಾಮಿಗಳು.

೪. ಶ್ರೀ ಜೋಳದ ಸ್ವಾಮಿಗಳು.

೫. ಶ್ರೀ ತೋಂಟದ ಸ್ವಾಮಿಗಳು.

೬. ಶ್ರೀ ಸಿದ್ದಬಸವ ಸ್ವಾಮಿಗಳು.

೭. ಶ್ರೀ ಶಾಂತಲಿಂಗ ಸ್ವಾಮಿಗಳು.

ಔರಾದ ತಾಲೂಕಿನ ಕಮಲನಗರ, ಸಂಗಮ, ಮೇಳಕುಂದಾ ಚಿಕ್ಕಆಲೂರ, ವಡಗಾಂವ ಕೌಠಾ(ಬಿ) ಮುಧೋಳ ಡೋಣಗಾಂವ ಸಂತಪೂರ — ಮುಂತಾದ ಗ್ರಾಮಗಳಲ್ಲಿ ವೀರಶೈವ ಮಠಗಳು ದೊರೆಯುತ್ತವೆ.

೧. ೧೧ ಸಿದ್ಧಾರೂಢ ಮಠ

ಬೀದರ ನಗರದಲ್ಲಿಯೇ ಹುಟ್ಟಿಕೊಂಡಿರುವ ಸಿದ್ಧಾರೂಢ ಮಠವು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಗಣನೀಯವಾದ ಸೇವೆ ಸಲ್ಲಿಸುತ್ತಿದೆ. ಸಿದ್ಧಾರೂಢರ ಜನ್ಮಸ್ಥಳವಾದ ಚಳಕಾಪೂರ ಗ್ರಾಮದ ಶಾಖ ಮಠವೆ ಇಂದು ಹೆಮ್ಮರವಾಗಿ ಬೆಳೆದು ನಿಂತಿದೆ. ಶ್ರೀ ಶಿವಕುಮಾರ ಮಹಾಸ್ವಾಮಿಜಿಗಳವರ ನೇತೃತ್ವದಲ್ಲಿ ಈ ಮಠ ಹುಟ್ಟಿಕೊಂಡು ಉನ್ನತವಾದ ಸಿಖರವನ್ನು ಮುಟ್ಟಿದೆ. ಸದಾ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ತೊಡಗಿರುತ್ತಾರೆ. ಸಂಸ್ಕೃತ ಎಂ. ಎ. ಪಂಡಿತರಾಗಿ ಪುರಾಣ ಪ್ರವಚನಗಳನ್ನು ಜನರಿಗೆ ಅರ್ಥವಾಗುವಂತೆ ತಿಳಿಸಿ ಹೇಳುತ್ತಾರೆ.

ಸರ್ವರ ಹಿತ ಚಿಂತಕರಾದ ಶ್ರೀಗಳು ಸಮಾಜದೊಡನೆ ನಿಕಟ ಸಂಬಂಧವನ್ನು ಹೊಂದಿದ್ದಾರೆ. ಕರ್ನಾಟಕ –ಮಹಾರಾಷ್ಟ್ರ – ಆಂಧ್ರಪ್ರದೇಶ ಹಾಗೂ ವಿದೇಶಗಳಲ್ಲಿ ಬಸವ ಧರ್ಮ ಪ್ರಚಾರ ಪ್ರವಚನಗಳ ಮೂಲಕ ಸಾರಿದ್ದಾರೆ. ಹಲವಾರು ಕಡೆ ತಮ್ಮ ಶಾಖಾಗಳನ್ನು ಸ್ಥಾಪಿಸಿ ಅದರಡಿಯಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಿರುವುದು ಕಾಣುತ್ತದೆ.

| ಗ್ರಾಮಗಳು | ತಾಲೂಕುಗಳು | ಜಿಲ್ಲೆ | ರಾಜ್ಯ |
|---|---|---|---|
| ಚಳಕಾಪೂರ | ಭಾಲ್ಕಿ | ಬೀದರ | ಕರ್ನಾಟಕ |
| ಆಳೂರ | ಬಿಜಾಪೂರ | ಬಿಜಾಪೂರ | ಕರ್ನಾಟಕ |
| ಭೀಮರಾಯನ ಗುಡಿ | ಶಹಾಪೂರ | ಗುಲಬರ್ಗಾ | ಕರ್ನಾಟಕ |
| ಯಳವಂತಗಿ | ಸಾಂಗಲಿ | ಸಾಂಗಲಿ | ಮಹಾರಾಷ್ಟ್ರ |
| ಗುಲಬರ್ಗಾ | ಗುಲಬರ್ಗಾ | ಗುಲಬರ್ಗಾ | ಕರ್ನಾಟಕ |
| ಮಳಸಾವಳಗಿ | ಬಿಜಾಪೂರ | ಬಿಜಾಪೂರ | ಕರ್ನಾಟಕ |
| ಸಿಂದಗಿ ರಾಂಪೂರ | ಸಿಂದಗಿ | ಬಿಜಾಪೂರ | ಕರ್ನಾಟಕ |
| ಹೊಸಳ್ಳಿ | ಧಾರವಾಡ | ಧಾರವಾಡ | ಕರ್ನಾಟಕ |
| ನಾಗಪೂರ | ನಾಗಪೂರ | ನಾಗಪೂರ | ಮಹಾರಾಷ್ಟ್ರ |
| ಅಂಬರನಾಥ | ಮುಂಬಯಿ | ಮುಂಬಯಿ | ಮಹಾರಾಷ್ಟ್ರ |

೧. ೧೨ ಅಲಿಯಂಬರ ಹಿರೇಮಠ

ವಂಶಾವಳಿ

೧) ಶ್ರೀ ಗವೀಶ್ವರ ಸ್ವಾಮಿಗಳು

೨) ಶ್ರೀ ಕೊಬರಿ ಮಾಹಂತಪ್ಪಾ ಸ್ವಾಮಿಗಳು

೩) ಶ್ರೀ ಗಂಗಾಧರಪ್ಪಾ ಸ್ವಾಮಿಗಳು

೪) ಶ್ರೀ ಬಸವಲಿಂಗಪ್ಪಾ ಸ್ವಾಮಿಗಳು

೫) ಶ್ರೀ ರಾಚೋಟೆಪ್ಪಾ ಸ್ವಾಮಿಗಳು

೬) ಶ್ರೀ ಮಹಾಂತಲಿಂಗ ಶಿವಚಾರ್ಯರು

೭) ಶ್ರೀ ವಿಶ್ವನಾಥ ಶಿವಚಾರ್ಯರು

೮) ಶ್ರೀ ಷ.ಬ್ರ ನಾಗಭೂಷಣ ಶಿವಚಾರ್ಯರು (ಸದ್ಯದ ಶ್ರೀಗಳು)

ಬೀದರ ತಾಲೂಕಿನಲ್ಲಿ ಬರುವ ಲಾಡಗೇರಿಯ ರುದ್ರಮುನಿ ಮಠ, ಸಾವದಗೇರಿಯ ಮಾಡಿವಾಳೇಶ್ವರ ಮಠ, ಚಿದ್ರಿಯ ಇರಂತಿ ಮಠ, ಮುಷ್ಠೈನ ಮಠ, ಯದಲಾಪೂರ ಮಠ, ಬಗ್ದಲ್, ಕಮಠಾಣಾ, ಗಾದಗಿ, — ಮುಂತಾದ ಗ್ರಾಮಗಳಲ್ಲಿ ಮಠಗಳು ಕಂಡುಬರುತ್ತವೆ. ಅದರೆ ಅವುಗಳೆಲ್ಲ ಕಾಲಾನುಕ್ರಮವಾಗಿ ನಶಿಸಿ ಹೋಗಿವೆ. ಮಠಾಧೀಶರಿಲ್ಲದೇ ಕಂಗೊಳಿಸುತ್ತಿವೆ. ಕೆಲವು ಮಠಗಳೆಲ್ಲ ಮನೆಯಂತೆ ಪರಿಪವರ್ತನೆಗೊಂಡಿದ್ದು ಕಂಡುಬರುತ್ತದೆ.

೧.೧೩. ಚಾಂಬೋಳ ಹಿರೇಮಠ

ಚಾಂಬೋಳ ಗ್ರಾಮದ ಹಿರೇಮಠವು ಒಂದು. ಶ್ರೀ ರುದ್ರುಮುನಿ ಪಟ್ಟದ್ದೇವರು ಮಠದ ಮೂಲ ಸಂಸ್ಥಾಪಕರೆಂದು ತಿಳಿದು ಬಂದಿದೆ. ಅವರ ತರುವಾಯ ಬಂದ ಸ್ವಾಮಿಗಳ ಹೆಸರು ಪತ್ತೆಯಾಗಿಲ್ಲ. ನೂತನ ಕಾಲದ ಶ್ರೀ ಎರಡನೆ ರುದ್ರಮುನಿ ಪಟ್ಟದ್ದೇವರು ಮಠದ ಅಧಿಕಾರ ವಹಿಸಿಕೊಂಡು ಶೈಕ್ಷಣಿಕ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಶ್ರೀ ಮಠದಲ್ಲಿ ಧಾರ್ಮಿಕ ಕಾರ್ಯ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ಅಲ್ಲದೆ ಶ್ರೀ ಮಠದಲ್ಲಿ ರುದ್ರಮುನಿ ಶಿಕ್ಷಣ ಸಂಸ್ಥೆಯನ್ನು ತೆ ರೆದು ಪೂರ್ವಪ್ರಾಥಮಿಕ ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳು ನಡೆಸುತ್ತಿದ್ದಾರೆ.

೧.೧೪. ಇಟಗಾ ವಿರಕ್ತಮಠ

ಇಟಗಾ ಗ್ರಾಮದ ವಿರಕ್ತ ಮಠವು ಪ್ರಾಚೀನ ಕಾಲದ್ದಾಗಿದೆಯೆಂದು ತಿಳಿದು ಬಂದಿದೆ. ಶ್ರೀ ಮಠದ ಭವ್ಯವಾದ ಕಟ್ಟಡವಿದೆ. ನಾಲ್ಕು ಕಡೆ ಅಂದವಾದ ಪಡಸಾಲೆಯನ್ನು ಹೊಂದಿದೆ. ಶ್ರೀ ಮಠವು ಸದ್ಯಕ್ಕೆ ಪೀಠಾಧಿಪತಿಗಳಿಗೆ ಸ್ವಾಗತವನ್ನು ಕೋರುತ್ತಿದೆ. ಸದ್ಯ ಶ್ರೀ ಮಠದ ಹತ್ತಿರ ಬಂದಂತೆ

"ಮನೆಯೊಳಗೆ ಮನೆಯೊಡೆಯ ಇದ್ದಾನೋ ಇಲ್ಲವೇ ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ ಮನೆಯೊಳಗೆ ರಜ ತುಂಬಿ
ಮನೆಯೊಳಗೆ ಮನೆಯೊಡೆಯ ಇದ್ದಾನೊ, ಇಲ್ಲವೋ ?
ತನುವಿನಲ್ಲಿ ಹುಸಿ ತುಂಬಿ ಮನದೊಳಗೆ ವಿಷಯ ತುಂಬಿ
ಮನೆಯೊಳಗೆ ಮನೆಯೊಡೆಯ ನಿಲ್ಲಾ ಕೂಡಲ ಸಂಗಮ ದೇವಾ."[೪]

ಎಂಬ ಬಸವಣ್ಣನವರ ವಚನದಂತೆ ಶ್ರೀಮಠವು ಕಂಗೊಳಿಸುತ್ತಿದೆ. ಶ್ರೀಮಠಕ್ಕೆ ಯಾರು ವಾರಸುದಾರರಿಲ್ಲ, ಅಸ್ತವ್ಯಸ್ತಗಳಿಂದ ಕೂಡಿಕೊಂಡಿದೆ. ಗ್ರಾಮದ ಜನರು ಶ್ರೀ ಮಠದ ಆಸರೆಯಲ್ಲಿ ದನಕರುಗಳು, ಹುಲ್ಲು, ಕಳಕಿ ಮಂತಾದ ವಸ್ತುಗಳನ್ನು ಸಂಗ್ರಹಿಸುತ್ತಿದ್ದಾರೆ. ಪ್ರಾಚೀನ ಕಾಲದಲ್ಲಿ ಹೆಸರುವಾಸಿಯಾದ ಮಠ ಇಂದು ಭಕ್ತರು ಇಲ್ಲದೆ, ಶ್ರೀಗಳು ಇಲ್ಲದೆ, ಅನಾಥವಾಗಿದೆ. ಶ್ರೀ ಮಠದ ವಂಶಾವಳಿ ಕೆಳಗಿನಂತಿದೆ.

೧) ಶ್ರೀ ಚನ್ನಮಲ್ಲೇಶ್ವರ ಮಹಾಸ್ವಾಮಿಗಳು — ಮಠದ ಸಂಸ್ಥಾಪಕರು
೨) ಶ್ರೀ ಗುರುಬಸಯ್ಯ ಸ್ವಾಮಿಗಳು
೩) ಶ್ರೀ ಚನ್ನಮಲ್ಲಯ್ಯಾ ಸ್ವಾಮಿಗಳು
೪) ಶ್ರೀ ವೀರಂತಯ್ಯಾ ಸ್ವಾಮಿಗಳು
೫) ಶ್ರೀ ಗುರುಬಸಯ್ಯ ಸ್ವಾಮಿಗಳು

ಹೀಗೆ ಶ್ರೀ ಮಠದಲ್ಲಿ ಐದು ಜನ ಮಠಾಧೀಶರಾಗಿದ್ದರು. ಇಂದು ಶ್ರೀ ಮಠಕ್ಕೆ ಯಾರು ಮಠಾಧಿಪತಿಗಳಿಲ್ಲ. ಶ್ರೀಮಠಕ್ಕೆ ಒಂದು ಕಿ.ಮಿ. ಅಂತರದಲ್ಲಿ ಹೊಸದಾಗಿ ಮತ್ತೊಂದು ಮಠ ಹುಟ್ಟಿಕೊಂಡಿದೆ. ಶ್ರೀ ಚನ್ನಮಲ್ಲೇಶ್ವರ ತ್ಯಾಗಿ ಮಠ ಎಂದು ನಾಮಕರಣದಿಂದ ಬೆಳೆಯುತ್ತಿದೆ ಶ್ರೀ ಚನ್ನಮಲ್ಲೇಶ್ವರ ಸ್ವಾಮಿಗಳು ಪಾಠ ಪ್ರವಚನಗಳಲ್ಲಿ ಪ್ರವೀಣರಾಗಿದ್ದರು. ನಾಡಿನ ನಾನ ಕಡೆಯ ಭಕ್ತರ ಬಳಗವನ್ನು ನೆರೆಸಿದ್ದಾರೆ. ಹಾಳು ಬಿದ್ದಿರುವ ಮಠದ ಕೀರ್ತಿಯನ್ನು ಹಾಗೂ ಇಟಗಾ ಗ್ರಾಮದ ಕೀರ್ತಿಯನ್ನು

ನೆರೆ ರಾಜ್ಯಗಳಲ್ಲಿ ಹರಡಿದೆ. ಶ್ರೀ ಗಳು ಜ್ಞಾನದ ಖಣಿಯಾಗಿದ್ದಾರೆ ಶ್ರೀ ಮಠದಲ್ಲಿ ಸತತವಾಗಿ ಅನ್ನ ದಾಸೋಹವನ್ನು ನಡಿಸಿಕೊಂಡು ಬರುತ್ತಿದ್ದಾರೆ. ತಿಂಗಳಿಗೊಂದರೆಡು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತಾರೆ. ಅದರ ಮುಖಾಂತರ ಧಾರ್ಮಿಕ ಹಾಗೂ ಸಾಮಾಜಿಕ ಸೇವೆಗಳಿಗೆ ಕಂಕಣ ಬದ್ಧರಾಗಿ ನಿಂತಿದ್ದಾರೆ.

## ೨. ಗುಲಬರ್ಗಾ

### ೨. ೧. ಕೋರಿ ಸಿದ್ದೇಶ್ವರ ಮಠ

ಧಾರ್ಮಿಕ ಹಾಗೂ ಸಾಂಸ್ಕೃತಿಕ ಪರಂಪರೆಯಲ್ಲಿ ಹುಟ್ಟಿಕೊಂಡ ನಾಲವಾರ ಶ್ರೀ ಕೋರಿ ಸಿದ್ದೇಶ್ವರ ಮಠವು ಒಂದು. ಇದು ಚಿತ್ತಾಪೂರ ತಾಲೂಕಿನಲ್ಲಿದೆ. ಸುಮಾರು ನಾಲ್ಕುನೂರು ವರ್ಷಗಳ ಪ್ರಾಚೀನತೆಯನ್ನು ಹೊಂದಿದೆ. ಶ್ರೀ ಮಠವುಅನೇಕ ವರ್ಷ. ಅನಾಥವಾಗಿ ಉಳಿದಿತ್ತು. ಅಂದರೆ ಮಠಾಧೀಶರಿರಲಿಲ್ಲ. ಶ್ರೀ ಸಿದ್ದೇಶ್ವರ ಸ್ವಾಮಿಗಳು ಎಂಬುವವರು ತಪಸ್ಸು, ಧ್ಯಾನ, ಯೋಗ, ಗಳಲ್ಲಿ ಪ್ರವೀಣರಾಗಿದ್ದರು. ಶ್ರೀಗುರು ಮಲ್ಲಾರಾಧ್ಯರ ಅನುಗ್ರಹದ ಒತ್ತಾಯದ ಮೇರೆದ ಶ್ರೀ ಸಿದ್ದೇಶ್ವರರು ನಾಲವಾರ ಮಠಕ್ಕೆ ಪೀಠಾಧಿಪತಿಯಾಗಲು ಒಪ್ಪಿಕೊಂಡರು ನಾಲವಾರ ಗ್ರಾಮಕ್ಕೆ ಆಗಮಿಸುತ್ತಿರುವಾಗ ಹೊಳೆಯು ತುಂಬಿ ಹರಿಯುತ್ತಿತ್ತು. ಶ್ರೀ ಸಿದ್ದೇಶ್ವರ ಹೇಗಲ ಮೇಲೆ ಯಾವಾಗಲು ಕೋರಿ ಅಂದರೆ ಹಚ್ಚಿಕೊಳ್ಳುವ ವಸ್ತ್ರ (ಗೊಂಗಡಿ) ಇರುತ್ತಿತ್ತು. ಆ ಕೋರಿಯನ್ನು ತುಂಬಿದ ಹೊಳೆಯಲ್ಲಿ ಹಾಸಿ ಅದರ ಮೇಲೆ ಕುಳಿತುಕೊಂಡು ಬಂದರು. ಆದ್ದರಿಂದ ಇಂದು ಶ್ರೀ " ಕೋರಿ ಸಿದ್ದೇಶ್ವರ ಮಠ " ವೆಂದೆ ಪ್ರಖ್ಯಾತಿ ಪಡೆದಿದೆ.

ಕೋರಿ ಸಿದ್ದೇಶ್ವರ ಸ್ಥಳ ಸುರಪುರ ತಾಲೂಕಿನ ತಿಮ್ಮಾಪೂರ, ತಂದೆ ಶ್ರೀ ಶಿವಲಿಂಗಾಚಾರ್ಯ ತಾಯಿ ಶಿವದೇವಿ ಜೆವರ್ಗಿ ತಾಲೂಕಿನ ಕಾಕಂಡಿ ಗ್ರಾಮದ ಹಿರೇಮಠದ ಮಲ್ಲಾರಾಧ್ಯರು ಈ ಮನೆತನದ ಗುರುಗಳು. ಇವರು ಮಠಕ್ಕೆ ಬಂದ ಕೆಲವೆ ವರ್ಷಗಳಲ್ಲಿ ಮಠವನ್ನು ಉನ್ನತಕ್ಕೆ ಏರಿಸಿದರು. ಮಠದ ಕೀರ್ತಿ ನೆರೆ ರಾಜ್ಯಗಳಿಗೆ ಹಬ್ಬಿದೆ. ಅವರು ಪವಾಡ ಪುರುಷರಂತೆ ಪ್ರಖ್ಯಾತಿ ಪಡೆದಿದ್ದಾರೆ.

ವಂಶಾವಳಿ

೧) ಶ್ರೀ ಲಿಂಗೈಕ್ಯ ಷ.ಬ್ರ. ಮುರುಘೇಂದ್ರ ಸ್ವಾಮಿಗಳು

೨) ಶ್ರೀ ಲಿಂಗೈಕ್ಯ ಷ.ಬ್ರ. ಕೋರಿ ಸಿದ್ದೇಶ್ವರ ಸ್ವಾಮಿಗಳು

೩) ಶ್ರೀ ಲಿಂಗೈಕ್ಯ ಷ.ಬ್ರ ತೋಟೆಂದ್ರ ಮಹಾಸ್ವಾಮಿಗಳು

೪) ಶ್ರೀ ಲಿಂಗೈಕ್ಯ ಷ.ಬ್ರ. ಎರಡನೆ ತೊಟೇಂದ್ರ ಸ್ವಾಮಿಗಳು

೫) ಶ್ರೀ ಲಿಂಗೈಕ್ಯ ಷ.ಬ್ರ. ಮೂರನೇ ತೊಟೇಂದ್ರ ಸ್ವಾಮಿಗಳು

೬) ಶ್ರೀ ಷ.ಬ್ರ. ತೊಟೇಂದ್ರ ಮಹಾಸ್ವಾಮಿಗಳು. (ನೂತನ ಪೀಠಾಧಿಪತಿಗಳು) ನೂತನ ಶ್ರೀಗಳು ಮಠದ ಅಧಿಕಾರವನ್ನು ವಹಿಸಿಕೊಂಡಿದ್ದ ನಂತರ ಮಠದ ಉನ್ನತಿಗಾಗಿ ಹಗಲಿರುಳು ಶ್ರಮಿಸುತ್ತಿದ್ದಾರೆ.

## ೨.೨. ಭರತನೂರ ವಿರಕ್ತ ಮಠ

ಚಿತಾಪೂರ ತಾಲೂಕಿನಲ್ಲಿ ಬರುವ ಭರತನೂರ ಗ್ರಾಮದ ವಿರಕ್ತ ಮಠವು ಕ್ರಿ.ಶ. ೧೪೮೦ ರಲ್ಲಿ ಸ್ಥಾಪನೆಗೊಂಡಿತ್ತೆಂದು ತಿಳಿದು ಬಂದಿದೆ. ಶ್ರೀ ಮಠಕ್ಕೆ ಗುರನಂಜೇಶ್ವರ ಮಠವೆಂದು ಹೆಸರು ಬಳಕೆಯಾಗಿದೆ. ಏಕೆಂದರೆ ಗುರು ನಂಜೇಶ್ವರರು ಅಂದಿನ ಕಾಲದಲ್ಲಿ ಮಂಗಳಾಪೂರ ಗ್ರಾಮದಿಂದ ಪಾದಯಾತ್ರೆ ಮಾಡುತ್ತ ಬಂದು ಭರತನೂರ ಗ್ರಾಮಕ್ಕೆ ತಲುಪಿದರು. ಈ ಗ್ರಾಮದಲ್ಲಿ ಅವರ ಅಪಾರ ಭಕ್ತರ ಬಳಗ ಇತ್ತು. ಭಕ್ತರ ಒತ್ತಾಯದ ಮೇರೆಗೆ ಗುರುನಂಜೇಶ್ವರರು ಅಲ್ಲಿಯೇ ಉಳಿದುಕೊಂಡರು. ಗ್ರಾಮದ ನೂರಾರು ಭಕ್ತರು ಶ್ರೀಗುರುಗಳವರಿಗೆ ಒಂದು ಮಠವನ್ನು ಕಟ್ಟಿಸಿಕೊಟ್ಟರು. ಶ್ರೀಗಳು ಮಠದಲ್ಲಿಯೇ ಉಳಿದುಕೊಂಡು ಧಾರ್ಮಿಕ ಉಪದೇಶ ನೀಡುತ್ತಿದ್ದರು.

''ಲೋಕದ ಡೊಂಕು ನಿಷೆಕೆ ತಿದ್ದುವಿರಿ ?
ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ
ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ
ನೆರೆ ಮನೆಯವರ ದುಃಖಕ್ಕೆ ಅಳುವರ ಮೆಚ್ಚ
ಕೂಡಲ ಸಂಗಮ ದೇವಾ ''[೫]

– ಎನ್ನುವ ಬಸವಣ್ಣನವರ ವಚನ ಸಾರಂಶವನ್ನು ಬಿಚ್ಚಿ ಹೇಳುತ್ತಿದ್ದರು. ಪ್ರತಿಯೊಬ್ಬರು ಮೊದಲು ತಮ್ಮ ತಮ್ಮ ಡೊಂಕನ್ನು ಸರಿ ಪಡಿಸಿಕೊಳ್ಳಬೇಕು, ಎಂದು, ಚಾಡಿ ಹೇಳಲು ಬಂದ ಭಕ್ತರನ್ನು ಕರೆಯಿಸಿ ಹೇಳುತ್ತಿದ್ದರು. ಅಂದಿನಿಂದ ಒಬ್ಬರ ಚಾಡಿ, ನಿಂದನೆ ಮಾಡುವದು ಬಿಟ್ಟುಕೊಟ್ಟ ಇಡೀ ಸಮಾಜವನ್ನು

ತಿದ್ದುವುದು ನಮ್ಮಿಂದ ಸಾಧ್ಯವಿಲ್ಲ ಆ ಭಗವಂತನಿದ್ದಾನೆ. ಸದ್ಯಕ್ಕೆ ನಾನು ನಮ್ಮ ಮನಸ್ಸನ್ನು ಭಾವನೆಯನ್ನು ತಿದ್ದಿಕೊಂಡರೆ ಮಾತ್ರ ಸನ್ಮಾರ್ಗದತ್ತಸಾಗಲು ಸಾಧ್ಯ ಎಂದು ಪದೆ ಪದೆ ಪಾಠ ಪ್ರವಚನಗಳ ಮೂಲಕ ಸಾರಿ ಹೇಳುತ್ತಿದ್ದರು.

ವಂಶಾವಳಿ

೧) ಶ್ರೀ ಗುರುನಂಜೇಶ್ವರ ಸ್ವಾಮಿಗಳು

೨) ಶ್ರೀ ಮರಿ ಗುರು ನಂಜೇಶ್ವರ ಸ್ವಾಮಿಗಳು

೩) ಶ್ರೀ ಸಿದ್ದಲಿಂಗೇಶ್ವರ ಸ್ವಾಮಿಗಳು

೪) ಶ್ರೀ ಚನ್ನಬಸವ ಸ್ವಾಮಿಗಳು

೫) ಶ್ರೀ ಶಿವಬಸವ ಸ್ವಾಮಿಗಳು

೬) ಶ್ರೀ ಸಿದ್ದರಾಮ ಸ್ವಾಮಿಗಳು

೭) ಶ್ರೀ ಸಂಗನ ಬಸವ ಸ್ವಾಮಿಗಳು

೮) ಶ್ರೀ ಮರುಘೇಂದ್ರ ಸ್ವಾಮಿಗಳು

೯) ಶ್ರೀ ಗುರುನಂಜೇಶ್ವರ ಸ್ವಾಮಿಗಳು

೧೦) ಶ್ರೀ ಮ.ನಿ.ಪ್ರ.ಚಿಕ್ಕ.ಗುರು ನಂಜೇಶ್ವರ ಮಹಾಸ್ವಾಮಿಗಳು – (ಸದ್ಯದ ಶ್ರೀಗಳು)

೨. ೩. ರುದ್ದನೂರ ವಿರಕ್ತ ಮಠ

ಶ್ರೀ ಮಠವು ಹದಿನೈದನೆ ಶತಮಾನದಲ್ಲಿ ಶ್ರೀ ತೋಂಟದ ಸಿದ್ದಲಿಂಗಯತಿಗಳ ಕಾಲದಲ್ಲಿ ಹುಟ್ಟಿದೆ ಯೆಂದು ಪ್ರತೀತಿ. ಶ್ರೀಮಠವು ಧಾರ್ಮಿಕ ಪ್ರಚಾರಕ್ಕೆ ಹೆಚ್ಚಿನ ಮಹತ್ವ ಕೊಟ್ಟಿದೆ. ಭಕ್ತರನ್ನು ಭಕ್ತಿಯಿಂದ ಕಾಣುವ ಈ ಮಠ ''ಕಾಗೆಯೊಂದಗಳು ಕಂಡರೆ ಕರೆಯುವುದು ತನ್ನ ಬಳಗವನೆಲ್ಲ'' ಎಂಬಂತೆ ಶ್ರೀ ಮಠದ ಸಂಸ್ಕೃತಿಯಾಗಿದೆ. ಶ್ರೀ ಮಠದ ಸಂಸ್ಥಾಪಕರಾದ ಶ್ರೀ ಸಿದ್ದೇಶ್ವರರು ಪವಾಡ ಪುರುಷರು ಸಿದ್ಧಿಪುರುಷರೆಂದು ಖ್ಯಾತಿ ಪಡೆದಿದ್ದರು. ಆದ್ದರಿಂದ ಇಂದು ಈ ಮಠಕ್ಕೆ '' ತೋಂಟದ ಸಿದ್ದರ ಮಠ'' ವೆಂದು ಜನರು ಭಕ್ತಿ ಭಾವದಿಂದ ಕರೆಯುವದು ಆದರ್ಶವಾಗಿದೆ.

ವಂಶಾವಳಿ

೧. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಸಿದ್ದೇಶ್ವರ ಸ್ವಾಮಿಗಳು.

೨. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಬಸವಲಿಂಗಯ್ಯಾ ಸ್ವಾಮಿಗಳು.

೩. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಮಹಾಲಿಂಗೇಶ್ವರ ಸ್ವಾಮಿಗಳು

೪. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಶಿವಲಿಂಗಯ್ಯಾ ಸ್ವಾಮಿಗಳು.

೫. ಲಿಂಗೈಕ್ಯ ಶ್ರೀ ಮ.ನಿ.ಪ್ರ. ರಾಜೋಟಯ್ಯಾ ನವರು.

೬. ಲಿಂಗೈಕ್ಯ ಶ್ರೀ ಮ.ನಿ.ಪ್ರ. ಸಿದ್ಧಪಯ್ಯಾ ಸ್ವಾಮಿಗಳು. (ನೂತನ)

೨.೪. ಸುಲೇಪೇಟೆಯ ವಿರಕ್ತಮಠ

ಚಿಂಚೋಳಿ ತಾಲೂಕಿನಲ್ಲಿ ಬರುವ ಸುಲಿಪೇಟಿ ಗ್ರಾಮದಲ್ಲಿ ವಿರಕ್ತ ಮಠವಿದೆ. ಈ ಮಠಕ್ಕೆ "ಖಟ್ವಾಂಗೇಶ್ವರ ಮಠ" ವೆಂದು ಕರೆಯುತ್ತಾರೆ. ಏಕೆಂದರೆ ಈ ಮಠವು ಸುಮಾರು ಮೂರನೂರ ಐವತ್ತು ವರ್ಷಗಳ ಪ್ರಾಚೀನತೆಯನ್ನು ಹೊತ್ತು ನಿಂತಿದೆ. ಶ್ರೀ ಮಹಾಸ್ವಾಮಿಗಳಾದ ಖಟ್ವಾಂಗೇಶ್ವರರು, ಉಳವಿಯಿಂದ ಸಂಚಾರ ಮಾಡುತ್ತ ಧರ್ಮೋಪದೇಶ ನೀಡುತ್ತ ಹಳ್ಳಿ ಪಟ್ಟಣಗಳನ್ನು ಸಂಚರಿಸಿ, ಈ ಗ್ರಾಮಕ್ಕೆ ಬಂದು ನೆಲೆ ನಿಂತರು. ಆದ್ದರಿಂದಲೇ ಖಟ್ವಾಂಗೇಶ್ವರ ಮಠವೆಂದೇ ಪ್ರಖ್ಯಾತಿ ಪಡೆದಿದೆ.

"ಎತ್ತಣ ಮಾಮರ ಎತ್ತಣ ಕೋಗಿಲೆ ?
ಎತ್ತಣಿಂದೆತ್ತ ಸಂಬಂಧವಯ್ಯ ?
ಬೆಟ್ಟದ ನೆಲ್ಲಿಯ ಕಾಯಿ ಸಮುದ್ರದೊಳಗಣ ಉಪ್ಪು
ಎತ್ತಣಿಗಿಂದೆತ್ತ ಸಂಬಂಧವಯ್ಯ ?
ಗುಹೇಶ್ವರ ಲಿಂಗಕ್ಕೆಯ ಎನಗೆಯ
ಎತ್ತಣಿಗೆಂದೆತ್ತ ಸಂಬಂಧವಯ್ಯ"[೬]

ಅಲ್ಲಮ ಪ್ರಭುದೇವರ ವಚನದಂತೆ ಶ್ರೀಮಠದ ಮೂರನೆಯ ಅಧಿಪತಿಯಾದ ಸಿದ್ಧಲಿಂಗ ಸ್ವಾಮಿಗಳವರಿಗೆ ಹಾಗೂ ಕಲಬುರ್ಗಿಯ ಶರಣ ಬಸಪ್ಪನವರಿಗೆ ತುಂಬಾ ಸಂಬಂಧ ವಿತ್ತು. ಕಲಬುರ್ಗಿ ಶರಣ ಬಸವೇಶ್ವರರು ತಮ್ಮ ಕಾಲ ಮಾಸದಲ್ಲಿ ಬರುವ ಪುರಾಣ ಮಂಗಲ ಕಾರ್ಯಕ್ರಮಕ್ಕೆ ಅಂದಿನ ಪೀಠಾಧಿಪತಿಯಾದ ಶ್ರೀ ಸಿದ್ಧಲಿಂಗ ಸ್ವಾಮಿಗಳ ಭಿನ್ನಹದ ಮೇರೆಗೆ ಖಟ್ವಾಂಗೇಶ್ವರ ಮಠಕ್ಕೆ ಭೇಟಿ ನೀಡಿದರು. ಎಂಬ ಮಾತನ್ನು ಅವಲೋಕಿಸಿದಾಗ ಶ್ರಿ ಶರಣ ಬಸವೇಶ್ವರರಿಗೂ ಹಾಗೂ ಖಟ್ವಾಂಗೇಶ್ವರ ವಿರಕ್ತ ಮಠಕ್ಕೆ ತುಂಬ ಹತ್ತಿರದ ಸಂಬಂಧ ಇತ್ತೆಂದು ತಿಳಿದು ಬರುತ್ತದೆ. ಶ್ರೀ ಮಠದಲ್ಲಿ ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು ಭಕ್ತರು ಶ್ರೀಮಠಕ್ಕೆ ಧಾವಿಸಿ ಬರುತ್ತಿದ್ದರು. ಎಲ್ಲಿಂದಲೋ

ಬಂದ ಶ್ರೀಗಳು ಇಲ್ಲಿ ನೆಲೆಸಿ ಎಲ್ಲ ಭಕ್ತರ ಮನಸ್ಸನ್ನು ಸೂರೆಗೊಂಡಿದ್ದಾರೆ. ಅಲ್ಲದೆ ಅವರ ಜತೆ ಹೆಚ್ಚಿನ ಸಂಬಂಧವನ್ನು ಬೆಳೆಸಿಕೊಂಡಿದ್ದಾರೆಂದು ಅರ್ಥವಾಗುತ್ತದೆ. ನಮಗೆ ದೊರೆತ ಆಧಾರದಂತೆ ಶ್ರೀ ಮಠದ ವಂಶವಳಿ ಕೆಳಗಿನಂತಿವೆ.

ವಂಶಾವಳಿ

೧. ಶ್ರೀ ಲಿಂಗೈಕ್ಯ ಮ. ನಿ.ಪ್ರ. ಖಟ್ವಾಂಗೇಶ್ವರ ಸಾಮಿಗಳು (ಮೂಲ ಮಠದ ಸಂಸ್ಥಾಪಕರು) ೧೨ ನೇ.ಶ.

೨. ಶ್ರಿ ಶ್ರೀ ಲಿಂಗೈಕ್ಯ ಮ. ನಿ.ಪ್ರ.ಚೆನ್ನ ಬಸಪ್ಪನವರು (ಕ್ರಿ.ಶ. ೧೭೨೦ – ೧೭೪೦)

೩. ಶ್ರೀ ಲಿಂಗೈಕ್ಯ ಮ. ನಿ.ಪ್ರ. ಸಿದ್ದಲಿಂಗ ಮಹಾಸ್ವಾಮಿಗಳು (ಕ್ರಿ.ಶ. ೧೭೫೦ – ೧೮೩೬)

೪. ಶ್ರೀ ಲಿಂಗೈಕ್ಯ ಮ. ನಿ.ಪ್ರ.ಸದಾಶಿವ ಸ್ವಾಮಿಗಳು (ಕಿ.ಶ. ೧೮೪೦ – ೧೯೩೦)

೫. ಶ್ರೀ ಮ.ನಿ.ಪ್ರ. ಮರಿ ಖಟ್ವಾಂಗೇಶ್ವರರು (ಸದ್ಯದವರು).

## ೨. ೫. ಖಜೂರಿ ವಿರಕ್ತಮಠ

''ಎಲ್ಲರ ದೀಕ್ಷೆಯ ಪರಿಯಂತಲ್ಲ ಎಮ್ಮಯ್ಯನ ದೀಕ್ಷೆ
ನಡೆ ನುಡಿ ಶುದ್ಧವಾದವರಿಗಲ್ಲದೆ ಅನುಗ್ರಹಿಸ ನೋಡಾ
ಪರಮಾರ್ಥಕ್ಕಲ್ಲದಜಡ ಜನರನೊಲ್ಲ. ದೀಕ್ಷೆಯ ಕೊಡನು
ಭವಭಾರಿಗಳ ಮುಖದತ್ತನೋಡನು ನಮ್ಮ ಕೂಡಲ ಚೆನ್ನ
ಸಂಗಯ್ಯನೆಂಬ ಜ್ಞಾನಗುರು''[2]

ಆಳಂದ ತಾಲೂಕಿನಲ್ಲಿ ಬರುವ ಖಜುರಿ ಒಂದು ಪುಟ್ಟ ಗ್ರಾಮ. ಗಡಿಭಾಗವಾದ ಈ ಗ್ರಾಮದಲ್ಲಿ ವಿರಕ್ತಮಠವು ಧಾರ್ಮಿಕ ಸೇವೆಗೆ ಕಂಕಣಬಧವಾಗಿದೆ. ಶ್ರೀ ಮಠದಲ್ಲಿ ನೂತನ ಮಠಾಧೀಶರಾದ ಶ್ರೀ ಮುರುಘೇಂದ್ರ ಮಹಾಸ್ವಾಮಿಗಳು ಮೇಲಿನ ಬಸವಣ್ಣನವರ ವಚನಕ್ಕೆ ತಕ್ಕಂತೆ ಲಿಂಗದೀಕ್ಷೆ ಧಾರಣೆಯನ್ನು ಲಿಂಗ ಜಂಗಮ ಮೆಚ್ಚುವಂತೆ ಅನುಗ್ರಹಿಸುತ್ತಾರೆ.

ಕಕ್ಕಯ್ಯಾ ಸಮಾಜದ ನಲ್ವತ್ತೈದು ಕುಟುಂಬದ ಜನರಿಗೆ ಮೇಲ್ಪಟ್ಟು ಲಿಂಗದೀಕ್ಷೆಯನ್ನು ಮಾಡಿಸಿದರು. ಸಮಾಜದಲ್ಲಿ ಯಾರು ಮೇಲು – ಕೀಳೆಂಬ ಭಾವನೆ ಸಲ್ಲ. ಎಲ್ಲರೂ ಒಂದೆ ಎಂದು ತಿಳಿಸಿದರು. ಲಿಂಗದೀಕ್ಷೆಯು ನಡೆ – ನುಡಿಗಳಲ್ಲಿ ಸತ್ಯವಾಗಿರಬೇಕು ಬಡವನೆ ಇರಲಿ, ಶ್ರೀಮಂತನೆ ಇರಲಿ, ಎಲ್ಲರೂ ಸತ್ಯಕ್ಕೆ ಜಯಕಾರ ಹಾಕಬೇಕು. ಸುಳ್ಳು ನುಡಿಯಬಾರದು, ಪುಟ್ಟ ಗ್ರಾಮದ ಕೀರ್ತಿಯನ್ನು ಬಾನೆತ್ತರಕ್ಕೆ ಹರಡಲು

ಶ್ರೀಗಳ ಕಾರಣರಾಗಿದ್ದಾರೆ. ಹೆಣ್ಣು ಗಂಡುಗಳೆಂಬ ಭೇದವನೆಣಿಸದೆ ಚಿಕ್ಕಮಕ್ಕಳಿಗೆ ಪ್ರೀತಿಯಿಂದ ಕಾಣುತ್ತಾರೆ. ಶ್ರೀಮಠದಲ್ಲಿ ಸದಾ ಹತ್ತಾರು ಭಕ್ತರ ಬಳಗವೇ ತುಂಬಿರುತ್ತದೆ.

ತಿಂಗಳಿಗೊಂದಾರೂ, ಸಾಂಸ್ಕೃತಿಕ ಕಾರ್ಯಕ್ರಮವನ್ನು ಮಾಡಿ ಧರ್ಮದ ಬೀಜವನ್ನು ಬಿತ್ತುತ್ತಾರೆ. ಸಮಾಜದ ಹಿತಕ್ಕಾಗಿ ಹಗಲಿರಳು ಶ್ರಮಿಸುತ್ತಾರೆ. ಶ್ರೀಮಠದಲ್ಲಿ ಅನ್ನ ದಾಸೋಹ ಪ್ರಸಾದದ ವ್ಯವಸ್ಥೆ ಮಾಡಿಸಿದ್ದಾರೆ. ಸುಮಾರು ಸಾವಿರಾರು ಜನರಿಗೆ ಲಿಂಗದೀಕ್ಷೆಯನ್ನು ಕೊಟ್ಟು ಅವರಲ್ಲಿ ಅರಿವಿನ ಬೀಜವನ್ನು ಬಿತ್ತುತ್ತಿದ್ದಾರೆ. ಬಸವ ಧರ್ಮದ ಪ್ರವಚನವನ್ನು ಮಾಡಿ ಧರ್ಮದ ಜಾಗೃತಿಯನ್ನು ಮಾಡುತ್ತಿದ್ದಾರೆ. ಶ್ರೀ ಮುರುಘೇಂದ್ರ ಸ್ವಾಮಿಗಳ ಪವಿತ್ರ ಸ್ಪರ್ಶದಿಂದ ಖಜೂರಿ ಗ್ರಾಮ ಪರಿಸರದ ಜನ ಪಾವನರಾಗಿದ್ದಾರೆ. ಅಲ್ಲದೆ ಈ ಶ್ರೀಗಳು ಸಮಾಜದೊಡನೆ ಆತ್ಮಿಯ ಭಾವನೆಯಿಂದ ಕಾಣುತ್ತಿದ್ದಾರೆ. ಭಕ್ತರು ಶ್ರೀಗಳೊಂದಿಗೆ ಸಂಬಂಧವನ್ನು ಇಟ್ಟುಕೊಂಡಿದ್ದಾರೆ. ಯಾವುದೆ ಕಾರ್ಯಕ್ರಮ ಮಾಡಬೇಕಾದರೆ ಜನರೆ ಮುಖ್ಯವೆಂದು ತಿಳಿಸಿ ಸಂಘಟನೆಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಡುತ್ತಾರೆ.

೨. ೬. ಮಾದನ ಹಿಪ್ಪರಗಿ ವಿರಕ್ತ ಮಠ

ಆಳಂದ ತಾಲೂಕಿನಲ್ಲಿ ಬರುವ ಮಾದನ ಹಿಪ್ಪರಗಿ ಗ್ರಾಮದ ವಿರಕ್ತ ಮಠ ಸುಮಾರು ಮೂರುನೂರು ವರ್ಷಗಳ ಪ್ರಾಚೀನತೆಯನ್ನು ಹೊಂದಿದೆ. ಶ್ರೀಮಠದ ಅವರಣದಲ್ಲಿಯೇ ಒಂದು ಸಂಗಮೇಶ್ವರ ದೇವಾಲಯ ಕಟ್ಟಿಸಿದ್ದಾರೆ. ಅದು ಬಹಳ ಭವ್ಯ ಪ್ರಮಾಣದಲ್ಲಿ ಇದೆ. ದೇವಾಲಯಕ್ಕೆ ಬಂದ ಜನರು ಶ್ರೀಗಳ ಆಶೀರ್ವಾದ ಪಡೆದುಕೊಂಡು ಹೋಗುತ್ತಾರೆ. ಶ್ರೀಮಠಕ್ಕೆ "ಶಿವಲಿಂಗೇಶ್ವರ ಮಠ" ವೆಂದು ಜನರು ಕರೆಯುತ್ತಾರೆ. ಈ ಮಠದ ಮೂರನೆ ಅಧಿಪತಿಯಾದ ಶಿವಲಿಂಗೇಶ್ವರ ಮಹಾಸ್ವಾಮಿಗಳು ತಪಸ್ಸು ಅನುಷ್ಠಾನಗಳಲ್ಲಿ ನಿಷ್ಠರಾಗಿದ್ದರು. ಬೆಡಿದವರಿಗೆ ಬೆಡಿದ ವರವನ್ನು ಕೊಟ್ಟು ಸಮಾಧಾನದಿಂದಿರಲು ತಿಳಿಸಿದರು. ತಪಸ್ಸಿನ ಬಲದಿಂದ ಏನು ಬೇಕಾದುದನ್ನು ಮಾಡಲು ಸಿದ್ದರಿದ್ದರು. ಆದ್ದರಿಂದ ಈ ಭಾಗದಲ್ಲಿ ಅವರ ಹೆಸರಿಗೆ ಮಠವು ಹೆಮ್ಮರವಾಗಿ ಬೆಳೆದು ನಿಂತಿದೆ. ಈ ಮಠದ ವಂಶಾವಳಿ ಇಂತಿದೆ.

೧. ಶ್ರೀ ಮ.ನಿ.ಪ್ರ. ಸಿದ್ದಲಿಂಗ ಸ್ವಾಮಿಗಳು.

೨. ಶ್ರೀ ಮ.ನಿ.ಪ್ರ. ಬಸವಲಿಂಗಯ್ಯಾ ಸಾಮಿಗಳು.

೩. ಶ್ರೀ ಮ.ನಿ.ಪ್ರ. ಶಿವಲಿಂಗೇಶ್ವರ ಸ್ವಾಮಿಗಳು.

೪. ಶ್ರೀ ಮ.ನಿ.ಪ್ರ. ಎರಡನೇ ಶಿವಲಿಂಗೇಶ್ವರ ಮಹಾಸ್ವಾಮಿಗಳು (ಸದ್ಯದ ಶ್ರೀಗಳು)

### ೨. ೭. ಚಿಣಮಗೇರಿ ಹಿರೇಮಠ

ಅಫಜಲಪೂರ ತಾಲೂಕಿನಲ್ಲಿ ಬರುವ ಚಿಣಮಗೇರಿ ಗ್ರಾಮದ ಹಿರೇಮಠವು ಅತ್ಯಂತ ಪ್ರಾಚೀನ ಮಠವಾಗಿದೆ. ಎಂಟುನೂರು ವರ್ಷಗಳ ಇತಿಹಾಸವನ್ನು ಹೊಂದಿದೆ. ಈ ಗ್ರಾಮಕ್ಕೆ ''ಚಿನ್ಮಯಗಿರಿ'' ಎಂದು ಜನ ಕರೆಯುವ ವಾಡಿಕೆ ಇದೆ. ಬಿಜಾಪೂರ ಜಿಲ್ಲೆಯ ಮಲ್‌ಘಾಣದಿಂದ ಪ್ರಯಾಣ ಹೊರಟ ಜಡೆಯ ಶಾಂತೇಶ್ವರ ಮಹಾಂತಸ್ವಾಮಿಗಳು ಬಂದು, ಈ ಗ್ರಾಮದಲ್ಲಿ ಮಠವನ್ನು ಸ್ಥಾಪನೆ ಮಾಡಿದರೆಂಬ ಪ್ರತೀತಿ. ಆದ್ದರಿಂದ ಈ ಮಠಕ್ಕೆ ''ಶ್ರೀ ಮಹಾಂತೇಶ್ವರ ಮಠ'' ವೆಂದು ಕರೆಯುತ್ತಾರೆ. ಚಿಣಮಗೇರಿ ಮತ್ತು ಚವಡಾಪೂರಿ ಗ್ರಾಮಗಳ ಮಧ್ಯ ಒಂದು ಗುಡ್ಡದ ಮೇಲೆ ಮಠ ಕಂಗೊಳಿಸುತ್ತದೆ. ದೂರದಿಂದಲೇ ಈ ಮಠವು ಭಕ್ತರನ್ನು ಸ್ವಾಗತಿಸುತ್ತಿದೆ. ಆದ್ದರಿಂದ ಕೆಲವು ಜನರು '' ಗುಡ್ಡದ ಮಹಾತಪಸ್ವಿ ಮಠ '' ವೆಂದು ಕರೆಯುವ ವಾಡಿಕೆ ಇದೆ.

ಇಂದಿನ ಪೀಠಾಧಿಪತಿಯಾದ ಪೂಜ್ಯ ಶ್ರೀ ಷ.ಬ್ರ..ಸಿದ್ದರಾಮ ಶಿವಾಚಾರ್ಯರು ಕಾಯಕ ಯೋಗಿಯಾಗಿದ್ದಾರೆ. ಕಾಯಕಕ್ಕೆ ಹೆಚ್ಚಿನ ಮಹತ್ವ ಕೊಟ್ಟವರು.

'' ಕಾಯಕದಲ್ಲಿ ನಿರತನಾದಡೆ, ಗುರುದರ್ಶನವಾದರೂ ಮರೆಯಬೇಕು
ಲಿಂಗ ಪೂಜೆಯಾದರೂ ಮರೆಯ ಬೇಕು ಕಾಯಕವೆ ಕೈಲಾಸವಾದ ಕಾರಣ
ಅಮಳೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು''[೮]

ಕಾಯಕವನ್ನು ಬಹುಗೌರವದಿಂದ ಭಯಭಕ್ತಿಯಿಂದ ಮಾಡಬೇಕಾಗುತ್ತದೆ. ಅದು ಗುರು – ಲಿಂಗ ಜಂಗಮರಿಗಿಂತ ಶ್ರೇಷ್ಠವಾದುದು. ಕಾಯಕದಲ್ಲಿ ನಿಷ್ಠೆ [illegible]ಬೇಕು. ಎಂದು ಶರಣರು ಹೇಳಿದಂತೆ ಇಲ್ಲಿ ''ಅಮಳೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು'' ಎಂಬ ಮಾತನ್ನು ಸಾಕ್ಷಾತ ಶಿವನಾದರೂ,ಕಾಯಕ ಮಾಡಬೇಕು. ಕಾಯಕದಿಂದಲೇ ಜೀವನ ಮುಕ್ತಿ ದೊರೆಯುತ್ತದೆ ಎಂಬ ವಿದ್ವತ ಧ್ಯೆಯೋದ್ಧೇಶವನ್ನಿಟ್ಟುಕೊಂಡ ಶ್ರೀ ಸಿದ್ದರಾಮ ಶಿವಾಚಾರ್ಯರು ಕಾಯಕಕ್ಕೆ ಹೆಚ್ಚಿನ ಗೌರವ ನೀಡುತ್ತಿದ್ದಾರೆ.

ಶ್ರೀ ಮಠವು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಹೆಸರು ವಾಸಿಯಾಗಿದೆ. ಮಠಕ್ಕೆ ಬಂದ ಭಕ್ತರಿಗೆ ಪ್ರಸಾದ ನಿಲಯವನ್ನು ತೆರೆದಿದ್ದಾರೆ. ಶಿವಾನುಭವಗಳಂತೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಮಾಡಿ ಹಿರಿಯ ಸಾಹಿತಿಗಳಿಗೆ, ಕವಿಗಳಿಗೆ, ಕಲಾವಿದರಿಗೆ ಕರೆ[illegible]ಸುತ್ತಾರೆ. ನೂತನ ಶ್ರೀಗಳು ಸರಳ ಸಜ್ಜನಿಕೆಯ ಮೂರ್ತಿಗಳಾಗಿದ್ದಾರೆ. ಶ್ರೀ ಮಠದ ಪ್ರಗತಿಗಾಗಿ ಹಗಲಿರುಳೆನ್ನದೆ

ಅಲೆದಾಡುತ್ತಾರೆ. ಹಳ್ಳಿ ಪಟ್ಟಣಗಳಿಗೆ ಸಂಚರಿಸಿ ಪಾಠ – ಪ್ರವಚನಗಳ ಮುಖಾಂತರ ಬಸವ ಧರ್ಮ ತತ್ವ ಭೋಧನೆ ಮಾಡುತ್ತಾರೆ. ಸಮಾಜದಲ್ಲಿ ತುಂಬಿರುವ ಮೂಢ ನಂಬಿಕೆ ಕಂದಾಚಾರ ಜಾತಿಯತೆಯನ್ನು ಹೋಗಲಾಡಿಸಲು ಶ್ರಮಿಸುತ್ತಾರೆ. ದೀಕ್ಷೆಯನ್ನು ಕೊಟ್ಟು ಅಂಗದ ಮೇಲೆ ಲಿಂಗಧರಿಸುವರು ಸರಿಸಮಾನರು ಎಂದು ತಿಳಿಸಿ, ಜನರಲ್ಲಿ ಪ್ರಜ್ಞೆ.ಯನ್ನು ಬೆಳೆಸುವಂತೆ ಮುಂದೆ ಒಳ್ಳೆಯ ಮಾರ್ಗದತ್ತ ನಡೆಯಲು ಮಾರ್ಗದರ್ಶನ ನೀಡುತ್ತಿದ್ದಾರೆ. ಶ್ರೀ ಮಹಾಂತೇಶ್ವರ ಮಠದ ವಂಶಾವಳಿ ಕೆಳಗಿನಂತಿವೆ.

೧. ಶ್ರೀ ಮಹಾಂತೇಶ್ವರ ಮಹಾಸ್ವಾಮಿಗಳು – ಮಠದ ಮೂಲ ಸಂಸ್ಥಾಪಕರು.
೨. ಶ್ರೀ ರುದ್ರಮುನಿ ಸ್ವಾಮಿಗಳು.
೩. ಶ್ರೀ ಚಿಕ್ಕರೇವಣ ಸ್ವಾಮಿಗಳು.
೪. ಶ್ರೀ ಗುರು ನಂಜ ಸ್ವಾಮಿಗಳು.
೫. ಶ್ರೀ ರಾಜೋಟಿ ಸ್ವಾಮಿಗಳು.
೬. ಶ್ರೀ ನಿಡುಮಾಮಿಡಿಯ ಕರಿಬಸವ ಸ್ವಾಮಿಗಳು.
೭. ಶ್ರೀ ಮಲ್‌ಭಾಣದ ಜಡೆಯ ಶಾಂತ್ ಲಿಂಗ ಸ್ವಾಮಿಗಳು.
೮. ಶ್ರೀ ಮಹಾಂತ ಸ್ವಾಮಿಗಳು.
೯. ಶ್ರೀ ಮಡಿವಾಳ ಸ್ವಾಮಿಗಳು.
೧೦. ಶ್ರೀ ರಾಜೋಟಿ ಸ್ವಾಮಿಗಳು.
೧೧. ಶ್ರೀ ಎರಡನೇ ಮಹಾಂತ ಸ್ವಾಮಿಗಳು.
೧೨. ಶ್ರೀ ಮೂರನೇ ಮಹಾಂತ ಸ್ವಾಮಿಗಳು.
೧೩. ಶ್ರೀ ಮರಿ ಸ್ವಾಮಿಗಳು.
೧೪. ಶ್ರೀ ಗುರುಬಸವ ಸ್ವಾಮಿಗಳು.
೧೫. ಶ್ರೀ ಕಡಕೊಳ ಸ್ವಾಮಿಗಳು.
೧೬. ಶ್ರೀ ಮರಿ ಬದ್ರಯ್ಯ.
೧೭. ಶ್ರೀ ಅಸಂಗಿಹಾಳ ಮಡಿವಾಳಪ್ಪನವರು.
೧೮. ಶ್ರೀ ಹಿರೆ ಮುತ್ಯಾ ಸ್ವಾಮಿ.
೧೯. ಶ್ರಿ ಚೇಳೂರ ಮುತ್ಯಾ ಸ್ವಾಮಿಗಳು.
೨೦. ಶ್ರೀ ಶಿವರುದ್ರ ಸ್ವಾಮಿಗಳು.
೨೧. ಶ್ರೀ ಷ.ಬ್ರ. ಸಿದ್ಧರಾಮ ಶಿವಾಚಾರ್ಯರು – (ಸದ್ಯದ ಪೀಠಾಧಿಪತಿಗಳು)

– ಹೀಗೆ ಗುಡ್ಡದ ಮಹಾತಪಸ್ವಿ ಶ್ರೀ ಮಹಾಂತೇಶ್ವರ ಮಠದ ಪರಂಪರೆಯನ್ನು ಕಂಡುಕೊಳ್ಳಲಾಗಿದೆ.

## ೨.೮. ಸೊನ್ನದ ವಿರಕ್ತಮಠ

ಹದಿನಾರನೇ ಶತಮಾನದಲ್ಲಿ ಸ್ಥಾಪನೆಗೊಂಡ ಜೇವರಗಿ ತಾಲೂಕಿನ ವಿರಕ್ತ ಮಠವು ಒಂದು. ಇದು ಶ್ರೀ ಸಿದ್ದಲಿಂಗ ಮಹಾಸ್ವಾಮಿಗಳವರ ಅಮೃತ ಹಸ್ತದಿಂದ ಸ್ಥಾಪನೆಗೊಂಡಿತ್ತು. ಶ್ರೀ ಮಠಕ್ಕೆ ಸೊನ್ನದ ಸಿದ್ದಲಿಂಗೇಶ್ವರ ಮಠವೆಂದೇ ಪ್ರಖ್ಯಾತಿ ಪಡೆದಿದೆ. ಧಾರ್ಮಿಕ, ಸಾಮಾಜಿಕ, ಕಾರ್ಯಗಳನ್ನು ನಡೆಸುವ ಸದಾ ಶ್ರೀಮಠದ ಮುಖ್ಯ ಉದ್ದೇಶವಾಗಿವೆ. ಮಠದ ನೂತನ ಶ್ರೀಗಳು ಮಠದ ಕೀರ್ತಿಯನ್ನು ಪಸರಿಸುತ್ತಿದ್ದಾರೆ. ಯಾವುದೇ ರೀತಿಯ ಜಾತಿ – ಪಂಥಗಳನ್ನೆಣಿಸದೆ ಎಲ್ಲರೂ ಒಂದೆ ಎಂಬ ಭಾವನೆ ಶ್ರೀಗಳವರದಾಗಿದೆ. ಮಠದಲ್ಲಿ ಸತತವಾಗಿ ಅನ್ನದಾಸೋಹ ನಡೆಸಿಕೊಂಡು ಬರುತ್ತಿದ್ದಾರೆ. ಮುಸಬಿನಾಳ ಗ್ರಾಮದಲ್ಲಿ ಪ್ರಾಥ ಮಿಕ ಶಾಲೆಯನ್ನು ತೆರೆದು ಶೈಕ್ಷಣಿಕ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಅಲ್ಲದೆ ಬಡ ವಿದ್ಯಾರ್ಥಿಗಳಿಗಾಗಿ ಉಚಿತ ಬೋರ್ಡಿಂಗ ತೆರೆದು ಸಹಕಾರಿಯಾಗಿದ್ದಾರೆ.

### ವಂಶಾವಳಿ

೧. ಶ್ರಿ ಮ.ನಿ. ಪ್ರ. ಸಿದ್ದಲಿಂಗ ಸ್ವಾಮಿಗಳು.
೨. ಶ್ರಿ ಮ.ನಿ. ಪ್ರ. ಚೆನ್ನವೀರ ಸ್ವಾಮಿಗಳು.
೩. ಶ್ರಿ ಮ.ನಿ. ಪ್ರ. ಸಿದ್ದಯ್ಯಾ ಸ್ವಾಮಿಗಳು.
೪. ಶ್ರಿ ಮ.ನಿ. ಪ್ರ. ಚೆನ್ನಬಸವ ಸ್ವಾಮಿಗಳು.
೫. ಶ್ರಿ ಮ.ನಿ. ಪ್ರ. ಕೊಟ್ರಪ್ಪ ಸ್ವಾಮಿಗಳು.
೬. ಶ್ರಿ ಮ.ನಿ. ಪ್ರ. ಮರಿದೇವರು ಸ್ವಾಮಿಗಳು.
೭. ಶ್ರಿ ಮ.ನಿ. ಪ್ರ. ಶಿವಾನಂದ ಸ್ವಾಮಿಗಳು.
೮. ಶ್ರಿ ಮ.ನಿ. ಪ್ರ.. ಗುರುಸಿದ್ದ ಸ್ವಾಮಿಗಳು. (ನೂತನ ಶ್ರೀಗಳು)

ಶ್ರೀ ಮಠದ ಮೂಲ ಸಂಸ್ಥಾಪಕರಾದ ಪೂಜ್ಯ ಶ್ರೀ ಸಿದ್ದಲಿಂಗ ಸ್ವಾಮಿಗಳು ಪವಾಡ ಪುರುಷರು. ಬೇಡಿದವರಿಗೆ ಬೇಡಿದ ವರ ಕೊಟ್ಟು ಧನ್ಯರಾದವರು. ಸದಾ ಸಮಾಜದ ಜನರೊಡನೆ ಹೊಂದಾಣಿಕೆಯಿಂದ

ಇರುತ್ತಿದ್ದರು. ವಿಶ್ವಗುರು ಬಸವಣ್ಣನವರ ನಡೆ – ನುಡಿಗಳನ್ನು ಚಾಚು ತಪ್ಪದೆ ನಡೆದುಕೊಂಡು ಬರುತ್ತಿದ್ದರು. ಧರ್ಮದ ಪ್ರಚಾರಕ್ಕೆ ಹಗಲಿರಳು ಶ್ರಮಿಸುತ್ತಿದ್ದರು. ನೂತನ ಶ್ರೀಗಳಾದ ಶ್ರೀ ಗುರುಸಿದ್ಧ ಸ್ವಾಮಿಗಳು ಸಹ ಶರಣ ನಡೆ – ನುಡಿ – ತತ್ವಗಳನ್ನೆ ಪಾಲಿಸಿಕೊಂಡು ಬರುತ್ತಿದ್ದಾರೆ. ಸಮಾಜದಲ್ಲಿ ಆಗುತ್ತಿರುವ ಅನ್ಯಾಯದ ವಿರುದ್ಧ ಸದಾ ಹೋರಾಡುತ್ತಿದ್ದಾರೆ. ಹಳ್ಳಿ – ಪಟ್ಟಣಗಳಿಗೆ ಸಂಚರಿಸಿ ಬಸವ ಧರ್ಮವನ್ನು ಪ್ರಚಾರ ಮಾಡುತ್ತಿದ್ದಾರೆ. ಪಾಠ – ಪ್ರವಚನಗಳ ಮುಖಾಂತರ ಜನರ ಮನಸ್ಸನ್ನು ಸೂರೆಗೊಂಡಿದ್ದಾರೆ. ಸಮಾಜದಲ್ಲಿ ತುಂಬಿರುವ ಕಂದಾಚಾರ ಮೂಢ ನಂಬಿಕೆಯ ಬೀಜವನ್ನು ಬೇರು ಸಹಿತ ಕಿತ್ತೊಗೆಯಲು ಹಗಲಿರಳು ಶ್ರಮಿಸುತ್ತಿದ್ದಾರೆ. ಮಠಕ್ಕೆ ಬಂದ ಅತಿಥಿಗಳಿಗೆ ವಿನಮ್ರತೆಯಿಂದ ಸ್ವಾಗತಿಸುವ ಪ್ರವೃತ್ತಿಯುಳ್ಳವರಾಗಿದ್ದಾರೆ.

### ೨.೯. ಸುರಪುರ ವಿರಕ್ತಮಠ

ಸುರಪುರ ನಗರದಲ್ಲಿ ಇರುವ ವಿರಕ್ತ ಮಠವು ಒಂದು. ಈ ಮಠವು ನಿಷ್ಠೆ ಕಡ್ಲಪ್ಪ ನವರು ಕಟ್ಟಿಕೊಟ್ಟರೆಂದು ತಿಳಿದು ಬಂದಿದೆ. ಆದ್ದರಿಂದಲೇ ಶ್ರೀ ಮಠಕ್ಕೆ ''ನಿಷ್ಠೆ ಕಡ್ಲಪ್ಪನ ಮಠ'' – ವೆಂದು ಕರೆಯುತ್ತಾರೆ. ಸುರುಪುರ ದೊರೆಗಳಲ್ಲಿ ನಿಷ್ಠೆ ಕಡ್ಲಪ್ಪನವರು ಮಂತ್ರಿಗಳಾಗಿದ್ದರು. ನಿಷ್ಠೆ ಕಡ್ಲಪ್ಪನವರು ವೀರಶೈವ ಧರ್ಮ ಸಂಸ್ಕೃತಿಯ ಪ್ರಚಾರಕ್ಕಾಗಿ ಹಗಲಿರಳು ಶ್ರಮಿಸಿದ್ದಾರೆಂದು ತಿಳಿದು ಬಂದಿದೆ. ಅವರ ಕಾಲದಲ್ಲಿ ೧೦೮ ವಿರಕ್ತ ಮಠಗಳನ್ನು ಸ್ಥಾಪಿಸಿದರೆಂದು ಹೇಳಲಾಗುತ್ತದೆ. ಅವುಗಳಲ್ಲಿ ಸುರುಪುರ ವಿರಕ್ತ ಮಠವು ಒಂದು. ಇವರು ಮಠಗಳನ್ನು ಭಕ್ತಿಪೂರ್ವಕವಾಗಿ ಕಟ್ಟಿಕೊಟ್ಟರಂತೆ. ''ಇಂದಿಂಗೆಂದು ನಾಳಿಂಗೆಂದು ಚಿಂತಿಸಲೆಕೋ? ತಂದಿಕ್ಕುವ ಶಿವಂಗೆ ಬಡತನವೆ ರಾಮನಾಥ'' ಎನ್ನುವ ಜೇಡರ ದಾಸಿಮಯ್ಯನವರ ವಚನದಂತೆ, ಭಕ್ತಿ ಸ್ಥೈರ್ಯ, ಜ್ಞಾನಗಳು ಆತನಲ್ಲಿದ್ದವು. ಒಂದಿಷ್ಟು ಆಸೆಗಳಿದ್ದಿರಲಿಲ್ಲ ಎಂಬುದಕ್ಕೆ ಸಾಕ್ಷಿಯಾಗಿವೆ.

ನಿಷ್ಠೆ ಕಡ್ಲಪ್ಪನವರು ಮಠವನ್ನು ಕಟ್ಟಿಸಿಕೊಟ್ಟರು. ಆದರೆ ಮಠಕ್ಕೆ ಮಠಾಧೀಶರಾಗಿ ಸೇವೆ ಸಲ್ಲಿಸಿಲ್ಲ. ನಿಸ್ವಾರ್ಥತೆಯಿಂದ ಭಕ್ತಿಯಿಂದ ತನು – ಮನ – ಧನಗಳ ಸಾಹಾಯದಿಂದ ಸೇವೆಯನ್ನು ಮನಪೂರ್ವಕವಾಗಿ ಸಲ್ಲಿಸಿದ್ದಾರೆ. ಆದ್ದರಿಂದ ಅಂದಿನಿಂದ ಇಂದಿನ ವರೆಗೆ ಶ್ರೀಮಠವು ಬೆಳೆದು ನಿಂತಿದೆ.

**ವಂಶಾವಳಿ**

೧. ಶ್ರೀ ಮ.ನಿ. ಪ್ರ. ನಿಷ್ಠೆ ಕಡ್ಲಪ್ಪನವರು – ಮಠದ ಸಂಸ್ಥಾಪಕರು.

೨. ಶ್ರೀ ಮ.ನಿ. ಪ್ರ. ಪ್ರಭು ದೇವರು – ಮೂಲ ಶ್ರೀಗಳು

೩. ಶ್ರೀ ಮ.ನಿ. ಪ್ರ. ರುದ್ರಮುನಿ ಶಿವಾಚಾರ್ಯರು.

೪. ಶ್ರೀ ಮ.ನಿ. ಪ್ರ. ಗುರುಶಾಂತ ಶಿವಾಚಾರ್ಯರು.

೫. ಶ್ರೀ ಮ.ನಿ. ಪ್ರ. ಸಿದ್ಧಲಿಂಗ ಶಿವಾಚಾರ್ಯರು.

೬. ಶ್ರೀ ಮ.ನಿ. ಪ್ರ. ಮಲ್ಲಿಕಾರ್ಜುನ್ ಸ್ವಾಮಿಗಳು.

೭. ಶ್ರೀ ಮ.ನಿ. ಪ್ರ. ಪ್ರಭುದೇವರು (ನೂತನ ಶ್ರೀಗಳು)

ಶ್ರೀ ಮಠವು ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಹೆಸರು ವಾಸಿಯಾಗಿದೆ. ನೂತನ ಶ್ರೀಗಳಾದ ಮ. ನಿ. ಪ್ರ. ಪ್ರಭುದೇವರು ಮಠದಲ್ಲಿ ಪ್ರಸಾದ ನಿಲಯವನ್ನು ಪ್ರಾರಂಭಿಸಿದ್ದಾರೆ. ಮಠದ ವತಿಯಿಂದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಾರೆ. ಭಕ್ತ ರೊಡನೆ ಆತ್ಮೀಯತೆಯಿಂದ ನೋಡಿಕೊಂಡು ಹೋಗುತ್ತಾರೆ. ಈ ಮಠವು ನಿಷ್ಠೆ ಕಡ್ಲಪ್ಪನವರ ಹೆಸರಿನ ಮೇಲೆ ಬೆಳೆಯುತ್ತಿದೆ ಎಂದರೆ ತಪ್ಪಾಗಲಾರದು.

## ೨.೧೧. ಕಡಕೋಳದ ಮಡಿವಾಳ ಮಠ

ಜೇವರಗಿ ತಾಲೂಕಿನಲ್ಲಿ ಬರುವ ಕಡಕೊಳ ಗ್ರಾಮದಲ್ಲಿ ವಿರಕ್ತ ಮಠವು ಹದಿನೇಳನೆ ಶತಮಾನದಲ್ಲಿ ಸ್ಥಾಪನೆಯಾಯಿತ್ತೆಂದು ತಿಳಿದು ಬರುತ್ತದೆ. ಈ ಗ್ರಾಮವು ಬಹಳ ಪುಟ್ಟವಾಗಿದೆ. ಆದರೆ ಮಠದ ಹೆಸರಿನಿಂದ ಗ್ರಾಮದ ಹೆಸರು ನಾನಾ ಕಡೆ ಹರಡಿದೆ. ಶ್ರೀ ಗಳು ಮಡಿವಾಳ ಕುಲದಲ್ಲಿ ಹುಟ್ಟಿದ್ದರಿಂದ ಕೆಲವರು ದೂರದಿಂದ ಕಾಣುತ್ತಿದ್ದರೆಂದು, ತಿಳಿದು ಬಂದಿದೆ. ಮಡಿವಾಳರು ಮಹಾನ ಘನ ಜ್ಞಾನವುಳ್ಳವರು. ಸ್ವತಃ ಕವಿಗಳಾಗಿ ವಚನಕಾರರಾಗಿದ್ದವರು. ಅನೇಕ ತತ್ವಪದಗಳನ್ನು ರಚನೆ ಮಾಡಿದ್ದಾರೆ. ಶಿಶುನಾಳ ಶರೀಫನ ಪದಗಳು ಧಾರವಾಡದ ಕಡೆಗೆ ಜನಪ್ರಿಯ ಪಡೆದಂತೆ ಈ ಭಾಗದಲ್ಲಿ ಈತನ ಹಾಡುಗಳು ಜನಪ್ರಿಯ ಪಡೆದುಕೊಂಡಿವೆ. ಇವರು ಸುಮಾರು ೫೦೦ ಕ್ಕೂ ಹೆಚ್ಚು ತತ್ವ ಪದಗಳನ್ನು ರಚನೆ ಮಾಡಿದ್ದಾರೆಂದು ತಿಳಿದುಬರುತ್ತದೆ. "ನಿ ಜ ಲೀಲಾನುಭವ" ಅಂಕಿತವನ್ನು ಹೊಂದಿ . ಇವರ ಅನೇಕ ವಚನಗಳು ಪ್ರಕಟಗೊಂಡಿವೆ. ಶ್ರೀಗಳ ತತ್ವಪದಗಳಲ್ಲಿ ಸಮಾಜದ ವಿಡಂಬನೆ, ತತ್ವ ಸಿದ್ಧಾಂತಗಳು ಹೆಚ್ಚಾಗಿ ಕಂಡುಬರುತ್ತವೆ. ಅವರ ತತ್ವಪದಗಳಲ್ಲಿ ಒಂದೆರಡನ್ನು ಈ ಕೆಳಗಿನಂತೆ ನೋಡಬಹುದು.

ಉದಾ : ೧. "ನಾ ಬರಬಾರದಿತ್ತು ಈ ಊರಿಗೆ
ಬಂದು ಬಿದ್ದೆನು ಮಾಯಾದ ಬಲಿಯೊಳಗೆ
ಹೇಸಿಗೆ ಮಲ ಮೂತ್ರದೊಳಗ
ಒಂಬತ್ತು ಬಾಗಿಲು ಊರೊಳಗ
ನಾ ಹೇಗೆ ದಾಟಲಿ ಇದರೊಳಗ
ಎಂಟುಮಂದಿ ಕಳ್ಳರ ಭಯ ಆದೆನಗ"

೨. "ಮುಡಚಟ್ಟಿನೋಳು ಬಂದು ಮುಟ್ಟೀ ತಟ್ಟೀ ಅಂತೀರಿ
ಮುಡಚಟ್ಟು ಎಲ್ಲ್ಯಾದ್ದೇಳಣ್ಣಾ
ಮುಟ್ಟಾದ ಮೂರು ದಿನಕ ಹುಟ್ಟಬಂದಿರಿ ನೀವು
ಮುಡಚಟ್ಟು ಎಲ್ಲ್ಯಾದ್ದೇಳಣ್ಣಾ
ತೊಗಲೊಳು ತೊಗಲ್ಹೊಕ್ಕು ತಗಲಿ ಬಂದವ ನೀನು
ತಗಲ ಮಾತಾಡುವದೇನಣ್ಣಾ
ಇದರ ಬಗಿಯ ತಿಳಿಯದೆ ಬಗದು ಮಾತಾಡಿದರೆ
ನನಗೇಡಿ ಕಾಣುತಾದಣ್ಣಾ
. . . . . . . . . . . . . . .
ಸೂಸಲಾಡುವ ದೇಹ ಸೋಸಿ ನೀರವ ಮಾಡಿ
ಮಡಿ ಮಾಡಿಕೊಳ್ಳಬೇಡಣ್ಣಾ "[೯]

ಈ ತತ್ವಪದವು ಮಾನವಿಗೆ ಒಂದು ದೊಡ್ಡ ಮಾರ್ಗದರ್ಶಿಯಾಗಿದೆ. ಕುಲ, ಜಾತಿ, ಭೇದ, ಮಡಿ, ಮೈಲಿಗೆ ಮಾಡುವುದು ಮೂರ್ಖತನವೆಂಬುದು ಈ ತತ್ವಪದದ ತುಂಬೆಲ್ಲಾ ವ್ಯಾಪಿಸಿರುತ್ತದೆ. ವೈಚಾರಿಕತೆ, ವೈಜ್ಞಾನಿಕ, ಮನೋಭಾವ, ಸಮತ್ವಭಾವ, ವ್ಯಕ್ತಿಗೊಂಡುದನ್ನು ನಾವು ಇಲ್ಲಿ ಕಾಣುತ್ತೇವೆ. ಇಂಥ ಇನ್ನು ನೂರಾರು ತತ್ವಪದಗಳು ಲಭಿಸುತ್ತವೆ.

ಸಮಾಜದಲ್ಲಿ ಎಲ್ಲ ಮಾನವರು ಸಮಾನರು, ಎಂಬುದು ಎಲ್ಲರಿಗೂ ಎಚ್ಚರಿಕೆ ಕೊಡುತ್ತಾರೆ. ನಂತರ ಮಡಿವಾಳರಿಗೆ ಅಯ್ಯಚಾರ ದೀಕ್ಷೆಯನ್ನು ಮಾಡಿಸಿದರು, ನಂತರ ಮಹಾಂತೇಶ್ವರ ಮಠದ ಗುರುಬಸವದೇವರು ಮಡಿವಾಳವರಿಗೆ ಅನುಗ್ರಹ ದೀಕ್ಷೆಯನ್ನು ಅನುಗ್ರಹಿಸಿ ಅವರನ್ನು ಕಡಕೊಳ ಮಠಕ್ಕೆ ಅಧಿಕಾರಿಯನ್ನಾಗಿ ನೇಮಕ ಮಾಡಿದರು. ಇವರು ಮಹಾಶಿವಯೋಗಿಯಾಗಿ ಕಾಯಕನಿಷ್ಠರಾಗಿ ವಚನ ಕಾರರಾಗಿದ್ದರು ಕನ್ನಡದಲ್ಲಿ ಕೈವಲ್ಯ ಸಾಹಿತ್ಯ ರಚಿಸಿದ ವೀರಶೈವ ಕವಿಗಳಲ್ಲಿ ಒಬ್ಬರಾಗಿದ್ದಾರೆ. ನಿಜಗು ೲ

ಕೈವಲ್ಯ ಪದ್ಧತಿ ಸರ್ಪಭೂಷಣಗಾರ ಕೈವಲ್ಯ ಕಲ್ಪವಲ್ಲರಿ, ಬಾಲಲೀಲಾ ಮಹಾಂತ ಶಿವಯೋಗಿಗಳ ಕೈವಲ್ಯ ದರ್ಪಣ ಇವುಗಳ ವ್ಯಾಖ್ಯಾನ ಬರೆದು ಇನ್ನೂ ಹತ್ತು ಹಲವಾರು ಕೃತಿಗಳನ್ನು ರಚನೆ ಮಾಡಿ ಕನ್ನಡ ಸಾಹಿತ್ಯ ಲೋಕಕ್ಕೆ ಕೊಡುಗೆಯಾಗಿ ನೀಡಿದ್ದಾರೆ.

ವಂಶಾವಳಿ

೧) ಶ್ರೀ ಮ. ನಿ. ಪ್ರ. ಕಡಕೊಳ ಮಡಿವಾಳ ಸ್ವಾಮಿಗಳು

೨) ಶ್ರೀ ಮ. ನಿ. ಪ್ರ. ಸಿದ್ಧಲಿಂಗ ಸ್ವಾಮಿಗಳು

೩) ಶ್ರೀ ಮ. ನಿ. ಪ್ರ. ಮಹಾಂತ ಸ್ವಾಮಿಗಳು

೪) ಶ್ರೀ ಮ. ನಿ. ಪ್ರ. ವೀರೇಶ್ವರ ಸ್ವಾಮಿಗಳು

೫) ಶ್ರೀ ಮ. ನಿ. ಪ್ರ. ದೇಶಿಕ ಮಡಿವಾಳಯ್ಯ ಸ್ವಾಮಿಗಳು

## ೨.೧೧. ಜೇವರಗಿ ವಿರಕ್ತಮಠ

ಜೇವರಗಿ ಗ್ರಾಮದಲ್ಲಿರುವ ವಿರಕ್ತ ಮಠವು ಹದಿನಾರನೆಯ ಶತಮಾನದಲ್ಲಿ ಶ್ರೀ ಅಖಂಡೇಶ್ವರ ಸ್ವಾಮಿಗಳಿಂದ ಸ್ಥಾಪನೆ ಮಾಡಿದ್ದಾರೆಂದು ತಿಳಿದು ಬಂದಿದೆ. ಅಖಂಡೇಶ್ವರ ಅಂಕಿತನಾಮದಿಂದ ವಚನಗಳನ್ನು ರಚಿಸಿದ ಶ್ರೀ ಷಣ್ಮುಖ ಶಿವಯೋಗಿಗಳವರ ಜನ್ಮ ವಿತ್ತ ಭೂಮಿ, ಷಣ್ಮುಖ ಶಿವಯೋಗಿಗಳು ೭೧೭ ಅಖಂಡೇಶ್ವರರ ವಚನಗಳನ್ನು, ಅಖಂಡೇಶ್ವರ ಜೋಗುಳ ಹಾಡನ್ನು, ಅಲ್ಲದೆ ನಿರಾಳ ಸದ್ಗುರು ಸ್ತೊತ್ರ, ಹಾಗೂ ಪಂಚ ಸಂಜ್ಞಾಗಳನ್ನು ರಚಿಸಿ ಕನ್ನಡ ಸಾಹಿತ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಿದ್ದಾರೆ. ಹೈದ್ರಾಬಾದ ಕರ್ನಾಟಕ ಭಾಗದ ಅನುಭಾವಿ ಕವಿಗಳಾಗಿ ಕಂಗೊಳಿಸಿದ್ದಾರೆ. ನಾಡಿನಾದ್ಯಾಂತ ಹೆಸರುವಾಸಿಯಾಗಿದ್ದಾರೆ.

ಶ್ರೀ ವಿರಕ್ತಮಠವು ಷಣ್ಮುಖ ಶಿವಯೋಗಿಗಳ ಮಠವೆಂದೇ ಪ್ರಖ್ಯಾತಿ ಪಡೆದಿದೆ. ಇವರು ತಪೋನಿಷ್ಠರಾಗಿ ಪವಾಡ ಪುರುಷರಾಗಿ, ಕಾಯಕ ಯೋಗಿಯಾಗಿ, ತಮ್ಮ ಜೀವಿತ ಕಾಲದಲ್ಲಿ ಮಠವನ್ನು ಉನ್ನತ ಶಿಖರಕ್ಕೆ ಏರಿಸಿದರು. ಭಕ್ತರನ್ನು ಕಂಡರೆ ಎಲ್ಲಿಲ್ಲದ ಪ್ರೀತಿ ಉತ್ಸಾಹ ಬರುತಿತ್ತು. ಅವರು ತಪಸ್ಸು ಮಾಡಿದ ಕ್ಷೇತ್ರ ''ಜೋಗಿಕೊಳ್ಳ'' ವೆಂದೆ ಪ್ರಖ್ಯಾತಿ ಪಡೆದಿದೆ. ಅಲ್ಲಿ ಅವರ ಗವಿ ಇದೆ. ''ಯೋಗಿ ಮಂಚ'' ಎಂದು ಜನರು ಕರೆಯುತ್ತಾರೆ. ಎಲ್ಲವನ್ನು ಗುರುಗಳಿಗೆ ಅರ್ಪಿತ ಎಂಬ ಭಾವನೆ ಇವರಲ್ಲಿತ್ತು. ಷಣ್ಮುಖ

ಶಿವಯೋಗಿಗಳು ಅನಂತ ಲೀಲೆಗಳೆನ್ನೆಸಗಿ, ೨೩ ವರ್ಷ ಕಾಲ ಬಾಳಿ ಬೆಳಗಿದ ಗುರು ಹಿಡಿದು, ಕುರುಹ ಕಂಡರು. ಕುರುಹ ಹಿಡಿದು ಅರುಹು ಕಂಡರು; ಅರುಹು ಹಿಡಿದು ಅಚಾರ ಕಂಡರು, ಆಚಾರ ವಿಚಾರ ಹಿಡಿದು ನಿಜವ ಕಂಡರು, ನಿಜವ ಹಿಡಿದು ಆಖಂಡೇಶ್ವರ ಲಿಂಗವನೊಡಗೊಡಿದರು. ತಮ್ಮ ನಿಜ ಜೀವನದಲ್ಲಿ ಮಾಡಿದ ಸಾಧನೆಯನ್ನು ಇಂದು ಸಮಾಜಕ್ಕೆ ಕೊಡುಗೆಯಾಗಿ ಲಭಿಸಿದೆ. ಅವರು ವಚನಕಾರರಾಗಿ ನಾಡಿನ ಜನಸೆ, ಮದಲ್ಲಿ ಹೆಸರು ವಾಸಿಯಾಗಿದ್ದರು. ಅಂತಹ ಮಹಾ ತಪಸ್ವಿಗಳವರು ನೆಲೆಸಿದ, ತಂಗಿದ ಮಠದ ಹಿನ್ನಲೆಯನ್ನು ನೋಡುವುದು ಅವಶ್ಯಕವಾಗಿದೆ.

ವಂಶಾವಳಿ

೧) ಶ್ರೀ ಮ. ನಿ. ಪ್ರ. ಅಖಂಡೇಶ್ವರರು ಮೂಲ ಸಂಸ್ಥಾಪಕರು

೨) ಶ್ರೀ ಮ. ನಿ. ಪ್ರ. ಷಣ್ಮುಖ ಶಿವಯೋಗಿಗಳು

೩) ಶ್ರೀ ಮ. ನಿ. ಪ್ರ. ಮರಿ ಷಣ್ಮುಖ ಸ್ವಾಮಿಗಳು

೪) ಶ್ರೀ ಮ. ನಿ. ಪ್ರ. ಸಿದ್ಧರಾಮ ಅಯ್ಯಾಪಾ ಸ್ವಾಮಿಗಳು

೫) ಶ್ರೀ ಮ. ನಿ. ಪ್ರ. ರುದ್ರಮುನಿ ಸ್ವಾಮಿಗಳು

೬) ಶ್ರೀ ಮ. ನಿ. ಪ್ರ. ಎರಡನೇ ಷಣ್ಮುಖ ಸ್ವಾಮಿಗಳು

೭) ಶ್ರೀ ಮ. ನಿ. ಪ್ರ. ಅಯ್ಯಪ್ಪಾ ಸ್ವಾಮಿಗಳು

೮) ಶ್ರೀ ಮ. ನಿ. ಪ್ರ. ಚನ್ನಮಲ್ಲಿಕಾರ್ಜುನ ಸ್ವಾಮಿಗಳು

೯) ಶ್ರೀ ಮ. ನಿ. ಪ್ರ. ಎರಡನೇ ಅಖಂಡೇಶ್ವರ ಸ್ವಾಮಿಗಳು

೧೦) ಶ್ರೀ ಮ. ನಿ. ಪ್ರ. ನೀಲಕಂಠ ಸ್ವಾಮಿಗಳು

೧೧) ಶ್ರೀ ಮ. ನಿ. ಪ್ರ. ಸಿದ್ಧವೀರದೇವರು

೧೨) ಶ್ರೀ ಮ. ನಿ. ಪ್ರ. ಶಾಂತಲಿಂಗ ಮಹಾಸ್ವಾಮಿಗಳು (ನೂತನ ಶ್ರೀಗಳು)

### ೨.೧೨. ರಾಮಕೋಡದ ಹಿರೇಮಠ

ಶ್ರೀಮಠವು ಸುಮಾರು ಒಂಬತ್ತು ನೂರು ವರ್ಷಗಳ ಪ್ರಾಚೀನತೆಯ ಇತಿಹಾಸವನ್ನು ಹೊತ್ತಿದೆ. ಶ್ರಿ ಶಿವಲಿಂಗೇಶ್ವರ ಸ್ವಾಮಿಗಳು ಮಠದ ಮೂಲ ಸಂಸ್ಥಾಪಕರಾಗಿದ್ದಾರೆ. ದೇಶ ಸಂಚಾರ ಮಾಡುತ್ತಾ ಬಂದು ಈ ಪವಿತ್ರ ಕ್ಷೇತ್ರದಲ್ಲಿ ನೆಲೆ ನಿಂತಿದ್ದಾರೆಂದು ತಿಳಿದುಬಂದಿದೆ. ಮಠವನ್ನು ಸ್ಥಾಪಿಸಿ ಕೆಲವು ದಿವಸ ಕಲ್ಯಾಣ

ಕ್ಷೇತ್ರಕ್ಕೆ ಬಂದು ತಪಸ್ಸು ಮಾಡಿದ್ದಾರೆಂದು ಪ್ರತಿತಿ ಇದೆ. ನೂತನ ಶ್ರೀಗಳಾದ ಶ್ರೀ.ಷ. ಭ್ರ. ಚನ್ನವೀರ ಸ್ವಾಮಿ ಮಠದ ಕೀರ್ತಿಯನ್ನು ಹತ್ತು ಹಲವಾರು ಕಡೆ ಹರಡಿದರು.

ಪ್ರವಾಸಕ್ಕೆ ಬಂದ ಅತಿಥಿಗಳಿಗೆ ಶ್ರೀ ಮಠದಲ್ಲಿ ಕೋಣೆಗಳ ವ್ಯವಸ್ಥೆ ಮಾಡಲಾಗಿದೆ. ಪ್ರಸಾದ ವ್ಯವಸ್ಥೆಯನ್ನು ಮಾಡಿದ್ದಾರೆ. ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಾರೆ. ವಿರಕ್ತ ಮಠಗಳೊಡನೆ ಆತ್ಮೀಯತೆಯಿಂದ ಇರುತ್ತಾರೆ. ಮಠದ ಸ್ವಾಮಿಗಳಾಗದೇ ಜಗದ ಜನರ ಸ್ವಾಮಿಗಳಾಗಬೇಕು ಎಂದು ತಿಳಿದು ಸರ್ವರಿಗೂ ಧರ್ಮೋಪದೇಶವನ್ನು ಸಾರುತ್ತಾ ಹಗಲಿರುಳು ಶ್ರಮಿಸುತ್ತಾರೆ.

ವಂಶಾವಳಿ

೧) ಶ್ರೀ ಶಿವಲಿಂಗೇಶ್ವರ ಸ್ವಾಮಿಗಳು

೨) ಶ್ರೀ ಸಿದ್ದೇಶ್ವರ ಸ್ವಾಮಿಗಳು

೩) ಶ್ರೀ ಪಂಚಾಕ್ಷರಿ ಸ್ವಾಮಿಗಳು

೪) ಶ್ರೀ ಸದಾಶಿವಯ್ಯ ಸ್ವಾಮಿಗಳು

೫) ಶ್ರೀ ವೀರಭದ್ರಯ್ಯ ಸ್ವಾಮಿಗಳು

೬) ಶ್ರೀ ರಾಮಲಿಂಗಯ್ಯ ಸ್ವಾಮಿಗಳು

೭) ಶ್ರೀ ಮರಿ ರಾಮಲಿಂಗ ಸ್ವಾಮಿಗಳು

೮) ಶ್ರೀ ವೀರೂಪಾಕ್ಷ ಸ್ವಾಮಿಗಳು

೯) ಶ್ರೀ ನಿಜಲಿಂಗ ಸ್ವಾಮಿಗಳು

೧೦) ಶ್ರೀ ಸಿದ್ದರಾಮ ಸ್ವಾಮಿಗಳು

೧೧) ಶ್ರೀ ಖಟ್ವಾಂಗೇಶ್ವರ ರೇವಣ ಸಿದ್ಧ ಸ್ವಾಮಿಗಳು

೧೨) ಶ್ರೀ ಷ.ಬ್ರ. ಚನ್ನವೀರ ಸ್ವಾಮಿಗಳು (ನೂತನ ಶ್ರೀಗಳು)

ನೂತನ ಶ್ರೀಗಳು ಮಠದ ಜೀರ್ಣೋದ್ಧಾರಕ್ಕಾಗಿ ಹಗಲಿರುಳು ಶ್ರಮಿಸುತ್ತಾರೆ. ಧರ್ಮದ ಪ್ರಚಾರಗೋಸ್ಕರ ವಿವಿಧ ರೀತಿಯ ಕಾರ್ಯಕ್ರಮಗಳನ್ನು ಶ್ರೀಮಠದಲ್ಲಿ ನೆರವೇರಿಸಿಕೊಂಡು ಬರುತ್ತಾರೆ. ಧರ್ಮ ಪ್ರಚಾರ ಮಾಡಿ ಸಮಾಜವನ್ನು ಸುಮಾರ್ಗದತ್ತ ತರಲು ದುಡಿಯುತ್ತಾರೆ. ನಿಸ್ವಾರ್ಥತೆಯಿಂದ ತಮ್ಮ ಸೇವೆಯನ್ನು ಸಮಾಜಕ್ಕೆ ಕೊಡುಗೆಯಾಗಿ ನೀಡುತ್ತಿದ್ದಾರೆ.

## ೨.೧೩. ಪಾಳಾ ಹಿರೇಮಠ

"ಮೂರ್ತಿ ಚಿಕ್ಕದಾದರೂ, ಕೀರ್ತಿ ದೊಡ್ಡದು" ಎಂಬಂತೆ ಇಲ್ಲಿ ಊರು ಚಿಕ್ಕದಾಗಿದ್ದರೂ ಮಠ ದೊಡ್ಡದಾಗಿದೆ. ಪಾಳಾ ಎನ್ನುವುದೊಂದು ಚಿಕ್ಕಗ್ರಾಮ ಇದು ಗುಲಬರ್ಗಾ ತಾಲೂಕಿನಲ್ಲಿದೆ, ಇದಕ್ಕೆ "ಪಂಚವೃತ್ತಿ ಕಟ್ಟೀಮನಿ ಹಿರೇಮಠ " ಎಂದು ಕರೆಯುತ್ತಾರೆ. ಹದಿಮೂರನೆಯ ಶತಮಾನದ ಆರಂಭದಲ್ಲಿಯೇ ಈ ಮಠವು ಉದ್ಭವಿಸಿತೆಂದು ತಿಳಿದು ಬಂದಿದೆ.

ವಂಶಾವಳಿ

೧) ಶ್ರೀ ಷ. ಬ್ರ. ಮಹಾಂತಯ್ಯಾ ಸ್ವಾಮಿ

೨) ಶ್ರೀ ಷ. ಬ್ರ. ಕರಿಬಸೂಸ್ವಾಮಿಗಳು

೩) ಶ್ರೀ ಷ. ಬ್ರ. ಮಳಿಯ ಸ್ವಾಮಿಗಳು

೪) ಶ್ರೀ ಷ. ಬ್ರ. ನಾಗಭೂಷಣ ಸ್ವಾಮಿಗಳು

೫) ಶ್ರೀ ಷ. ಬ್ರ. ಎರಡನೆಯ ಮಳಿಯ ಸ್ವಾಮಿಗಳು

೬) ಶ್ರೀ ಷ. ಬ್ರ. ಸಿದ್ದೇಶ್ವರ ಸ್ವಾಮಿಗಳು

೭) ಶ್ರೀ ಷ. ಬ್ರ. ರುದ್ರಮುನಿ ಸ್ವಾಮಿ

೮) ಶ್ರೀ ಷ. ಬ್ರ. ಮೂರನೆ ಮಳಿಯ ಸ್ವಾಮಿ

೯) ಶ್ರೀ ಷ. ಬ್ರ. ಸಿದ್ದಲಿಂಗ ಸ್ವಾಮಿಗಳು

೧೦) ಶ್ರೀ ಷ. ಬ್ರ. ನಾಲ್ಕನೆಯ ಮಳಿಯ ಸ್ವಾಮಿಗಳು

೧೧) ಶ್ರೀ ಷ.ಬ್ರ. ಸಿದ್ದಲಿಂಗ ಸ್ವಾಮಿಗಳು (ನೂತನ ಶ್ರೀಗಳು)

ಸಮಾಜದ ಸರ್ವೋನ್ನತಿಗೆ ಹಗಲಿರುಳು ದುಡಿಯುತ್ತಿರುವ ಇಂದಿನ ಪೀಠಾಧಿಪತಿಗಳಾದ ಶ್ರೀ ಷ.ಬ್ರ. ಸಿದ್ದಲಿಂಗ ಸ್ವಾಮಿಗಳು ಒಬ್ಬರು. ಹಿರೇಮಠದಲ್ಲಿ ಅನ್ನದಾಸೋಹಕ್ಕೆ ಹೆಚ್ಚಿನ ಮಹತ್ವ ಕೊಟ್ಟಿದ್ದಾರೆ. ಬಂದ ಭಕ್ತರ ಮನವನ್ನು ನೊಯ್‌ದಂತೆ ಮಾತನಾಡುತ್ತಾರೆ.

" ತನಗೆ ಮುನಿದವರಿಗೆ ತಾ ಮುನಿಯಲೇಕಯ್ಯ ?
ತನಗಾದ ಆಗೇನು ? ಅವರಿಗಾದ ಚೇಗೆನು ?
ತನುವಿನ ಕೊಪ ತನ್ನ ಹಿರಿಯತನದ ಕೇಡು
ಮನದ ಕೋಪ ತನ್ನ ಅರಿಹಿನ ಕೇಡು
ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ
ನೆರೆಮನೆಯ ಸುಡದು, ಕೂಡಲ ಸಂಗಮ ದೇವಾ"[೧೦]

ಎಂಬ ಶರಣ ಬಸವಣ್ಣನವರ ವಚನದಂತೆ ಎಲ್ಲರಿಗೂ ವಿನಯದಿಂದ ಮಾತನಾಡುತ್ತಿದ್ದರು. ಶ್ರೀಮಠದಲ್ಲಿ ಆಗಾಗ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತಾರೆ. ಪಾಠ ಪ್ರವಚನಗಳ ಮುಖಾಂತರ ಜನರ ಮನವನ್ನು ಸೂರೆಗೊಂಡಿದ್ದಾರೆ. ಭಕ್ತರು ಸಹ ಶ್ರೀಗಳ ಮೇಲೆ ಹೆಚ್ಚಿನ ಪ್ರೀತಿ,ಪ್ರೇಮ, ವಿಶ್ವಾಸಗಳನ್ನು ಇಟ್ಟುಕೊಂಡಿರುತ್ತಾರೆ.

೨.೧೪. ಹೊನ್ನಕಿರಣಗಿ ಮಠ

ಗುಲಬರ್ಗಾ ತಾಲೂಕಿನಲ್ಲಿ ಬರುವ ಹೊನ್ನ ಕಿರಣಗಿ ಒಂದು ಗ್ರಾಮ. ಈ ಗ್ರಾಮದಲ್ಲಿ ಒಂದು ವಿರಕ್ತಮಠ ಇದೆ. ಈ ಮಠಕ್ಕೆ ''ರಾಚೋಟೇಶ್ವರ ಮಠ'' ವೆಂದು ಕರೆಯುತ್ತಾರೆ. ಸುಮಾರು ೪೧೦ ವರ್ಷಗಳ ಪ್ರಾಚೀನತೆಯ ಇತಿಹಾಸವನ್ನು ಹೊತ್ತಿದೆ, ಶ್ರೀಮಠದಲ್ಲಿ ಹಿತ್ತಾಳೆಯ ಶಾಸನ ದೊರತಿದೆ. ಈ ಶಾಸನದ ಮೇಲೆ ''ಶ್ರೀ ಗುರು ಪ್ರಸನ್ನ ಸಕ್ಷ ೧೫೦೦ ಕಿರಣಗಿ ಮಾಡಿದ ಪ.ಚ. ಕರಿಬಸಪ್ಪಾ ಸ್ವಾಮಿಗಳು ಜಗದ್ಗುರು ಪಾಳ್ಯ ಸಿಂಹಾಸನದ ಪೈಕಿ'' ಎಂದು ಬರೆಯಲಾಗಿದೆ. ಈ ಶಾಸನದ ಆಧಾರದಿಂದ ಈ ಮಠವು ೧೫ನೇ ಶತಮಾನದಲ್ಲಿ ಶ್ರೀ ಕರಿಬಸವೇಶ್ವರ ಸ್ವಾಮಿಗಳು ಸ್ಥಾಪನೆ ಮಾಡುತ್ತಿದ್ದಾರೆಂದು ಊಹಿಸಲಾಗಿದೆ. ಈ ಕರಿಬಸವೇಶ್ವರ ಸ್ವಾಮಿಗಳಿಗೆ ಭಕ್ತರು ರಾಚೋಟೇಶ್ವರ ಸ್ವಾಮಿ ಎಂದು ಕರೆಯುತ್ತಿದ್ದಾರೆಂದು ತಿಳಿದು ಬಂದಿದೆ. ಶ್ರೀಗಳವರು ಕವಿಗಳಾಗಿದ್ದರು. ಅಂತೆಯೇ ಕಲಬುರ್ಗಿ ಶರಣ ಬಸವಪ್ಪರ ಬಗ್ಗೆ ''ತಾರಾವಳಿ'' ಯನ್ನು ಬರೆದು ಜನರ ಕೈಗಿಟ್ಟಿದ್ದಾರೆ.

ವಂಶಾವಳಿ

೧) ಶ್ರೀ ಕರಿಬಸವ ಸ್ವಾಮಿಗಳು ( ರಾಚೋಟೇಶ್ವರ ಸ್ವಾಮಿಗಳು)

೨) ಶ್ರೀ ಎರಡನೆಯ ಕರಿಬಸವ ಸ್ವಾಮಿ (ರಾಚೋಟೇಶ್ವರ ಸ್ವಾಮಿ)

೩) ಶ್ರೀ ಗುರುಪಾದ ಸ್ವಾಮಿಗಳು

೪) ಶ್ರೀ ಮೂರನೆಯ ರಾಚೋಟೆಪ್ಪಾ ಸ್ವಾಮಿ

೫) ಶ್ರೀ ಶ್ರೀ ಷ. ಬ್ರ. ಕರಿಬಸವೇಶ್ವರ ಶಿವಾಚಾರ್ಯರು (ನೂತನ ಶ್ರೀಗಳು)

೬) ಶ್ರೀ ಚಂದ್ರಗುಂಡ ಸ್ವಾಮಿಗಳು (ಮರಿದೇವರು)

೨.೧೫. ನಂದೂರಿನ ಹಿರೇಮಠ

ಗುಲಬರ್ಗಾದ ದಕ್ಷಿಣ ಭಾಗಕ್ಕೆ ಸುಮಾರು ಹತ್ತು ಕಿಲೋ ಮೀಟರ ದೂರದಲ್ಲಿರುವ ನಂದೂರು ಗ್ರಾಮವಿದೆ. ಈ ಗ್ರಾಮವು ಹಿರೇನಂದೂರ ಮತ್ತು ಚಿಕ್ಕ ನಂದೂರ ಎಂದು ಎರಡು ಭಾಗಗಳಾಗಿವೆ. ಆ ಎರಡು ಗ್ರಾಮಗಳ ಮಧ್ಯಸ್ಥಿಕೆಯಲ್ಲಿಯೇ ಹೊಂದಿಕೊಂಡು ಹಿರೇಮಠವು ನಡೆಯುತ್ತಿದೆ. ಈ ಮಠಕ್ಕೆ ೮೦೦ ವರ್ಷಗಳ ಪ್ರಾಚೀನತೆಯಿದೆ ಯೆಂದು ಕಂಡು ಬಂದಿದೆ. ಈ ಮಠದ ಮೂಲ ಸ್ಥಾಪಕರು ಶ್ರೀಮಲೆಯ ಶಾಂತೇಶ್ವರರು ಎಂದು ತಿಳಿದು ಬಂದಿದೆ. ಇವರು ಸ್ವತಃ ಕವಿಗಳಾಗಿದ್ದರು. ಇವರ ನಂತರ ಅನೇಕ ಮಠಾಧಿಪತಿಗಳು ಆಗಿ ಹೋಗಿದ್ದಾರೆ. ಆದರೆ ಅವರೆಲ್ಲರ ಹೆಸರುಗಳನ್ನು ಪತ್ತೆಯಾಗಿಲ್ಲ. ನಮಗೆ ದೊರೆತ ಆಧಾರದಂತೆ ಶ್ರೀ ಮಠದ ಪರಂಪರೆ, ಇಂತಿದೆ.

೧) ಶ್ರೀ ಮಲೆಯ ಶಾಂತೇಶ್ವರ ಸ್ವಾಮಿಗಳು

೨) ಶ್ರೀ ಸದಾಶಿವ ಸ್ವಾಮಿಗಳು

೩) ಶ್ರೀ ಷ.ಬ್ರ. ಚಂದ್ರಮೌಳೀಶ್ವರ ಮಹಾಸ್ವಾಮಿಗಳು (ನೂತನ ಪೀಠಾಧಿ ಪತಿಗಳು)

೨.೧೬. ಬೆಳಗುಂಪಿ ಹಿರೇಮಠ

ಶ್ರೀ ಮಠಕ್ಕೆ ಐದುನೂರು ವರ್ಷಗಳ ಪ್ರಾಚೀನತೆ ಇದ್ದರೂ ಸಂಪೂರ್ಣ ಮಾಹಿತಿ ದೊರೆತಿಲ್ಲ. ಕಲಬುರ್ಗಿ ತಾಲೂಕಿನಲ್ಲಿ ಬರುವ ಒಂದು ಚಿಕ್ಕ ಗ್ರಾಮ ಬೆಳಕುಂಡಿ, ಇದಕ್ಕೆ ಬೆಳಕುಂಪಿಯೆಂದು ಕರೆಯುತ್ತಾರೆ. ಅಲ್ಲಿಯ ಹಿರೇಮಠವು ಪೀಠಾಧಿಪತಿಗಳಿಲ್ಲದೆ ಅನಾಥವಾಗಿ ಕಂಗೊಳಿಸುತ್ತಿದೆ.

> " ಹೊಲಬುಗೆಟ್ಟ ಶಿಸು ತನ್ನ ತಾಯಿ ಬಯಸುವಂತೆ
> ಬಳಿದಪ್ಪಿದ ಪಶು ತನ್ನ ಹಿಂಡನ್ನರಸುವಂತೆ
> ಬಯಸುತ್ತಿರ್ದೆನಯ್ಯ ನಿಮ್ಮ ಶರಣರ ಬರವನು
> ಬಯಸುತ್ತಿರ್ದೆನಯ್ಯಾ ನಿಮ್ಮ ಭಕ್ತರ ಬರವನು
> ದಿನಕರನುದಯಕ್ಕೆ ಕಮಳ ವಿಕಸಿತವಾದಂತೆ
> ಎನಗೆ ನಿಮ್ಮ ಶರಣರ ಬರವು ಕೂಡಲ ಸಂಗಮ ದೇವಾ "[೧೧]

ಧಾರಿ ತಪ್ಪಿದ ಅಥವಾ ತಾಯಿಯನ್ನು ಕಳೆದುಕೊಂಡ ಪಶುವು ತನ್ನ ತಾಯಿಗಾಗಿ ಹಗಲಿರುಳು ಹುಡುಕುವಂತಿದೆ. ಎಂಬ ಅರ್ಥವನ್ನು ಬಸವಣ್ಣನವರ ವಚನದಿಂದ ಅರ್ಥವಾಗುತ್ತದೆ. ಹಾಗೆಯೇ

''ಭಕ್ತರೆಲ್ಲರು ಲಂದಣಿಗರಾಗಿ ಹೋಯಿತು, ಜಂಗಮವೆಲ್ಲ ಉಪಜೀವಿಗಳಾಗಿ ಹೋಯಿತು ಇದನೋ ಇದೆಂತೋ ಅರಿಯಲಿ ಬಾರದು ಕಾಯಗುಣ ನಾಸ್ತಿಯಾದಾತ ಭಕ್ತ.... ಉಳಿದವೆಲ್ಲವು ಸಟೆಯುಂಟೆ ಗುಹೇಶ್ವರ''[೨] ಎಂದು ಅಲ್ಲಮಪ್ರಭು ದೇವರು ಸಹ ಹೇಳಿದು ಮನವರಿಕೆಯಾಗುತ್ತದೆ. ಹಾಗೆಯೇ ಇಲ್ಲಿ ಶ್ರೀಮಠವು ಮಠಾಧೀಶರಿಗಾಗಿ ಕೈಮಾಡಿ ಕರೆಯುತ್ತಲಿದೆ. ಅಂಬೆ ಅಂಬೆ ಎಂದು ಒದರುತ್ತಲಿದೆ. ಆದರೆ ಇನ್ನೂ ಯಾರು ಬರಲಿಲ್ಲ, ಎಂದು ತಿಳಿದ ಮಠ ನಿರಾಶದಾಯಕವಾಗಿ ಕಗೋಳಿಸುತ್ತಿದೆ.

ಶ್ರೀ ಮಠದ ಮೂಲ ಸಂಸ್ಥಾಪಕರು ಇಲ್ಲಿಯವರೆಗೆ ಪತ್ತೆಯಾಗಿಲ್ಲ- ನಮಗೆ ದೊರೆತ ಅಧಾರಗಳು ಕೇವಲ ಎರಡು ವಂಶಾವಳಿಗಳು ಮಾತ್ರ ಎದ್ದು ಕಾಣುತ್ತವೆ.

೧) ಶ್ರೀ ಪ್ರಭು ಸ್ವಾಮಿಗಳು

೨) ಶ್ರೀ ಸಿದ್ಧಪ್ರಭು ಸ್ವಾಮಿಗಳು

ಶ್ರೀ ಪ್ರಭು ಸ್ವಾಮಿಗಳು ಪವಾಡ ಪುರುಷರೆಂದು ತಪೋನಿಷ್ಠರೆಂದು ಪ್ರಖ್ಯಾತಿಯನ್ನು ಪಡೆದಿದ್ದಾರೆ. ಇವರುಮಠದಲ್ಲಿ ಹೆಚ್ಚಾಗಿ ನಿಲ್ಲಲಿಲ್ಲ ದೇಶ ಸಂಚಾರ ಮಾಡುತ್ತ ಧರ್ಮೋಪದೇಶವನ್ನು ಸಾರಿ ಹೇಳುತ್ತಿದ್ದರು. ಜನರಲ್ಲಿರುವ ಕಲ್ಮಶಗಳನ್ನು ಕಿತ್ತೊಗೆದು ಅರಿವಿನ ಬೀಜವನ್ನು ಬಿತ್ತುತ್ತಿದ್ದರೆಂದು ತಿಳಿದು ಬಂದಿದೆ.

## ೨.೧೭. ಕಲಬುರ್ಗಿ ಶ್ರೀ ಶರಣಬಸವೇಶ್ವರ ಮಠ

ಕಲ್ಯಾಣನಾಡಾದ ಗುಲಬರ್ಗಾ ನಗರದಲ್ಲಿ ಶರಣಬಸವೇಶ್ವರ ಮಠವು ಎರಡುನೂರು ವರ್ಷಗಳ ಇತಿಹಾಸವನ್ನು ಹೊಂದಿದೆ. ''ಭಕ್ತರು ಬರುವನೆಗೆ ಪ್ರಾಣಾ ಜೀವಾಳವಯ್ಯ'' ಎಂಬಂತೆ ಶ್ರೀ ಮಠದ ಉದ್ದೇಶವಾಗಿದೆ. ಜನ ಕಲ್ಯಾಣಕ್ಕಾಗಿ ಲೋಕಕಲ್ಯಾಣಕ್ಕಾಗಿ ಹಗಲಿರುಳು ಶ್ರಮಿಸುತ್ತಿದ್ದ ಶ್ರೀ ಶರಣ ಬಸವೇಶ್ವರ ಸುಮಾರು ೧೭೪೬ ರಲ್ಲಿ ಶ್ರೀ ಮಠವನ್ನು ಸ್ಥಾಪಿಸಿದರು. ದಾಸೋಹಕ್ಕೆ ಹೆಸರುವಾಸಿಯಾಗಿದೆ. ಶ್ರೀಮಠಕ್ಕೆ ''ದಾಸೋಹ ಪೀಠ'' ವೆಂದು ಜನರು ಕರೆಯುತ್ತಾರೆ. ಮಹಾದಾಸೋಹ ಪೀಠದಲ್ಲಿ ಸರ್ವ ಧರ್ಮದವರಿಗೆ ಸಮಾನ ಅವಕಾಶ ಮುಕ್ತ ಅವಕಾಶಗಳಿರುತ್ತಿದ್ದವು. ಭಕ್ತರು ನಾನಾ ಕಡೆಯಿಂದ ಧಾವಿಸಿ ಶ್ರೀಗಳ ಆರ್ಶಿವಾದ ಪಡೆದು ಪ್ರಸಾದ ತೆಗೆದುಕೊಂಡು ಹೋಗುತ್ತಿದ್ದರು.

ಕೃಷಿ ಕಾಯಕದ ಶ್ರಿಶರಣ ಬಸಪ್ಪನವರು ಹೊಲದಲ್ಲಿ ಬೆಳೆದ ಬೆಳೆಯುನ್ನು ಪ್ರಾಣಿ ಪಕ್ಷಿಗಳು ಆಹಾರಕ್ಕೆಂದು ಬಿಡುತ್ತಿದ್ದರು. ಅಲ್ಲದೆ ಅವುಗಳಿಗೆ ಆಹಾರ ತಿಂದು ನೀರು ಕುಡಿಯುಲು ಹೊಲದ ನಾಲ್ಕು ಮೂಲೆಗಳಲ್ಲಿ ರಂಜಣಗಿ (ಗಡಗಿ) ಇರಿಸಿದರು, ಅದರಲ್ಲಿ ಪ್ರತಿ ದಿನ ನೀರು ಹೊತ್ತು ತಂದು

ಹಾಕುತ್ತಿದ್ದರು, ಇಂತಹ ಉದ್ದಾತ ಶ್ರೀಗಳು ಇಂದಿನ ಕಾಲದಲ್ಲಿ ಸಿಗುವದು ತೀರಾ ಅಪರೂಪ. ಭಕ್ತರ ಮನವನ್ನು ಎಂದೂ ನೊಯಿಸಿದವರಲ್ಲ. ಇಂದು ಶ್ರೀಮಠವು ಧಾರ್ಮಿಕ ಸಾಮಾಜಿಕ ಸಾಹಿತ್ಯಕೆ ಹಾಗೂ ಶೈಕ್ಷಣಿಕ ಕ್ಷೇತ್ರಲ್ಲಿ ಪ್ರಗತಿಮೀರಿ ಕಾರ್ಯ ಮಾಡುತ್ತಿರುವುದು ನೋಡಬಹುದು. ಶ್ರೀಮಠದಲ್ಲಿ ಅನ್ನ ದಾಸೋಹ ಕಡಿಮೆ ಯಾಗಿದೆ, ಭಕ್ತರು ಕಡಿಮೆಯಾಗಿದ್ದಾರೆ, ನೂತನ ಶ್ರಿಗಳಾದ ಡಾ಼ ಶರಣಬಸವಪ್ಪ ಅಪ್ಪನವರು ಮಹಾದಾಸೋಹಕ್ಕೆ ಹೆಚ್ಚಿನ ಮಹತ್ವ ಕೊಡದೆ ಶೈಕ್ಷಣಿಕ ಪ್ರಗತಿಗೆ ಹೆಚ್ಚಿನ ಮಹತ್ವ ಕೊಡುತ್ತಿರುವುದು ಕಂಡು ಬರುತ್ತಿದೆ.

ವಂಶಾವಳಿ

೧. ಶ್ರೀ ಶರಣ ಬಸವೇಶ್ವರು—ಮೂಲ ಸ್ಥಾಪಕರು ೧೭೪೬—೧೮೨೨

೨. ಶ್ರೀ ಆವ ದೊಡ್ಡ ಶರಣರು —೧೮೨೨—೧೮೪೬

೩. ಶ್ರೀ ಎರಡನೆಯ ಶರಣ ಬಸಪ್ಪ ಅಪ್ಪ —೧೮೪೬—೧೮೭೧

೪. ಶ್ರೀ ಬಸವಣಪ್ಪ ಅಪ್ಪ —೧೮೭೧—೧೮೭೮

೫. ಶ್ರೀ ಲಿಂಗಬಸವಪ್ಪ ಅಪ್ಪ —೧೮೭೮—೧೮೯೨

೬. ಶ್ರೀ ಮೂರನೇ ಶರಣಬಸಪ್ಪ ಅಪ್ಪ—೧೮೯೨—೧೯೦೩

೭. ಶ್ರೀ ದ್ವಿತಿಯ ದೊಡ್ಡಪ್ಪ ಅಪ್ಪ —೧೯೦೩—೧೯೮೩

೮. ಶ್ರೀ ಪೂಜ್ಯ ಶ್ರೀ ಡಾ಼ ಶರಣ ಬಸವಪ್ಪ ಅಪ್ಪ ೧೯೮೩—ರಿಂದ ನೂತರ ಶ್ರೀಗಳಾಗಿ ಸೇವೆ ಸಲ್ಲಿಸಿದ್ದಾರೆ.

## ೨.೧೮. ಚವದಾಪೂರಿ ಹಿರೇಮಠ

ಕಲಬುರ್ಗಿ ನಗರದಲ್ಲಿ ಒಂದು ಹಿರೇಮಠವಿದೆ. ಅದಕ್ಕೆ ಚವದಾಪುರಿ ಹಿರೇಮಠವೆಂದು ಕರೆಯುತ್ತಾರೆ. ಶ್ರೀಮಠದ ಕೆಳಗಡೆ ಹದಿನಾಲ್ಕು ಗ್ರಾಮಗಳನ್ನು ಒಳಗೊಂಡಿದೆ. ಈ ಹದಿನಾಲ್ಕು ಗ್ರಾಮಗಳಲ್ಲಿ ಜನ ಸೇವೆಯನ್ನು ಸಲ್ಲಿಸಿದ ಚವದಾಪೂರಿ ಹಿರೇಮಠ ವೆಂದು ಜನರು ಕರೆಯುತ್ತಾರೆ ಹದಿನಾಲ್ಕು ಗ್ರಾಮಗಳಲ್ಲಿ ಶಾಖ ಮಠಗಳನ್ನು ಸ್ಥಾಪಿಸಿವೆಯೆಂದು ಹೇಳಬೇಕಾಗುತ್ತದೆ. ಶ್ರೀ ಷ. ಬ್ರ. ರೇವಣಸಿದ್ದ ಮಾಹಾಸ್ವಾಮಿಗಳು ಚವದಾಪೂರಿ ಹಿರೇಮಠ ಮೂಲ ಸಂಸ್ಥಾಪಕರು, ಇವರು ಶ್ರೀ ಶೈಲ ಕ್ಷೇತ್ರದಿಂದ ಧರ್ಮಪ್ರಚಾರಕ್ಕೆಂದು ಬಂದು ನೆಲೆಸಿದರೆಂದು ತಿಳಿದು ಬಂದಿದೆ. ಆಗ ಕಲಬುರ್ಗಿಯ ಪ್ರದೇಶವು ಕಲಿಂಗ ಭೂಪನ ಧರ್ಮನಿಷ್ಠ ಅರಸನ ಆಡಳಿತಕ್ಕೆ ಒಳಗಾಗಿತ್ತು. ''ಕಲಿಂಗ ಭೂಪನು ರೇವಣಸಿದ್ದಸ್ವಾಮಿಗಳು ತಪೋನಿಷ್ಠೆಗೆ ತಲೆಬಾಗಿ

ಅವರಿಗೆ ಬೇಕಾಗುವ ಎಲ್ಲಾ ವ್ಯವಸ್ಥೆಗಳನ್ನು ಒದಗಿಸಿಕೊಟ್ಟು ಕಲಬುರ್ಗಿಯಲ್ಲಿಯೇ ಉಳಿಯುವಂತೆ ಮಾಡಿದರು. ತನ್ನ ಅರಮನೆಯ ಹತ್ತಿರದಲ್ಲಿಯೇ ಇದ್ದ ಕೋಟೆಯಲ್ಲಿ ಮಠ ನಿರ್ಮಿಸಲು ಸ್ಥಳವನ್ನು ನೀಡಿದರು''. ಎಂದು ತಿಳಿದು ಬಂದಿದೆ. ಆದ್ದರಿಂದ ಗುಲಬರ್ಗಾದ ಕೋಟೆಯಲ್ಲಿ ಚವದಾಪೂರಿ ಹಿರೇಮಠವಿರುವುದು ಎದ್ದು ಕಾಣುತ್ತವೆ.

ವಂಶಾವಳಿ

೧) ಶ್ರೀ ರೇವಣಸಿದ್ಧ ಸ್ವಾಮಿಗಳು

೨) ಶ್ರೀ ಎರಡನೆಯ ರೇವಣಸಿದ್ಧ ಸ್ವಾಮಿಗಳು

೩) ಶ್ರೀ ಮೂರನೆಯ ರೇವಣಸಿದ್ಧ ಸ್ವಾಮಿಗಳು

೪) ಶ್ರೀ ನಾಲ್ಕನೆಯ ರೇವಣಸಿದ್ಧ ಸ್ವಾಮಿಗಳು

೫) ಶ್ರೀ ಐದನೆಯ ರೇವಣಸಿದ್ಧ ಸ್ವಾಮಿಗಳು

೬) ಶ್ರೀ ಶಾಂತವೀರ ಸ್ವಾಮಿಗಳು

೭) ಶ್ರೀ ಎರಡನೆಯ ಶಾಂತವೀರ ಸ್ವಾಮಿಗಳು

೮) ಶ್ರೀ ಮೂರನೆಯ ಶಾಂತವೀರ ಸ್ವಾಮಿಗಳು

೯) ಶ್ರೀ ದೇಶಿಕ ಶಾಂತವೀರ ಸ್ವಾಮಿಗಳು

೧೦) ಶ್ರೀ ಐದನೆಯ ಶಾಂತವೀರ ಸ್ವಾಮಿಗಳು

೧೧) ಶ್ರೀ ಮಹಾಶಾಂತ ವೀರ ಸ್ವಾಮಿಗಳು

೧೨) ಶ್ರೀ ನಿಜಶಾಂತವೀರ ಸ್ವಾಮಿಗಳು

೧೩) ಶ್ರೀ ಚನ್ನಬಸವ ಸ್ವಾಮಿಗಳು

೧೪) ಶ್ರೀ ಕಿರಿಯ ಚನ್ನಬಸವ ದೇವರು

೧೫) ಶ್ರೀ ತಪಸ್ವಿ ಚನ್ನಬಸವ ಸ್ವಾಮಿಗಳು

೧೬) ಶ್ರೀ ಗುರುಪುಂಗದ ಚನ್ನಬಸವ ಸ್ವಾಮಿಗುಳ

೧೭) ಶ್ರೀ ರೇವಣಸಿದ್ಧ ಸ್ವಾಮಿಗಳು

೧೮) ಶ್ರೀ ಚನ್ನಬಸವ ದೇವರು

೧೯) ಶ್ರೀ ಶಾಂತವೀರ ದೇವರು

೨೦) ಶ್ರೀ ಷ.ಬ್ರ ಶಾಂತವೀರ ಸ್ವಾಮಿಗಳು

೨೧) ಶ್ರೀ ಷ.ಬ್ರ ರೇವಣಸಿದ್ಧ ಸ್ವಾಮಿಗಳು (ನೂತನ ಶ್ರೀಗಳು)

## ೨.೧೯. ಗುರುಬಸವನ ಮಠ

ಗುಲಬರ್ಗಾ ನಗರದಲ್ಲಿ ಮುಕ್ತಂಪೂರ ಓಣಿಯಲ್ಲಿ ಗದ್ದುಗೆ ಮಠದ ಎದುರುಗಡೆ ಗುರುಬಸವ ಮಠವಿದೆ. ಇದೊಂದು ವಿರಕ್ತಮಠ, ಇದಕ್ಕೆ ಎಂಟುನೂರು ವರ್ಷಗಳ ಪ್ರಾಚೀನತೆಯ ಇತಿಹಾಸವಿದೆ. ಹನ್ನೆರಡನೆಯ ಶತಮಾನದಲ್ಲಿ ಶ್ರೀ ಗುರುಬಸವರ ಸಮ್ಮುಖದಲ್ಲಿ ಉದ್ಘಾಟಿಸಿದ ಮಠವೆಂದು ತಿಳಿದು ಬಂದಿದೆ. ಧಾರ್ಮಿಕ, ಸಾಮಾಜಿಕ, ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸೇವೆಯನ್ನು ಸಲ್ಲಿಸಿ ಹೆಸರುವಾಸಿಯಾಗಿದೆ.

### ವಂಶಾವಳಿ

೧) ಶ್ರೀ ಗುರುಬಸವ ಸ್ವಾಮಿಗಳು (ಮಠದ ಸಂಸ್ಥಾಪಕರು)

೨) ಶ್ರೀ ಮುರುಘೇಂದ್ರ ಸ್ವಾಮಿಗಳು

೩) ಶ್ರೀ ರಾಚೋಟಪ್ಪ ಸ್ವಾಮಿಗಳು

೪) ಶ್ರೀ ಸಿದ್ಧಲಿಂಗ ಸ್ವಾಮಿಗಳು

೫) ಶ್ರೀ ನಾಗಭೂಷಣ ಸ್ವಾಮಿಗಳು

೬) ಶ್ರೀ ಚರಮೂರ್ತಿ ಸ್ವಾಮಿಗಳು

೭) ಶ್ರೀ ಗಂಗಾಧರ ಸ್ವಾಮಿಗಳು

೮) ಶ್ರೀ ನಿರಂಜನ ಸ್ವಾಮಿಗಳು

೯) ಶ್ರೀ ಚನ್ನರಾಮಯ್ಯ ಸ್ವಾಮಿಗಳು

೧೦) ಶ್ರೀ ಸಿದ್ಧರಾಮಯ್ಯ ಸ್ವಾಮಿಗಳು

೧೧) ಶ್ರೀ ಸಂಗನ ಬಸಯ್ಯ ಸ್ವಾಮಿಗಳು

೧೨) ಶ್ರೀ ರುದ್ರಯ್ಯ ಸ್ವಾಮಿಗಳು

೧೩) ಶ್ರೀ ಶಿವಯೋಗಿ ಸ್ವಾಮಿಗಳು

೧೪) ಶ್ರೀ ಗುರುಲಿಂಗಯ್ಯ ಸ್ವಾಮಿಗಳು

೧೫) ಶ್ರೀ ಶಿವಯೋಗಿಶ್ವರ ಸ್ವಾಮಿಗಳು

೧೬) ಶ್ರೀ ರೇವಣಸಿದ್ಧ ಸ್ವಾಮಿಗಳು

೧೭) ಶ್ರೀ ವಿರೂಪಾಕ್ಷಯ್ಯ ಸ್ವಾಮಿಗಳು

೧೮) ಶ್ರೀ ಬಸವಲಿಂಗಯ್ಯ ಸ್ವಾಮಿಗಳು

೧೯) ಶ್ರೀ ಎರಡನೆಯ ಬಸವಲಿಂಗಯ್ಯ ಸ್ವಾಮಿಗಳು (ಮರಿದೇವರು) ನೂತನ ಶ್ರೀಗಳು

ವಿರಕ್ತಮಠದಲ್ಲಿ ಧಾರ್ಮಿಕ, ಹಾಗೂ ಸಾಂಸ್ಕೃತಿಕ, ಕಾರ್ಯಕ್ರಮಗಳನ್ನು ನಡೆಯುತ್ತಿವೆ. ಪಾಠ ಪ್ರವಚನಗಳ ಮೂಲಕ ಜನರಲ್ಲಿರುವ ಕಲ್ಮಶಗಳನ್ನು ಕಿತ್ತೊಗೆಯಲು ಹವಣಿಸುತ್ತಾರೆ. ಪ್ರತಿಯೊಂದು ತಿಂಗಳಿಗೊಮ್ಮೆ ಸಾಂಸ್ಕೃತಿಕ ಕಾರ್ಯಕ್ರಮ ನಡೆಸಿ ಧಾರ್ಮಿಕ ತತ್ವಾಚರಣೆಯ ಬೀಜವನ್ನು ಬಿತ್ತುತ್ತಿದ್ದಾರೆ. ನಾವೆಲ್ಲರು ಒಂದೆ ಎಂದು ಸಾರಿಹೇಳಿ ಅಸ್ಪೃಶ್ಯತಾ ನಿವಾರಣೆ ಮಾಡಲು ಶ್ರಮಿಸುತ್ತಿದ್ದಾರೆ.

## ೨.೨೦. ಗದ್ದುಗೆ ಮಠ

ಗುಲಬರ್ಗಾ ಜಿಲ್ಲೆಗೆ ಕಲಬುರ್ಗಿ ಎಂದು ಕರೆಯುತ್ತಿದ್ದರು. ಈ ಜಿಲ್ಲೆಯ ಮುಕ್ತಂಪೂರದ ಗಲ್ಲಿ (ಓಣಿ)ಯಲ್ಲಿರುವ "ವಿರಕ್ತ ಮಠಕ್ಕೆ ಗದ್ದುಗೆ ಮಠ" ವೆಂದು ಕರೆಯುವ ವಾಡಿಕೆ ಇದೆ. ಬನವಾಸಿ ನಾಡಿನಿಂದ ದೇಶ ಸಂಚಾರ ಕೈಗೊಂಡ ಶ್ರೀ ರೇವಣಸಿದ್ಧ ಸ್ವಾಮಿಗಳು ಇಲ್ಲಿ ನೆಲೆ ನಿಂತು, ಈ ಮಠವನ್ನು ಸ್ಥಾಪಿಸಿದರೆಂದು ತಿಳಿದು ಬಂದಿದೆ. ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಸಾಹಿತ್ಯಿಕ ಕ್ಷೇತ್ರಗಳಲ್ಲಿ ಗಣನೀಯವಾದ ಸೇವೆಯನ್ನು ಸಲ್ಲಿಸುತ್ತಿದೆ.

ವಂಶಾವಳಿ

೧) ಶ್ರೀ ರೇವಣ ಸಿದ್ಧ ಸ್ವಾಮಿಗಳು (ಮೂಲ ಪುರುಷರು)

೨) ಶ್ರೀ ಶಿವಶಂಕರ ಸ್ವಾಮಿಗಳು

೩) ಶ್ರೀ ಚನ್ನವೀರ ಸ್ವಾಮಿಗಳು

೪) ಶ್ರೀ ಬಸವಲಿಂಗ ಸ್ವಾಮಿಗಳು

೫) ಶ್ರೀ ರೇವಣಸಿದ್ಧ ಸ್ವಾಮಿಗಳು

೬) ಶ್ರೀ ರೇವಪ್ಪಜ್ಜನವರು

೭) ಶ್ರೀ ಶಿವಸಂಗಮೇಶ್ವರ ಸ್ವಾಮಿಗಳು

೮) ಶ್ರೀ ಶಂಕ್ರಯ್ಯ ಸ್ವಾಮಿಗಳು

೯) ಶ್ರೀ ರುದ್ರಮುನಿ ಸ್ವಾಮಿಗಳು

೧೦) ಶ್ರೀ ಗದುಗೇಶ್ವರ ಸ್ವಾಮಿಗಳು

೧೧) ಶ್ರೀ ಚರಲಿಂಗೇಶ್ವರ ಸ್ವಾಮಿಗಳು

೧೨) ಶ್ರೀ ಶಿವಮೂರ್ತಿ ಸ್ವಾಮಿಗಳು

೧೩) ಶ್ರೀ ರುದ್ರಮುನಿ ಸ್ವಾಮಿಗಳು

೧೪) ಶ್ರೀ ಮ. ನಿ. ಪ್ರ. ರೇವಣಸಿದ್ದ ಸ್ವಾಮಿಗಳು (ನೂತನ ಶ್ರೀಗಳು)

ಶ್ರೀ ಮಠದ ಹತ್ತನೆಯ ಪೀಠಾಧಿಪತಿಯಾದ ಶ್ರೀ ಗದುಗೇಶ್ವರ ಸ್ವಾಮಿಗಳು ಪವಾಡ ಪುರುಷರು, ತಪೋನಿಷ್ಠೆಗಳು ಆಗಿದ್ದರು. ಭಕ್ತರು ಈ ಶ್ರೀಗಳ ಮೇಲೆ ತುಂಬಾ ಭಕ್ತಿ ಶ್ರದ್ಧೆಯಿಂದ ಕಾಣುತ್ತಿದ್ದರು. ಅಂದಿನಿಂದ ಶ್ರೀ ಮಠಕ್ಕೆ "ಗದುಗೆ ಮಠ"ವೆಂದೆ, ಪ್ರಖ್ಯಾತಿ ಪಡೆದಿದೆ. ನೂತನ ಶ್ರೀಗಳಾದ ಮ. ನಿ. ಪ್ರ. ರೇವಣಸಿದ್ಧ ಮಹಾಸ್ವಾಮಿಗಳು ಸಮಾಜದ ಕಳಕಳಿಯುಳ್ಳವರಾಗಿದ್ದಾರೆ. ಸಾಮಾಜಿಕ ಸೇವೆ ಜತೆ ಜತೆಗೆ ಧಾರ್ಮಿಕ ಕಾರ್ಯವನ್ನು ಮಾಡಿ ಹೆಸರುವಾಸಿಯಾಗಿದ್ದಾರೆ. ಮಠದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮವನ್ನು ಸತತವಾಗಿ ನಡೆಸಿಕೊಂಡು ಬರುವದರಲ್ಲಿ ಅಗ್ರಗಣ್ಯರಾಗಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ ತನ್ನದೆಯಾದ ಮಿತಿಯಲ್ಲಿ ಸೇವೆಸಲ್ಲಿಸುತ್ತಿದ್ದಾರೆ. ಭಕ್ತರೊಡನೆ ನಿಕಟ ಸಂಬಂಧವನ್ನು ಇಟ್ಟುಕೊಂಡಿದ್ದಾರೆ. ನಿಸ್ವಾರ್ಥ ಸ್ವಾಮಿಯೆಂದು ಜನ ಕರೆಯುತ್ತಿದ್ದಾರೆ.

೨. ೨೧. ಗುರುಮಠಕಲ ಮಠ

ಗುಲಬರ್ಗಾ ಜಿಲ್ಲೆಯ ವೀರಶೈವ ಮಠಗಳ ಪರಂಪರೆ ಹುಲುಸಾದದ್ದು. ಅದರೆ ಕಾಲಾನುಕ್ರಮವಾಗಿ ಪರಿವರ್ತನೆಯಿಂದ ಕೆಲವು ಮಠಗಳು ನಶಿಸಿ ಹೋಗಿವೆ. ಇನ್ನೂ ಕೆಲವು ಮಠಗಳ ಪರಂಪರೆ ಸಂಕ್ಷಿಪ್ತ ಮಾಹಿತಿ ದೊರೆಯುವಂತಾಗಿದೆ. ಗುಲಬರ್ಗಾ ಜಿಲ್ಲೆಯಲ್ಲಿ ದೊರೆಯುವ ಮಠಗಳೆಂದರೆ, ಉದಾ: ಅಫಜಲಪೂರ ತಾಲೂಕಿನ ಸಾವಳಗಿ, ಮಠ, ಹಿರೇಜವರ್ಗಿ ಮಠ, ಬೈರಾಮುಡಗಿ ಮಠ, ಉಡಚಣ ಮಠ, ಭೋಗಸಾ ಮಠ, ಆಳಂದ ತಾಲೂಕಿನ ಮಾದನ ಹಿಪ್ಪರಗಿ, ಕಲ್ಲಕಾಳಗಿ ಮಠ, ಚಿತಾಪೂರದ ರಾವೂರ ಮಠ, ಹಿರೇನಂದೂರ ಮಠ, ಚಿತ್ತಾಪೂರ ಕಂಬಳೇಶ್ವರ ಮಠ, ಮಳಖೇಡ ಮಠ, ರಟಕಲ ಹಿರೇಮಠ, ಕಮಲಾಪೂರ ಹಿರೇಮಠ, ಬಬಲಾದಿ ಮಠ, ಗುಲಬರ್ಗಾ ತಾಲೂಕಿನ ಗುಲಬರ್ಗಾ ಹಿರೇಮಠ ನಂದೂರ, ತೋಪನ ಕಟ್ಟಿಮನಿ ಮಠ, ಪುರುಷ ಮಠ, ಸುಲಫಲ ಮಠ, ಮಹಾಜನ ಮಠ, ಆಳಂದ ಹಿರೇಮಠ, ಸರಡಗಿ ಹಿರೇಮಠ, ಚಿಂತನಸೂರ ಹಿರೇಮಠ, ಪಟವಾದಿ ಪಂಚಾಕ್ಷರಿ ಮಠ, ರಾಮಕೋಡ ವಿರಕ್ತ ಮಠ, ಮಹಾಗಾಂವ ಹಿರೇಮಠ ಹೀಗೆ ಗುಲಬರ್ಗಾ ಜಿಲ್ಲೆಯಲ್ಲಿ ಇನ್ನೂ ಅನೇಕ ವೀರಶೈವ ಮಠಗಳು ಲಭ್ಯವಾಗಿವೆ.

ಯಾದಗೀರಿ ತಾಲೂಕಿನಲ್ಲಿ ಗುರುಮಠಕಲ ವಿರಕ್ತ ಮಠವು ತನ್ನದೆಯಾದ ಪರಂಪರೆ ಇದೆ. ಈ ಗ್ರಾಮಕ್ಕೆ ಮೊಟ್ಟಮೊದಲು ನಾರಾಯಣಪೂರ ವೆಂದು ಕರೆಯುತ್ತಿದ್ದರು. ಅಲ್ಲದೆ ಇತ್ತೀಚಿಗೆ ನಾನಾಪುರ

ಎಂದು ಕರೆಯುತ್ತಾರೆ. ವೀರಶೈವರ ಏಳನೂರು ಮನೆಗಳಲ್ಲಿ ಆರವತ್ತಾರು ಮಠಗಳಿದ್ದ ಉಲ್ಲೇಖಗಳಿವೆ. ಶ್ರೀ ಮಠದ ಮೂಲ ಕೃತರಾದ ಲಿಂಗೈಕ್ಯ ಶ್ರೀ ಮ. ನಿ. ಪ್ರ. ಶಾಂತವೀರ ಮಹಾಸ್ವಾಮಿಗಳು ದೇಶ ಸಂಚಾರಕ್ಕೆಂದು ಬಂದ ಈ ಗ್ರಾಮದ ಹೊರವಲಯದಲ್ಲಿ ಒಂದು ದೊಡ್ಡ ಆಲದ ಮರದ ಟೋಕರಿಯಲ್ಲಿ ಅನುಷ್ಠಾನ ಗೈಯುತ್ತಿದ್ದರು. ಈ ಸ್ವಾಮಿಗಳ ಅಗಾಧ ಮಹಿಮರು. ತಪಸ್ವಿಗಳು, ಲೀಲಾಮೂರ್ತಿಗಳಾಗಿ ಲೋಕೋದ್ಧಾರ ಮಾಡಿದ ಕೀರ್ತಿವಂತರು. ಶ್ರೀಗಳು ಮುಟ್ಟಿದ ಕಲ್ಲುಗಳಿಂದ ಈ ಮಠವನ್ನು ನಿರ್ಮಾಣಗೊಂಡಿತ್ತು. ಆಂದ್ದರಿಂದ ಈ ಮಠಕ್ಕೆ ಗುರುಮಠಕಲ "ಗುರು ಮುಟ್ಟಿದ ಕಲ್ಲು" ಎಂದು ಕರೆಯುತ್ತಾರೆ. ಶ್ರೀ ಗುರುಮಠಕಲ್ ಸಂಸ್ಥಾನ ಖಾಸಾಮಠಕ್ಕೆ ಇಲ್ಲಿಯವರೆಗೆ ಒಂಬತ್ತು ಪೀಠಾಧಿಪತಿಗಳು ಸೇವೆಯನ್ನು ಸಲ್ಲಿಸಿದರು.

೧) ಲಿಂ. ಮ. ನಿ. ಪ್ರ. ಶಾಂತವೀರ ಮಹಾಸ್ವಾಮಿಗಳು ಮಠದ ಮೂಲ ಸಂಸ್ಥಾಪಕರು ಇವರು ಧರ್ಮ ಪ್ರಚಾರಕರೆಂದು ಚಿತ್ತಾಪೂರ ತಾಲೂಕಿನ ಬಾಗೇವಾಡಿ ಗ್ರಾಮಕ್ಕೆ ಹೋದಾಗ ಅಲ್ಲಿಯೇ ಸಮಾಧಿಯಾದರು. ೨) ಲಿಂ. ಮ. ನಿ. ಪ್ರ. ಎರಡನೆಯ ಶಾಂತವೀರ ಸ್ವಾಮಿಗಳು ಇವರು ಸಹ ಧರ್ಮ, ತತ್ವಗಳ ಪ್ರಚಾರಕರೆಂದು ಹೋದಾಗ ೧೭೧೪ ರಲ್ಲಿ ಬಾಗೋಡಿ ಗ್ರಾಮದಲ್ಲಿಯೇ ಸಮಾಧಿಯಾದರು. ೩) ಲಿಂ. ಶ್ರೀ ಮ. ನಿ. ಪ್ರ. ಶಿವಪೂಜ್ಯಪ್ಪ ಮಹಾಸ್ವಾಮಿಗಳು ಇವರು ೧೭೫೪ ನಂದನ ನಾಮ ಸಂವತ್ಸರ ಮಾರ್ಗಶೀರ ಶುದ್ಧ ಅಷ್ಟಮಿ ಗುರುವಾರ ದಿವಸ ಗುರುಮಠಕಲ ಶ್ರೀ ಮಠದಲ್ಲಿ ಸಮಾಧಿಯಾದರು. ೪) ಲಿಂ.ಶ್ರೀ ರುದ್ರಪ್ಪ ಮಹಾಸ್ವಾಮಿಗಳು ಇವರು ೧೭೮೨ ರಲ್ಲಿ ರೌದ್ರನಾಮ ಸಂವತ್ಸರ ಅಧಿಕ ಅಶ್ವಿಜ ಬಹಳ ಸಪ್ತಮಿ ಶನಿವಾರ ಮಠದಲ್ಲಿಯೇ ಸಮಾಧಿಯಾದರು. ೫) ಲಿಂ. ಮ. ನಿ. ಪ್ರ ಮಲ್ಲಿಕಾರ್ಜುನ ಸ್ವಾಮಿಗಳು ಇವರು ೧೭೮೩ ರಲ್ಲಿ ದುರ್ಮುಖಿ ನಾಮ ಸಂವತ್ಸರ ಭಾದ್ರಪದ ಶುದ್ಧ ಪೂರ್ಣಿಮೆಯೆಂದು ಬುಧುವಾರ ಸಮಾಧಿಯಾದರು. ೬) ಲಿಂ. ಶ್ರೀ ಮ. ನಿ. ಪ್ರ. ಮುರುಘೇಂದ್ರ ಮಹಾಸ್ವಾಮಿಗಳು ಶ್ರೀ ಮಠದಲ್ಲಿಯೆ ಸಮಾಧಿಸ್ಥರಾದರು. ೭) ಶ್ರೀ ಲಿಂ. ಮ. ನಿ. ಪ್ರ. ಬಸವಣ್ಣಪ್ಪ ಮಹಾಸ್ವಾಮಿಗಳು ಶ್ರೀ ಮಠದಲ್ಲಿಯೇ ಸಮಾಧಿಸ್ಥರಾದರು ೮) ಲಿಂ. ಶ್ರೀ ಮ. ನಿ. ಪ್ರ ಶಾಂತವೀರ ಮಹಾಸ್ವಾಮಿಗಳು ೧೮೮೬ರಲ್ಲಿ ಭಾದ್ರಪದ ಶುಕ್ಲದಂದು ಬುದುವಾರ ದಿವಸ ಸಮಾಧಿಸ್ಥರಾದರು. ೯) ಪೂಜ್ಯ ಶ್ರೀ ಮ.ನಿ. ಪ್ರ. ಸಂಗಮೇಶ್ವರ ಮಹಾಸ್ವಾಮಿಗಳು ೧೩–೫–೬೫ ರಂದು ಅಧಿಕಾರ ಸ್ವೀಕರಿಸಿಕೊಂಡಿದ್ದಾರೆ. ಅವರು ಮುಪ್ಪಿನಾವಸ್ಥೆಯ ಸಂದರ್ಭದಲ್ಲಿ ಅಂದರೆ ಇತ್ತೀಚಿಗೆ ಫೆಬ್ರುವರಿ ೨೨—೨೦೦೨ ರಂದು ಶ್ರೀ ಶಾಂತವೀರ ಗುರು ಮುರುಘರಾಜೇಂದ್ರ ಸ್ವಾಮಿಗಳ ಅಧಿಕಾರ ಸ್ವೀಕರಿಸಿದ್ದಾರೆ. ಇವರು ಮೊದಲಿನ ಹೆಸರು ಸಿದ್ಧಲಿಂಗಯ್ಯ

ಸ್ವಾಮಿ ಎಂ.ಸಿ. ದಾವಣಗೇರೆ ಜಿಲ್ಲೆ ಚನ್ನಗೀರಿ ತಾಲೂಕ ತೊಪನಹಳ್ಳಿಯಲ್ಲಿ ಚನ್ನಬಸವಯ್ಯ ರತ್ನಮ್ಮಾ ಎಂಬ ಶರಣ ದಂಪತಿಗಳಿಂದ ೨. ೬ . ೧೯೭೪ ರಂದು ಜನಿಸಿದರು. ಈ ನಾಡಿನಲ್ಲಿ ಬಂದು ನೆಲೆಸಿದ್ದಾರೆ.

ಶ್ರೀಗಳಿವರು ಬಾಲ್ಯದಿಂದಲೇ ಮನೆ ತ್ಯಜಿಸಿ ಚಿತ್ರದುರ್ಗ ಶ್ರೀ ಮರುಘರಾಜೇಂದ್ರ ಮಹಾಸ್ವಾಮಿಗಳ ಶಿಷ್ಯರಾದರು. ಅವರ ಬಸವತತ್ವ ಮಹಾವಿದ್ಯಾಲಯದಲ್ಲಿ ಸಮಗ್ರ ವಚನ ಸಾಹಿತ್ಯ ಅಧ್ಯಯನ ಮಾಡಿದ್ದಾರೆ. ಚಿಂತನ ಶೀಲ ಬಸವತತ್ವ ಅನುಯಾಯಿ, ಸಾಮಾಜಿಕ ಚಿಂತನೆಯುಳ್ಳವರಾಗಿದ್ದಾರೆ.

## ೩. ರಾಯಚೂರು

### ೩. ೧. ಮಸ್ಕಿ ಗಚ್ಚಿನ ಮಠ

ಲಿಂಗಸೂರು ತಾಲೂಕಿನಲ್ಲಿ ಬರುವ ಮಸ್ಕಿ ಗ್ರಾಮದ ಗಚ್ಚಿನ ಹಿರೇಮಠವು ಒಂದು. ಉಜ್ಜಯನಿ ಪೀಠದ ಶಾಖಾ ಮಠವಾಗಿರುವ ಈ ಮಠವು ಪುತ್ರ ವರ್ಗದ ಪರಂಪರೆಯಲ್ಲಿ ಬೆಳೆದು ಬಂದಿದೆ. ಶ್ರೀ ರುದ್ರಸ್ವಾಮಿಗಳು ೧೩ನೇ ಶತಮಾನದಲ್ಲಿ ಮನೆಯನ್ನು ತ್ಯಾಗ ಮಾಡಿ ಶ್ರೀಶೈಲದಲ್ಲಿ ಅನುಷ್ಠಾನ ಕೈಗೊಂಡು, ಲೋಕ ಸಂಚಾರದಿಂದ ಧರ್ಮದ ಪ್ರಚಾರ ಮಾಡುತ್ತ ಈ ಗ್ರಾಮಕ್ಕೆ ಸೇರಿದರೆಂಬ ಉಲ್ಲೇಖಗಳಿವೆ. ಗ್ರಾಮದ ಹೊರವಲಯದಲ್ಲಿ ಶ್ರೀಗಳು ಅನುಷ್ಠಾನ ಕುಳಿತುಕೊಂಡರು. ಗ್ರಾಮದ ಭಕ್ತರು ಶ್ರೀಗಳನ್ನು ಕಂಡು ಗೌರವದಿಂದ ಊರಲ್ಲಿ ಬರಲು ಒತ್ತಾಯಿಸಿದರು. ಗುರುಗಳು ಒಪ್ಪಿಕೊಂಡರು ಆ ಗ್ರಾಮದ ಭಕ್ತರೆಲ್ಲ ಕೂಡಿ ಧನಸಹಾಯ ಸಂಗ್ರಹ ಮಾಡಿ ಒಂದು ಮಠವನ್ನು ಸ್ಥಾಪನೆ ಮಾಡಿದರೆಂದು ತಿಳಿದು ಬರುತ್ತದೆ. ಒಳ್ಳೆಯ ರೀತಿಯಿಂದ ಕಟ್ಟಿದ ಈ ಮಠಕ್ಕೆ ಗಚ್ಚಿನ ಮಠ ವೆಂದು ಕರೆಯುತ್ತಾರೆ. ಶ್ರೀ ಮಠದಲ್ಲಿ ಶ್ರೀ ಶೈಲ ಮಲ್ಲಿಕಾರ್ಜುನ ದೇವರ ವಿಗ್ರಹಕ್ಕೆ ಪೂಜೆ ಸಲ್ಲಿಸುತ್ತಾರೆ. ಧಾರ್ಮಿಕ ಕಾರ್ಯಚಟುವಟಿಕೆಗಳು ಶಿವಾನುಭವ ಗೋಷ್ಠಿಗಳು ನಡೆಸಿಕೊಂಡು ಬರುತ್ತಾರೆ. ಶ್ರೀಮಠದಲ್ಲಿ ಸುಮಾರು ಎಂಟು ಮಠಾಧಿಪತಿಗಳು ಅಧಿಕಾರ ವಹಿಸಿದರೆಂದು ತಿಳಿದು ಬಂದಿದೆ. ಅವರೆಲ್ಲರ ಹೆಸರುಗಳು ಶ್ರೀ ರುದ್ರ ಸ್ವಾಮಿ ಶಿವಚಾರ್ಯರೆಂದು ಹೆಸರಿಸಲಾಗಿದೆ. ಪ್ರಸ್ತುತ ಮಠದ ಪರಂಪರೆ ಈ ಕೆಳಗಿನಂತಿದೆ.

೧) ಶ್ರೀ ಷ. ಬ್ರ. ರುದ್ರಸ್ವಾಮಿ ಶಿವಾಚಾರ್ಯ ಸ್ವಾಮಿಗಳು
೨) ಶ್ರೀ ಷ. ಬ್ರ. ಗಂಗಾಧರ ಶಿವಾಚಾರ್ಯ ಸ್ವಾಮಿಗಳು
೩) ಶ್ರೀ ಷ. ಬ್ರ. ಸಿದ್ದಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು
೪) ಶ್ರೀ ಷ. ಬ್ರ. ಮುರುಘೇಂದ್ರ ಶಿವಚಾರ್ಯ ಸ್ವಾಮಿಗಳು
೫) ಶ್ರೀ ಷ. ಬ್ರ. ರುದ್ರದೇವ ಶಿವಾಚಾರ್ಯ ಸ್ವಾಮಿಗಳು, (ಸದ್ಯದವರು)

೩.೨. ದೇವರ ಭೂಪೂರ ಹಿರೇಮಠ

ಲಿಂಗಸೂರು ತಾಲೂಕಿನಲ್ಲಿ ಬರುವ ದೇವರ ಭೂಪೂರ ಗ್ರಾಮದ ಹಿರೇಮಠವು ಈ ಭಾಗದಲ್ಲಿ ಹೆಚ್ಚು ಪ್ರಖ್ಯಾತಿ ಪಡೆದಿದೆ. ಈ ಗ್ರಾಮದಲ್ಲಿಯೇ ಅಮರೇಶ್ವರ ದೇವಸ್ಥಾನವು ಧಾರ್ಮಿಕ ಕೇಂದ್ರವಾಗಿ ಕಂಗೊಳಿಸುತ್ತಿದೆ. ಗ್ರಾಮದ ಹೊರವಲಯದಲ್ಲಿ ಈ ಹಿರೇಮಠವು ಬೆಳೆದು ನಿಂತಿದೆ. ಶ್ರೀ ಉಜ್ಜಯನಿ ಪೀಠದ ಶಾಖಾ ಮಠವೇ ಈ ಬೃಹನ್ಮ ಮಠವೆಂದು ತಿಳಿದು ಬಂದಿದೆ. ಧಾರ್ಮಿಕ, ಸಾಮಾಜಿಕ, ಹಾಗೂ ಸಾಂಸ್ಕೃತಿಕ, ಅನೇಕ ಕಾರ್ಯ ಚಟುವಟಿಕೆಗಳನ್ನು ನಡೆಸಿಕೊಂಡು ಬಂದು ಜನರಲ್ಲಿ ಜಾಗೃತಿಯನ್ನುಂಟು ಮಾಡಿದ ಮಠ ವೆಂದೇ ಬಿರುದು ಪಡೆದುಕೊಂಡಿದೆ. ಈ ಮಠವು ಸುಮಾರು ಹತ್ತನೆಯ ಶತಮಾನದಲ್ಲಿ ಸ್ಥಾಪನೆಯಾಗಿರಬಹುದೆಂಬ ಅಭಿಪ್ರಾಯಗಳಿವೆ. ಹುಬ್ಬಳಿ ಶ್ರೀ ಸಿದ್ದಾರೂಢ ಮಠದ ಸಂಸ್ಥಾಪಕರಾದ ಶ್ರೀ ಸಿದ್ಧಾರೂಢ ಮಹಾಸ್ವಾಮಿಗಳು ಈ ಮಠದಲ್ಲಿ ಕೆಲವು ಕಾಲ ತಂಗಿದರೆಂಬ ಉಲ್ಲೇಖಗಳಿವೆ. ಶ್ರೀ ಕಲಬುರ್ಗಿ ಶ್ರೀ ಶರಣ ಬಸವೇಶ್ವರ ಮನೆಯ ಗುರುಗಳು ಈ ಮಠದವರಾಗಿದ್ದರು. ಆದ್ದರಿಂದಲೇ ಶ್ರೀ ಶರಣ ಬಸಪ್ಪನವರ ಜಾವಳವನ್ನು ಈ ಮಠದಲ್ಲಿಯೇ ತೆಗೆದರೆಂಬುದು ಪುರಾಣದಲ್ಲಿ ದಾಖಲಾಗಿದೆ. ಹೀಗೆ ಹಲವಾರು ರೀತಿಯಿಂದ ನೋಡಿದಾಗ ಈ ಮಠವು ಮೊದಲಿನಿಂದಲೂ ಪ್ರಸಿದ್ಧಿಯೊಂದಿಗೆ ಬೆಳೆಯುತ್ತಿದೆ ಎಂದು ತಿಳಿದು ಬರುತ್ತಿದೆ. ಈ ಮಠದ ವಂಶಾವಳಿ ದೊರೆತ ಆಧಾರದಂತೆ ಮುಂದಿನಂತೆ ಉಲ್ಲೇಖಿಸಲಾಗಿದೆ.

ವಂಶಾವಳಿ

೧) ಲಿಂಗೈಕ್ಯ ಶ್ರೀ ಅಮರೇಶ್ವರ ಮಹಾಸ್ವಾಮಿಗಳು (ಮೂಲ ಸಂಸ್ಥಾಪಕರು )

೨) ಶ್ರೀ.ಷ.ಬ್ರ. ಶಾಂತ ವೀರ ಶಿವಾಚಾರ್ಯ ಸ್ವಾಮಿಗಳು

೩) ಶ್ರೀ ಷ. ಬ್ರ. ಮಳೆ ಶಾಂತವೀರ ಶಿವಾಚಾರ್ಯ ಸ್ವಾಮಿಗಳು

೪) ಶ್ರೀ ಷ. ಬ್ರ. ಶಿವಮೂರ್ತಿ ಶಿವಾಚಾರ್ಯ ಸ್ವಾಮಿಗಳು

೫) ಶ್ರೀ ಷ. ಬ್ರ. ಎರಡನೆಯ ಶಾಂತವೀರ ಶಿವಾಚಾರ್ಯ ಸ್ವಾಮಿಗಳು.

೬) ಶ್ರೀ ಷ.ಬ್ರ. ರುದ್ರಸ್ವಾಮಿ ಶಿವಾಚಾರ್ಯ ಸ್ವಾಮಿಗಳು

೭) ಶ್ರೀ ಷ. ಬ್ರ. ಗುರುಲಿಂಗ ಶಿವಾಚಾರ್ಯ ಸ್ವಾಮಿಗಳು

೮) ಶ್ರೀ ಷ. ಬ್ರ.ಗಜದಂಡ ಶಿವಾಚಾರ್ಯ ಮಹಾಸ್ವಾಮಿಗಳು

೯) ಶ್ರೀ ಷ. ಬ್ರ. ಎರಡನೆಯ ಗಜದಂಡ ಶಿವಾಚಾರ್ಯ ಮಹಾಸ್ವಾಮಿಗಳು.

೧೦) ಶ್ರೀ ಷ. ಬ್ರ. ಮೂರನೆಯ ಗಜದಂಡ ಶಿವಾಚಾರ್ಯ ಸ್ವಾಮಿಗಳು (ನೂತನ ಪಿಠಾಧಿಪತಿಗಳು)

## ೩.೩. ಲಿಂಗಸೂರು ಮಹಾಂತೇಶ್ವರ ಮಠ

ಲಿಂಗಸೂರು ಮತ್ತು ಕಸಬಾ ಲಿಂಗಸೂರು ಎಂದು ಕರೆಯುತ್ತಾರೆ. ತಾಲೂಕ ಲಿಂಗಸೂರು ಹೃದಯ ಭಾಗದಲ್ಲಿ ಶ್ರೀ ವಿಜಯ ಮಹಾಂತೇಶ್ವರ ಮಠ ಇತ್ತೀಚಿಗೆ ಸ್ಥಾಪನೆಗೊಂಡಿದೆ. ಇಳಕಲ್ಲ ಶ್ರೀ ವಿಜಯ ಮಹಾಂತೇಶ್ವರ ಸ್ವಾಮಿಗಳ ಅಮೃತ ಹಸ್ತದಿಂದ ಈ ಮಠವು ಸ್ಥಾಪನೆಗೊಂಡಿದೆ. ಕೆಲವು ವರ್ಷಗಳ ಕಾಲ ಈ ಮಠವು ವ್ಯವಸ್ಥಿತ ರೀತಿಯಲ್ಲಿ ನಡೆಯುತ್ತಿತ್ತು. ಧಾರ್ಮಿಕ ಪ್ರಗತಿಯತ್ತ ಗಮನ ಸೆಳೆಯುತ್ತಿತ್ತು. ಕಾಲಾನುಕ್ರಮವಾಗಿ ಈ ಮಠದ ಗುರುಗಳಿಗೆ, ಹಾಗೂ ಗ್ರಾಮದ ಭಕ್ತರಲ್ಲಿ ಭೇದವನ್ನುಂಟಾಯಿತ್ತು. ಭಕ್ತರು ಶ್ರೀ ವಿಜಯ ಮಹಾಂತೇಶ್ವರ ಸ್ವಾಮಿಗಳಿಗೆ ಮಠಕ್ಕೆ ಬರಲು ಅವಕಾಶ ಕೊಡಲಿಲ್ಲ. ಆ ಮಠದಲ್ಲಿ "ಈಶ್ವರ" ದೇವಾಲಯವನ್ನು ನಿರ್ಮಾಣ ಮಾಡಿದ್ದಾರೆ. ಭಕ್ತರು ಪ್ರತಿ ದಿವಸ ಬಂದು ಈಶ್ವರ ದೇವಸ್ಥಾನಕ್ಕೆ ದರ್ಶನ ಪಡೆಯುತ್ತಿದ್ದಾರೆ.

ಗ್ರಾಮದ ಕೆಲವು ಭಕ್ತರು ಶ್ರೀ ವಿಜಯ ಮಹಾಂತೇಶ್ವರ ಸ್ವಾಮಿಗಳಿಗೆ ಹೊರಡಲು ಬಿಡಲಿಲ್ಲ. ಗ್ರಾಮದ ಹೊರವಲಯದಲ್ಲಿ ಮಠವನ್ನು ಸ್ಥಾಪಿಸಲು ಶರಣಪ್ಪ ಸಕ್ರಿ ವೀರಬಸಪ್ಪಾ ಹುಲಕಡ್ಲಿ, ಕೆ. ಶರಣಪ ಮತ್ತು ಕಾಡಪ್ಪಾ ಸಾಹುಕಾರ....... ಮುಂತಾದವರು ಒತ್ತಾಯಿಸುತ್ತಿದ್ದರು. ಶರಣಪ್ಪ ಸಕ್ರಿ ಲಿಂಗಸೂರು ಇವರು ಎರಡು ಎಕರೆ ೮ ಗುಂಟೆ ಭೂಮಿಯನ್ನು ಶ್ರೀಗಳಿಗೆ ಧಾನವಾಗಿ ನೀಡಿದರು. ಶ್ರೀಗಳು ಆ ಸ್ಥಳದಲ್ಲಿ ಮಠವನ್ನು ಸ್ಥಾಪಿಸಿ ಸುಮಾರು ಏಳು ವರ್ಷಗಳ ಕಾಲ ಗತಿಸಿತ್ತು. ಪ್ರತಿ ಅಮವಾಸೆ ನಂತರ ಐದನೆ ದಿವಸಕ್ಕೆ ಶಿವಾನುಭವಗೊಷ್ಠಿ ನಡೆಯುತ್ತದೆ. ಪಂಚಮಿ ಮಾಸದಲ್ಲಿ ಸತತ ಒಂದು ತಿಂಗಳವರೆಗೆ ಕಾಲ ಪುರಾಣ ನಡೆಯುತ್ತದೆ.

ಸ್ವಾಮಿಜಿಯವರಲ್ಲಿ ಹಾಗೂ ಗ್ರಾಮಸ್ಥರಲ್ಲಿ ವೈಮನಸ್ಸು ಹುಟ್ಟಲು ಕಾರಣವೆನೆಂದರೆ ಶ್ರೀ ವಿಜಯ ಮಹಾಂತೇಶ್ವರ ಮ॥ಸ್ವಾಮಿಗಳು ಪ್ರತಿ ದಿವಸ ಮಠದಲ್ಲಿ ಇರುತ್ತಿರಲಿಲ್ಲ, ಇಳಕಲ ಮಠದಲ್ಲಿಯೇ ಹೆಚ್ಚಾಗಿ ಇರುತ್ತಿದ್ದರು. ಕೇವಲ ಆದಾಯ ತೆಗೆದುಕೊಳ್ಳುವುದಕ್ಕೆ ಮಾತ್ರ ಬರುತ್ತಿದ್ದರೆಂಬ ಭಕ್ತ ಗ್ರಾಮಸ್ಥರ ನಿಲುವಾಗಿತ್ತು. ಇದರಿಂದ ಈ ಸ್ವಾಮಿಗಳಿಂದ ಗ್ರಾಮದ ಭಕ್ತರಿಗೆ ಯಾವುದೇ ಅನುಕೂಲ ದೊರೆಯದಂತಾಗಿದೆ ಎಂದು ರೋಷದಿಂದ ಗ್ರಾಮಸ್ಥರು ಈ ಘಟನೆಗೆ ಕಾರಣವಾಯಿತೆಂದು ತಿಳಿಸಿದ್ದಾರೆ. ಅಂದ ಹಾಗೆ ಶ್ರೀ ವಿಜಯ ಮಹಾಂತೇಶ್ವರ ಮಹಾಸ್ವಾಮಿಗಳು ಲಿಂಗಸೂರು ಮಠದಲ್ಲಿ ದೊರೆಯುವುದಿಲ್ಲ

ಹೊಸದಾಗಿ ಸ್ಥಾಪನೆಯಾದ ಮಠಕ್ಕೆ ಪ್ರತಿ ತಿಂಗಳಿಗೊಮ್ಮೆ ಮಾತ್ರ ಬಂದು ಮರುದಿವಸ ಮರಳಿ ಹೋಗುತ್ತಾರೆ.

### ೩.೪. ಶ್ರೀ ತೋಂಟದಾರ್ಯ ಮಠ

ಕಸಬಾ ಲಿಂಗಸೂರು ಗ್ರಾಮದಲ್ಲಿ ಶ್ರೀತೋಂಟದಾರ್ಯ ಮಠವು ಪ್ರಾಚೀನ ಮಠಗಳಲ್ಲೊಂದಾಗಿದೆ. ಈ ಮಠವು ಗದಗ, ಡಂಬಳ ಮಠದ ಶಾಖಾ ಮಠವಾಗಿ ಬೆಳೆದು ನಿಂತಿದೆ. ಧಾರ್ಮಿಕ ಸಾಮಾಜಿಕ ಕಾರ್ಯ ಚಟುವಟಿಕೆಗಳನ್ನು ಗದುಗಿನ ಶ್ರೀ ತೋಂಟದಾರ್ಯ ಮಠದ ಪೀಠಾಧ್ಯಕ್ಷರೇ ನಡೆಸಿಕೊಂಡು ಬರುತ್ತಾರೆ. ಶ್ರೀ ಮಠವು ಇತ್ತೀಚೆಗೆ ಶೈಕ್ಷಣಿಕ ಸೇವೆಯತ್ತ ಗಮನ ಸೆಳೆಯುತ್ತಿದೆ. ತಿಂಗಳಿಗೆ ಒಂದೆರಡು ಸಲ ಬಂದು ಭಕ್ತರಿಗೆ ದರ್ಶನ ಕೊಡುತ್ತಿರೆಂದು ತಿಳಿದು ಬಂದಿದೆ.

### ೩.೫. ಗರುಗುಂಟ ಹಿರೇಮಠ

ಲಿಂಗಸೂರು ತಾಲೂಕಿನಲ್ಲಿ ಬರುವ ಗುರುಗುಂಟ ಹಿರೇಮಠವು ಬಹಳ ಪ್ರಾಚೀನ ಮಠವೆಂದು ಪ್ರಖ್ಯಾತಿ ಪಡೆದಿದೆ. ಈ ಮಠಕ್ಕೆ ಶ್ರೀ ''ತೋಪಿನ ಕಟ್ಟೆ ಸಂಸ್ಥಾನ ಮಠ'' ವೆಂದು ಸಹ ಕರೆಯುತ್ತಾರೆ. ಅಲ್ಲದೆ '' ಚರಮೂರ್ತೇಶ್ವರ ಮಠ'' ವೆಂದು ಸಹ ಕರೆಯುತ್ತಾರೆ. ಶ್ರೀ ಶೈಲ ಪೀಠದ ಶಾಖಾ ಈ ಮಠವು ಪ್ರಗತಿಯತ ಸಾಗಿಸುತ್ತಿದೆ. ಧಾರ್ಮಿಕ ಪರಿಸರದಲ್ಲೆ ಹುಟ್ಟಿಕೊಂಡಿರುವ ಈ ಮಠವು ಅನೇಕ ಸಾಮಾಜಿಕ ಹಾಗೂ ಸಾಂಸ್ಕೃತಿಕ ಕಾರ್ಯಚಟುವಟಿಕೆಗಳಿಗೆ ಪ್ರಸಿದ್ದಿ ಪಡೆದುಕೊಂಡಿರುತ್ತದೆ. ಶ್ರೀ ವೀರೂಪಾಕ್ಷ ಶಿವಾಚಾರ್ಯ ಮಹಾಸ್ವಾಮಿಗಳು ಲೋಕ ಸಂಚಾರ ಕೈಗೊಂಡು ಗ್ರಾಮದ ಹೋರವಲಯದಲ್ಲಿ, ಗುಡ್ಡಗಾಡು ಪ್ರದೇಶದಲ್ಲಿ ಅನುಷ್ಠಾನ ಕೈಗೊಂಡಾಗ ಭಕ್ತರು ಇವರನ್ನು ನೋಡಿ ಗ್ರಾಮಕ್ಕೆ ಕರೆದುಕೊಂಡು ಬಂದು ಒಂದು ಮಠವನ್ನು ಕಟ್ಟಿಸಿಕೊಟ್ಟರು. ಅಂದಿನಿಂದ ಶ್ರೀ ವಿರೂಪಾಕ್ಷ ಸ್ವಾಮಿಗಳು ಶ್ರೀ ಮಠದಲ್ಲಿಯೇ ಪಾಠ ಪ್ರವಚನವನ್ನು ಹಮ್ಮಿಕೊಂಡು ಭಕ್ತರ ಮನಸ್ಸನ್ನು ಸೂರೆಗೊಳಿಸುತ್ತಿದ್ದರು. ಈ ಮಠದಲ್ಲಿ ಸುಮಾರು ಐದು ಜನರು ಪೀಠಾಧಿ ಪತಿಯಾಗಿ ಅಧಿಕಾರವನ್ನು ಸ್ವೀಕರಿಸಿದ್ದಾರೆ.

ವಂಶಾವಳಿ

೧) ಶ್ರೀ ಷ. ಬ್ರ. ವೀರೂಪಾಕ್ಷ ಶಿವಾಚಾರ್ಯ ಸ್ವಾಮಿಗಳು

೨) ಶ್ರೀ ಷ. ಬ್ರ.ಮರಿ ಸ್ವಾಮಿಗಳು ಶಿವಾಚಾರ್ಯ ಸ್ವಾಮಿಗಳು

೩)  ಶ್ರೀ ಷ. ಬ್ರ. ಮಹಾಂತ ಶಿವಚಾರ್ಯ ಮಹಾಸ್ವಾಮಿಗಳು

೪)  ಷ. ಬ್ರ. ಶ್ರೀ ವೀರೂಪಾಕ್ಷ ಶಿವಚಾರ್ಯ ಸ್ವಾಮಿಗಳು

೫)  ಶ್ರೀ ಷ. ಬ್ರ. ಸದಾನಂದ ಶಿವಚಾರ್ಯ ಸ್ವಾಮಿಗಳು

ಹೀಗೆ ಐದು ಸ್ವಾಮಿಗಳು ಅಧಿಕಾರವನ್ನು ನಡೆಸಿದ್ದಾರೆ. ನಾಲ್ಕನೆಯ ಪೀಠಾಧಿಪತಿಯಾದ ಶ್ರೀ ಷ. ಬ್ರ. ವೀರೂಪಾಕ್ಷ ಶಿವಚಾರ್ಯ ಸ್ವಾಮಿಗಳು ಲಿಂಗೈಕ್ಯರಾದ ನಂತರ ಶ್ರೀ ಮಠವು ಇಪ್ಪತ್ತೈದು ವರ್ಷಗಳ ಕಾಲ ಖಾಲಿ ಉಳಿದಿತ್ತು. ಅಂದರೆ ಶ್ರೀ ಮಠಕ್ಕೆ ವಾರಸುದಾರರಿರಲಿಲ್ಲ. ಮಠಾಧಿಪತಿಗಳಿರಲಿಲ್ಲವೆಂದು ತಿಳಿದು ಬರತ್ತದೆ. ಅವರ ನಂತರ ೧೯೯೭ ಫೆಬ್ರುವರಿಯಲ್ಲಿ ಶ್ರೀ ಷ. ಬ್ರ. ಸದಾನಂದ ಶಿವಚಾರ್ಯ ಸ್ವಾಮಿಗಳಿಗೆ ಪಟ್ಟಾಧಿಕಾರವನ್ನು ವಹಿಸಿಕೊಟ್ಟರು. ನೂತನ ಶ್ರೀಗಳು ಧಾರ್ಮಿಕ ಹಾಗೂ ಸಾಮಾಜಿಕ ಕಾರ್ಯ ಚಟುವಟಿಕೆಗಳನ್ನು ಸತತವಾಗಿ ನಡೆಸಿಕೊಂಡು ಬರುತ್ತಿದ್ದಾರೆ.

ಶ್ರೀ ಮಠವು ಹಿಂದೆ ತಿಪ್ಪರಾಜನಾಯಕ ದೊರೆಯ ಕಾಲದಲ್ಲಿ ಪ್ರಸಿದ್ಧಿಗೆ ಪಾತ್ರವಾಗಿ ಬೆಳೆಯತೊಡಗಿತ್ತು. ತಿಪ್ಪರಾಜನಾಯಕನವರು ಈ ಭಾಗದಲ್ಲಿ ಹೆಚ್ಚು ಪ್ರತಿಷ್ಠೆಯನ್ನು ಗಳಿಸಿದವರು. ಧಾರ್ಮಿಕತೆಯ ಬಗ್ಗೆ ತುಂಬಾ ಅಭಿಮಾನ ಉಳ್ಳವರಾಗಿದ್ದರು. ಅವರು ಶ್ರೀಮಠಕ್ಕೆ ಸುಮಾರು ಐವತ್ತು ಎಕ್ಕರೆ ಭೂಮಿಯನ್ನು ಉಂಬಳಿಯಾಗಿ ನೀಡಿದರು. ಅದರಲ್ಲಿ ಈಗ ಹದಿನೈದು ಎಕ್ಕರೆ ಮಾತ್ರ ಭೂಮಿಯನ್ನು ಉಳಿದುಕೊಂಡಿದೆ ಎಂದು ಮೂಲಗಳಿಂದ ತಿಳಿದುಬಂದಿದೆ. ಮಧ್ಯ ಬಂದ ಮಠಾಧೀಶರೇ ಈ ಭೂಮಿಯನ್ನು ಮಾರಟ ಮಾಡಿರಬಹುದು. ನೂತನ ಶ್ರೀಗಳಾದ ಷ. ಬ್ರ. ಸದಾನಂದ ಶಿವಾಚಾರ್ಯ ಮಹಾಸ್ವಾಮಿಗಳು ಮಠದಲ್ಲಿ ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕಾರ್ಯಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ಪೂರ್ವ ಮಠಾಧಿಪತಿಗಳ ಗದ್ದುಗೆಯನ್ನು ಕಟ್ಟಿಸಿ ಅದಕ್ಕೆ ನಿತ್ಯ ಪೂಜೆಯನ್ನು ಸಲ್ಲಿಸುತ್ತಾರೆ. ಕಾರ್ತಿಕ ಮಾಸದಲ್ಲಿ ಪುರಾಣ ಪ್ರವಚನವನ್ನು ಹಮ್ಮಿಕೊಳ್ಳುತ್ತಾರೆ. ಶ್ರಾವಣ ಮಾಸದಲ್ಲಿ ಶರಣ ಶರಣೆಯರ ಪ್ರವಚನಗಳನ್ನು ನಡೆಸುತ್ತಾರೆ.

ಇದೇ ಗ್ರಾಮದ ಕೋಟೆಯ ಒಳಭಾಗದಲ್ಲಿ ಕಲ್ಲು ಗುಡ್ಡದ ಮೇಲೆ ಒಂದು ವಿರಕ್ತ ಸಂಪ್ರದಾಯದ ಮಠ ಸ್ಥಾಪನೆಯಾಗಿದೆ. ಈ ಮಠವು ರಾಜಗುರು ಮಹಾಸ್ವಾಮಿಗಳು ಸ್ಥಾಪಿಸಿರಬಹುದೆಂದು ತಿಳಿದುಬಂದಿದೆ. ಇವರ ತರುವಾಯ ಸುಮಾರು ಐವತ್ತು ವರ್ಷಗಳ ಕಾಲ ಮಠವು ಮಠಾಧೀಶರಿಲ್ಲದೆ ಖಾಲಿ ಉಳಿದಿತ್ತು. ಶ್ರೀಮಠದ ಆವರಣದಲ್ಲಿ ಆರು ಗದ್ದುಗೆಗಳು ಕಂಡುಬರುತ್ತವೆ. ಆದರೆ ಮಠಾಧೀಶರ ಹೆಸರು ಪತ್ತೆಯಾಗಿಲ್ಲ.

ಇಂದು ಈ ಮಠದ ನೂತನ ಪೀಠಾಧಿಪತಿಯಾಗಿ ಶ್ರೀ ಮ. ನಿ. ಪ್ರ. ರುದ್ರಸ್ವಾಮಿ ಎಂಬುವವರ ನೇತ್ರುತ್ವದಲ್ಲಿ ಮಠವು ಅಭಿವೃದ್ಧಿ ಪಡೆಯುತ್ತಿದೆ.

೩. ೬. ಜಾಲಹಳ್ಳಿ ಹಿರೇಮಠ

ದೇವದುರ್ಗ ತಾಲೂಕಿನಲ್ಲಿ ಬರುವ ಜಾಲಹಳ್ಳಿ ಗ್ರಾಮದ ಹಿರೇಮಠ ಪ್ರಾಚೀನತೆಯ ಇತಿಹಾಸವುಳ್ಳ ಮಠವಾಗಿದೆ. ಈ ಗ್ರಾಮದ ಸುತ್ತ ಮುತ್ತ ಜಾಲಿ ಮರಗಳಿಂದ ಹಬ್ಬಿರುವುದರಿಂದ ಈ ಗ್ರಾಮಕ್ಕೆ ಜಾಲಿಹಳ್ಳಿ ಎಂದು ಕರೆಯುವ ವಾಡಿಕೆ ಇದೆ. ಜಾಲಹಳ್ಳಿಯೇ ರೂಪಾಂತರಗೊಂಡು ಜಾಲಹಳ್ಳಿ ಎಂದಾಗಿರುವುದು ಇತ್ತಿಚೀನ ಸಂಗತಿಯಾಗಿದೆ. ಸುಮಾರು ಆರನೇ ಶತಮಾನದಲ್ಲಿ ದೇಶವರ್ಮನೆಂಬ ರಾಜನ ಆಳ್ವಿಕೆಗೆ ಈ ಗ್ರಾಮವು ಒಳಪಟ್ಟಿತ್ತೆಂದು ಉಲ್ಲೇಖಗಳಿಂದ ತಿಳಿದು ಬರುತ್ತದೆ. ಈ ರಾಜನ ಆಳ್ವಿಕೆಯಲ್ಲಿ ಈ ಸಂಸ್ಥಾನ ಮಠವು ಸ್ಥಾಪನೆಗೊಂಡಿದೆಯೆಂಬ ಊಹೆ. ಶ್ರೀ ಜಗದಾರಾಧ್ಯ ವಿಶ್ವಮಾನ್ಯ ಪೂಜಾಭಿನವ ಮಲಯ ಜಯಶಾಂತ ಲಿಂಗೇಶ್ವರ ಮಹಾಸ್ವಾಮಿಗಳವರಿಂದ ಶ್ರೀ ಮಠವು ಸ್ಥಾಪನೆಯಾಗಿದೆಯೆಂದು ತಿಳಿದು ಬಂದಿದೆ. ಈ ಮಠವು ಸ್ಥಾಪನೆಯಾದ ಐತಿಹಾಸಿಕ ಪುರಾವೆಗಳಿಂದ ದೊರೆಯುತ್ತವೆ.

ದಂತಕತೆ

ಅಂದಿನ ಕಾಲದಲ್ಲಿ ಈ ಗ್ರಾಮವನ್ನಾಳುತ್ತಿದ್ದ ದೇಶವರ್ಮ ಅರಸನ ಹಸುಗಳು ಗುಡ್ಡಬೆಟ್ಟಗಳ ಪರ್ವತಗಳ ಮಧ್ಯ ಮೆಯಲು ಹೋಗುತ್ತಿದ್ದವು. ಪ್ರತಿದಿವಸ ಹಾಲು ಕೊಡುವ ಹಸುಗಳೆಲ್ಲ ಹಾಲು ಕೊಡುತ್ತಿದವಂತೆ, ಆದರಲ್ಲಿ ಒಂದು ಹಸು ಹಾಲು ಕೊಡುತ್ತಿರಲಿಲ್ಲ. ಅದರ ಕೋರಳಿನಲ್ಲಿ ಅದು ಕೊಡುವ ಹಾಲಿನ ಮೂಲ್ಯ ಕಟ್ಟಿರುತ್ತಿದ್ದನ್ನು ಅರಸ ನೋಡಿದನು. ಗೋವುಗಳನ್ನು ಕಾಯುವ ಶಂಕರ ನೆಂಬುವವನಿಗೆ ಹಸುಗಳ ಮೇಲೆ ನೀಗಾ ಇಡುವಂತೆ ಪ್ರೇರೆಪಿಸಿದನು. ಶಂಕರನು ಮರುದಿವಸ ಹಸುಗಳ ಹಿಂದೆ ಹಿಂದೆ ನಡೆದನು. ಹಸುಗೆಳಲ್ಲ ಗುಡ್ಡ ಪರ್ವತದಲ್ಲಿ ಮೇಯತೋಡಗಿದವು. ಅದರಲ್ಲಿ ಒಂದು ಹಸು ಪರ್ವತದ ಗವಿಯ ಕಡೆ ಹೊರಟಿತು. ಅದನ್ನು ಶಂಕರ ಗಮನಿಸುತ್ತಲೆ ಇದ್ದನು. ಹಸು ಗವಿಯ ಮುಂದೆ ನಿಂತ ಮೇಲೆ ಗವಿಯೊಳಗಿನಿಂದ ಒಂದು ಹುಲಿ ಬಂದು ನಿಂತಿತು. ಶಂಕರ ಒಂದು ಪೋದರಿನಲ್ಲಿ ನಿಂತು ಧೈರ್ಯದಿಂದ ಗಮನಿಸುತಿದ್ದನು. ಕೆಲವೇ ನಿಮಿಷಗಳಲ್ಲಿ ದೊಡ್ಡದಾದ ಸರ್ಪವೊಂದು ಬಂದು ಹಸುವಿನ ಮೋಲೆಗೆ ಬಾಹಿ

ಹಚ್ಚಿ ಹಾಲು ಕುಡಿಯತೊಡಗಿತ್ತು. ಇದನ್ನೆಲ್ಲ ಶಂಕರ ಧೈರ್ಯದಿಂದ ಗಮನಿಸುತ್ತಿದ್ದ, ಇನ್ನು ಮುಂದೇನು ನಡೆಯುತ್ತದೆಂದು ಆತುರ ಅಂಜಿಕೆಗಳ ಮಧ್ಯದಲ್ಲಿದ್ದನು. ಸರ್ಪ ಹಾಲು ಕುಡಿದ ನಂತರ ಗವಿಯೊಳಗಿಂದ ಒಬ್ಬ ಮಹಾಯೋಗಿ ಬಂದು ಆ ಹಸುವಿನ ಮೊಲೆಗೆ ಬಾಯಿಟ್ಟು ಕುಡಿದು ಆ ಹಸುವಿನ ಕೋರಳಿಗೆ ರೂಪಾಯಿಯ ಮೌಲ್ಯ ಕಟ್ಟಿ ಕಳಿಸಿಕೊಡುತ್ತಿದ್ದನು. ಇದನ್ನೇ ಶಂಕರ ಗಮನಿಸುತ್ತಿದ್ದ. ಆಕಳು, ಅಲ್ಲಿಂದ ಜಾಗ ಖಾಲಿ ಮಾಡಿತು. ಆಕಳ ಹಿಂದೆ ಶಂಕರ ಹೋಗುವ ಸಂಧರ್ಬದಲ್ಲಿ ಶಿವಯೋಗಿಗಳ ಕಣ್ಣಿಗೆ ಬಿದ್ದನು. ಶಿವಯೋಗಿಗಳು ಶಂಕರನನ್ನು ಕರೆದರು. ಧೈರ್ಯದಿಂದ ಶಂಕರ ಹೋಗಿ ಶ್ರೀಗಳ ಪಾದಗಳನ್ನು ಮುಟ್ಟಿ ನಮಸ್ಕರಿಸಿದನು. ನೀನು ನೋಡಿದ ದೃಶ್ಯಗಳನ್ನೆಲ್ಲ ಬೇರೊಬ್ಬರ ಮುಂದೆ ಪ್ರಸ್ತಾಪ ಮಾಡಿದರೆ ನಿನಗೆ ದುಃಖ ಪ್ರಾಪ್ತವಾಗುತ್ತದೆ. ಎಂದು ಶಿವಯೋಗಿಗಳು ಶಂಕರನಿಗೆ ಹೇಳಿದರು. ಶಂಕರ ಗೋಣಾಳ್ಳಾಡಿಸಿದನು. ಶಂಕರನು ಹಿಂದಕ್ಕೆ ಹೊರಡುವಾಗ ಶ್ರೀಗಳು ಎರಡು ವಿಭೂತಿಗಳು ಪ್ರಸಾದ ವೆಂದು ನೀಡಿದರು. ಇವು ಮನೆಗೆ ತೆಗೆದುಕೊಂಡು ಹೋಗು ದಾರಿಯಲ್ಲಿ ನೋಡಬೇಡ ಯಾರಿಗೂ ತೋರಿಸಬೇಡ ಎಂದು ಹೇಳಿ ಕಳಿಸಿಕೊಟ್ಟರು.

ಹಸುಗಳು ಮನೆಗೆ ಧಾವಿಸಿದವು. ಶಂಕರ ಹಸುಗಳ ಹಿಂದೆ ಧಾವಿಸುತ್ತಿರುವಾಗ ಮಧ್ಯ ದಾರಿಯಲ್ಲಿ ಶ್ರೀಗಳು ಕೊಟ್ಟ ವಿಭೂತಿಯನ್ನು ಬಿಚ್ಚಿ ನೋಡಿದನು. ಅಷ್ಟರಲ್ಲಿಯೇ ಶಂಕರನ ಕಣ್ಣುಗಳು ಕಾಣದಂತಾದವು. ದಾರಿ ಸಿಗದಂತಾಯಿತು. ದುಃಖದಲ್ಲಿ ಮುಳುಗಿದನು, ಶ್ರೀಗಳ ಮಾತನ್ನು ತಪ್ಪಿದೆಯೆಂದು ಕಳವಳಗೊಳ್ಳುತ್ತಿದ್ದನು. ಹಸುಗಳ ದೇಶವರ್ಮ ರಾಜನ ಮನೆಯಂಗಳವನ್ನು ತಲುಪಿದವು. ಯಥಾ ಸ್ಥಿತಿ ಗೊವೊಂದರ ಕೊರಳಲ್ಲಿ ರೂಪಾಯಿ ಮೌಲ್ಯವಿತ್ತು. ಶಂಕರ ಬರಲಿಲ್ಲ. ದೇಶವರ್ಮ ಗಾಬರಿಗೊಂಡು ಕೆಲ ಆಳುಗಳನ್ನು ಶಂಕರನನ್ನು ಹುಡುಕಿ ತರಲು ಒಪ್ಪಿಗೆ ನೀಡಿದರು. ಸೇವಕರು ಗುಡ್ಡಗಾಡು ಪರ್ವತದ ಪ್ರದೇಶಕ್ಕೆ ಬಂದಾಗ ಕಣ್ಣು ಕಳೆದುಕೊಂಡು ನೋವುಗಳನ್ನು ಅನುಭವಿಸುತ್ತಿದ್ದ ಶಂಕರನನ್ನು ಕಂಡರು. ನಂತರ ದೇಶವರ್ಮ ಅರಸನ ಮನೆಗೆ ಕರೆತಂದರು. ಶಂಕರನು ಗುಡ್ಡ ಪ್ರದೇಶದ ಗವಿಯಲ್ಲಿ ಕಂಡ ದೃಶ್ಯಗಳನ್ನೆಲ್ಲ ಒಂದೊಂದಾಗಿ ಬಿಚ್ಚಿ ಹೇಳಿದರು. ಅರಸರು ವಿಚಾರ ಚಿಂತೆಯಲ್ಲಿ ತಲ್ಲಿನರಾದರು.

ಮರುದಿವಸ ಬೆಳಿಗ್ಗೆ ಅರಸರು ಸಹಕುಟುಂಬ ಸಹ ಪರಿವಾರಗಳ ವಾಧ್ಯ ಸಕಲ ಸಿದ್ಧತೆ ಆರುತಿ ಮುಖಾಂತರ ಗುಡ್ಡದ ಗವಿಯ ಹತ್ತಿರ ನಡೆದರು. ಗವಿಯ ಮುಂದೆ ನಿಂತರು. ಸುಮಾರು ಒಂದು ರಾತ್ರಿ ಒಂದು ಹಗಲು ಕಳೆದರು ಶಿವಯೋಗಿಗಳು ದರ್ಶನವಾಗಲಿಲ್ಲ. ಸಕಲರೆಲ್ಲ ಅನ್ನನೀರು ಬಿಟ್ಟು ದರ್ಶನಕ್ಕಾಗಿ

ಹಂಬಲಿಸುತ್ತಿದ್ದರು. ಇದನ್ನು ಕಂಡ ಶ್ರೀ ಶಿವಯೋಗೀಶ್ವರ ಮಹಾಸ್ವಾಮಿಗಳು ಗವಿಯ ಮಹಾದ್ವಾರದ ಬಳಿ ಬಂದು ದರ್ಶನವನ್ನು ಕೊಟ್ಟರು. ದೇಶವರ್ಮರಾಜನು ಸಂತೋಷದಿಂದ ನಮಸ್ಕರಿಸಿದರು. ಗ್ರಾಮಕ್ಕೆ ಬರಲು ಒತ್ತಾಯಿಸಿದರು, ಶ್ರೀಗಳ ಭಕ್ತರ ಮಾತಿಗೆ ಓಗೊಟ್ಟು ಗ್ರಾಮಕ್ಕೆ ಬಂದು ಮಠವನ್ನು ಸ್ಥಾಪಿಸಿದರೆಂಬ ದಂತ ಕತೆವಿದೆ. ಶ್ರೀಗಳು ಮೊದಲು, ಕಾಡಿನ ಹುಲಿ ಹಾಗೂ ಕಾಡಿನ ಸರ್ಪಗಳು ಬಂದರೆ ನಾನು ಬರುತ್ತೇನೆಂದು ತಿಳಿಸಿ ಹೇಳಿದರು. ಅದರಂತೆ ಅರಸನು ಘಟಸರ್ಪ ಹಾಗೂ ಹುಲಿಯನ್ನು ಗ್ರಾಮಕ್ಕೆ ಕರೆತಂದರಂತೆ, ಆ ಹುಲಿಯ ಮೊದಲ ಹೆಜ್ಜೆ ಒಕ್ಕಲು ಗುಡ್ಡದಿಂದ ಗ್ರಾಮಕ್ಕೆ ಪ್ರವೇಶಿಸುವ ರಸ್ತೆಯಾಗಿ ಕಂಗೊಳಿಸಿತು. ಹುಲಿಯ ಎರಡನೇ ಹೆಜ್ಜೆ ಮಠದ ಸ್ಥಳವಾಗಿ ರೂಪಗೊಂಡಿತು. ಹುಲಿಯ ಮೂರನೇ ಹೆಜ್ಜೆ ಮಠದ ಸುತ್ತ ಕಟ್ಟಿದ ಕೋಟೆ (ಗಡಿ) ಯಾಗಿ ಸ್ಥಾಪನೆಗೊಂಡಿತೆಂದು ಊಹೆಗಳಿವೆ.

ಶಿವಯೋಗೀಶ್ವರ ಮಹಾಸ್ವಾಮಿಗಳು ಕಾರ್ತಿಕ ಶುದ್ಧ ಪಂಚಮಿಯೆಂದು ನಾಡಿಗೆ ಬಂದು ಮಠವನ್ನು ಸ್ಥಾಪನೆ ಮಾಡಿದರು. ಅಲ್ಲದೆ ಮಠದ ಆವರಣದಲ್ಲೊಂದು ಭಕ್ತರಿಗೆ ಕಟ್ಟೆಯನ್ನು ಕಟ್ಟಿಸಿದರು, ಈ ಕಟ್ಟೆಯಲ್ಲಿ ಕುಳಿತು ಚರ್ಚೆಗಳಾಗಬೇಕು ಕಾರ್ಯಗಳಾಗಬೇಕು. ಸೋಮಾರಿಗಳಾಗಬಾರದು ಎಂದು ಶ್ರೀಗಳ ನಿಲುವಾಗಿತ್ತು. ಆದ್ದರಿಂದ ಈ ಕಟ್ಟೆಗೆ " ಕಾಯಕ ಕಟ್ಟೆ" ಯೆಂದು ಹೆಸರಿಟ್ಟರು. ಈ ಕಟ್ಟೆಯ ಕೆಲವು ಕಾಲದ ನಂತರ "ಕಸುಬನ" ಕಟ್ಟೆ ಯಾಗಿ ಪರಿವರ್ತನೆಗೊಂಡಿತ್ತು. ಇಂದು "ಕಸಬಾ ಕಟ್ಟೆ" ಎಂದು ಜನ ಕರೆಯುವ ವಾಡಿಕೆ ಇದೆ. ಹೀಗೆ ಶ್ರೀ ಮಠದ ಐತಿಹಾಸಿಕ ಪರಂಪರೆಯನ್ನು ಹೊಂದಿದ ಪ್ರಾಚೀನ ಮಠವಾಗಿ ಬೆಳೆಯ ತೊಡಗಿದೆ. ಶ್ರೀಗಳಿವರು ಪುನಃ ಶಂಕರನಿಗೆ ಹಾಗೂ ಚಂದ್ರಶರ್ಮ ನೆಂಬುವವರನ್ನು ತಮ್ಮ ಶಿಷ್ಯನೆಂದು ನೇಮಕ ಮಾಡಿಕೊಂಡು ಮಠದಲ್ಲಿ ಇರಿಸಿಕೊಂಡರೆಂದು ತಿಳಿದು ಬಂದಿದೆ. ಶ್ರೀಗಳು ಅನೇಕ ಗ್ರಾಮಗಳಿಗೆ ಧರ್ಮ ಪ್ರಚಾರ ಮಾಡಿ ಕೊನೆಗೆ ಮಠದಲ್ಲಿ ಜೀವಂತ ಸಮಾಧಿಯಾದರು.

### ಮಠದ ಪರಂಪರೆ

ಶ್ರೀ ಮಠದಲ್ಲಿ ಒಟ್ಟು ಮೂವತ್ತಾರು ಮಠಾಧೀಶರು ತಮ್ಮ ಸೇವೆಯನ್ನು ಸಲ್ಲಿಸಿರುತ್ತಾರೆ. ತಮ್ಮ ಹೆಸರಿನೊಂದಿಗೆ " ದೇವಮಾನ್ಯ, ಯೋಗಾಭಿನವ, ವಿದ್ಯಾಮಾನ್ಯ ಶಿವಾಭಿನವ, ವಿಶ್ವಮಾನ್ಯ ಪೂಜಾಭಿನವ" ಎಂಬ ಮೂರು ಬಿರುದಾಂಕಿತವನ್ನು ಹೊಂದಿ ಜತೆಗೆ ಮಠದ ಮೂಲ ಕರ್ತರಾದ ಶ್ರೀ ಜಯ ಶಾಂತಲಿಂಗೇಶ್ವರ ಶಿವಚಾರ್ಯ ಸ್ವಾಮಿಗಳ ಹೆಸರನ್ನು ಅಭಿದಾನ ಪಡೆದು ಪಟ್ಟಾಭಿಷೇಕ ವಹಿಸಿಕೊಳ್ಳುತ್ತಿರುವುದು ಕಾಣುತ್ತೇವೆ.

ಇಂತಹ ವಿಶಿಷ್ಟ ಪರಂಪರೆಯನ್ನು ಸಿಗುವುದು ತೀರಾ ಕಡಿಮೆ, ಹೈದ್ರಾಬಾದ ಕರ್ನಾಟಕದ ವ್ಯಾಪ್ತಿಯಲ್ಲಿ ದೊರೆಯುವ ಮಠಗಳೊಂದಿಗೆ ಹೋಲಿಸಿದರೆ ಇದೊಂದು ವೈಶಿಷ್ಟ್ಯ ಪೂರ್ಣವಾಗಿ ಬೆಳೆದು ಬರುತ್ತಿದೆ.

ಮಠದ ಪರಂಪರೆ

೧) ಶ್ರೀ ಜಗಧಾರಾಧ್ಯ ವಿಶ್ವಮಾನ್ಯ ಮಲಯ. ಶ್ರೀ ಜಯಶಾಂತಲಿಂಗೇಶ್ವರ ಶಿವಚಾರ್ಯ ಸ್ವಾಮಿಗಳು

೨) ಶ್ರೀ ರಾಜಶೇಖರರು – ಶ್ರೀ ದೇವಮಾನ್ಯ ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೩) ಶ್ರೀ ಪುರುಷೋತ್ತಮರು –ಶ್ರೀ ವಿದ್ಯಾಮಾನ್ಯ ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೪) ಶ್ರೀ ಸಿದ್ದೇಶ್ವರರು– ಶ್ರೀ ವಿಶ್ವಮಾನ್ಯ ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೫) ಶ್ರೀ ಜ್ಞಾನದೇವರು – ಶ್ರೀ ದೇವಮಾನ್ಯ ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೬) ಶ್ರೀ ಚಂದ್ರಶೇಖರರು – ಶ್ರೀ ವಿಧ್ಯಾಮಾನ್ಯ ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೭) ಶ್ರೀ ಪ್ರಭಾಕರರು – ಶ್ರೀ ವಿಶ್ವಮಾನ್ಯ ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೮) ಶ್ರೀ ಸಿದ್ದೇಶ್ವರರು – ಶ್ರೀ ದೇವಮಾನ್ಯ ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೯) ಶ್ರೀ ಶಿವಲಿಂಗೇಶ್ವರರು – ಶ್ರೀ ವಿದ್ಯಾಮಾನ್ಯ ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೧೦) ಶ್ರೀ ಗುರುಪಾದರು – ಶ್ರೀ ವಿಶ್ವಮಾನ್ಯ ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೧೧) ಶ್ರೀ ಸೋಮಶೇಖರರು – ಶ್ರೀ ದೇವಮಾನ್ಯ ಯೋಗಾಭಿನವ ಶ್ರೀ ಶ್ರೀ ಜಯಶಾಂತಲಿಂಗೇಶ್ವರ ಸ್ವಾಮಿಗಳು ಶಿವಾಚಾರ್ಯ

೧೨) ಶ್ರೀ ಸಿದ್ದೇಶ್ವರರು ಶ್ರೀ ವಿದ್ಯಾಮಾನ್ಯ ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೧೩) ಶ್ರೀ ಷಡಕ್ಷರರು – ಶ್ರೀ ವಿಶ್ವಮಾನ್ಯ ಪೂಜಾಭಿನವ ಶ್ರೀ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೧೪) ಶ್ರೀ ಪೂರ್ಣ ಪುಬ್ಬಿರು ಶ್ರೀ ದೇವಮಾನ್ಯ ಯೋಗಾಭಿನವ ಶ್ರೀ ಶ್ರೀ ಜಯಶಾಂತಲಿಂಗೇಶ್ವರ ಸ್ವಾಮಿಗಳು ಶಿವಚಾರ್ಯ

೧೫) ಶ್ರೀ ರಾಜಶೇಖರರು – ಶ್ರೀ ವಿದ್ಯಾಮಾನ್ಯ ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಸ್ವಾಮಿಗಳು ಶಿವಾಚಾರ್ಯ

೧೬) ಶ್ರೀ ವೀರಭದ್ರರು ಶ್ರೀ ವಿಶ್ವಮಾನ್ಯ ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೧೭) ಶ್ರೀ ನಾಗದೇವರು ಶ್ರೀ ದೇವಮಾನ್ಯ ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೧೮) ಶ್ರೀ ಶಾಂತದೇವರು ಶ್ರೀ ವಿಶ್ವಮಾನ್ಯ ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೧೯) ಶ್ರೀ ಸಿದ್ದೇಶ್ವರರು – ಶ್ರೀ ವಿಶ್ವಮಾನ್ಯ ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೦) ಶ್ರೀ ಚನ್ನಮಲ್ಲರು ಶ್ರೀ ದೇವಮಾನ್ಯ ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೧) ಶ್ರೀ ವಿಜಯರು– ಶ್ರೀ ವಿದ್ಯಾಮಾನ್ಯ ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೨) ಶ್ರೀ ಅನಂತರು – ಶ್ರೀ ವಿಶ್ವಮಾನಯ ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೩) ಶ್ರೀ ಶಾಂತರುಶ್ರೀ ದೇವಮಾನ್ಯ ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೪) ಶ್ರೀ ಸುಜ್ಞಾನಿಗಳು ಶ್ರೀ ವಿದ್ಯಾಮಾನ್ಯ ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೫) ಶ್ರೀ ಗಂಗಾಧರರು ಶ್ರೀ ವಿಶ್ವಮಾನ್ಯ ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೬) ಶ್ರೀ ಚಂದ್ರಶೇಖರರು – ಶ್ರೀ ದೇವಮಾನ್ಯ ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೭) ಶ್ರೀ ಹರೀಶ್ವರರು – ಶ್ರೀ ವಿದ್ಯಾಮಾನ್ಯ ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೮) ಶ್ರೀ ವಿಶ್ವಾರಾಧ್ಯರು – ಶ್ರೀ ವಿಶ್ವಮಾನ್ಯ ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೨೯) ಶ್ರೀ ಸಿದ್ದೇಶ್ವರರು – ಶ್ರೀ ದೇವಮಾನ್ಯ ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೩೦) ಶ್ರೀ ಗುರುದೇವರು ಶ್ರೀ ವಿದ್ಯಾಮಾನ್ಯ ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೩೧) ಶ್ರೀ ಗುರುಪಾದರು – ಶ್ರೀ ವಿಶ್ವಮಾನ್ಯ ಪೂಜಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೩೨) ಶ್ರೀ ಶಿವಪಾದರು ಶ್ರೀ ದೇವಮಾನ್ಯ ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೩೩) ಶ್ರೀ ಪಂಚಾಕ್ಷರರು – ಶ್ರೀ ವಿದ್ಯಾಮಾನ್ಯ ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೩೪) ಶ್ರೀ ಶಾಂತರು ಶ್ರೀ ವಿಶ್ವಮಾನ್ಯ ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೩೫) ಶ್ರೀ ಬಸವಲಿಂಗರು ಶ್ರೀ ಯೋಗಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

೩೬) ಶ್ರೀ ವಿದ್ಯಾನಂದರು ಶ್ರೀ ವಿದ್ಯಾಮಾನ್ಯ ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಶಿವಾಚಾರ್ಯ ಸ್ವಾಮಿಗಳು

ಹೀಗೆ ಮಠದ ಪರಂಪರೆಯಲ್ಲಿ ಮೂವತ್ತಾರು ಮಠಾಧೀಶರು ಮಠದ ಸೇವೆಯನ್ನು ಸಲ್ಲಿಸಿದ್ದಾರೆ. ಮಠದ ವೈಶಿಷ್ಟ್ಯವೆಂದರೆ, ಸುಮಾರು ಐದು ಮಠಾಧೀಶರರು ಬ್ರಾಹ್ಮಣರು ವರ್ಗದವರೆಂದು ತಿಳಿದು ಬಂದಿದೆ. ಈ ಮಠದಲ್ಲಿ ಯಾವುದೇ ಜಾತಿ– ಮತ, ಪಂಥಗಳ ಅನುಸರಿಸದೆ ಸರ್ವರಿಗೂ ಸಮಾನ ಅವಕಾಶ ಕಲ್ಪಿಸಿಕೊಡುವ ಅಂಶವನ್ನು ಎತ್ತಿ ಹಿಡಿಯುತ್ತದೆ. ಬ್ರಾಹ್ಮಣರು ವೀರಶೈವ ಧರ್ಮವನ್ನು ಸ್ವೀಕರಿಸಿ ಮಠದ ಅಧಿಕಾರ ವಹಿಸಿಕೊಂಡರೆಂದು ಈಗಿನ ಮಠಾಧಿಪತಿಗಳಿಂದ ತಿಳಿದು ಬರುತ್ತದೆ.

ಧಾರ್ಮಿಕ ಪರಂಪರೆಯಲ್ಲಿ ಬೆಳೆಯುತ್ತಿರುವ ಶ್ರೀ ಮಠವು ಸರ್ವಧರ್ಮ ಸಮ್ಮೇಳನ, ಚಿಂತನ, ಮಂಥನ ಗೋಷ್ಠಿಗಳನ್ನು ಏರ್ಪಡಿಸಿಕೊಂಡು, ಶ್ರಾವಣಮಾಸದಲ್ಲಿ ಒಂದು ತಿಂಗಳವರೆಗೆ ಶಿವಪೂರಾಣವನ್ನು ನಡೆಸುತ್ತಾರೆ. ಶರಣರ ತತ್ವ ಸತ್ಯ ಪರಿಪಾಲನೆಗಾಗಿ ಹಗಲಿರುಳು ಪರಿಶ್ರಮಿಸುತ್ತಾರೆ. ಹಳ್ಳಿ ಪಟ್ಟಣಗಳಿಗೆ ಸಂಚರಿಸಿ ಧರ್ಮ ಪ್ರಚಾರದೊಂದಿಗೆ ಶರಣರ ಆದರ್ಶತತ್ವಗಳನ್ನು ಪರಿಪಾಲಿಸಲು ಕರೆ ನೀಡುತ್ತಾರೆ. ಕೃತ ಗುರುಗಳ ಅಡ್ಡ ಪಲ್ಲಕಿ ಮೆರವಣಿಗೆ ಕಾರ್ಯಕ್ರಮವನ್ನು ಪ್ರತಿ ವರ್ಷ ಭಾದ್ರಪದ ಶುದ್ಧ ಪ್ರತಿಪದೆಯೆಂದು ಜರುಗುತ್ತದೆ. ಪ್ರತಿ ದಿನ ಅನ್ನದಾಸೋಹ ನಡೆಯುತ್ತದೆ. ಶೈಕ್ಷಣಿಕ ಹಾಗೂ ಸಾಹಿತ್ಯಿಕ ಸೇವೆಯಲ್ಲಿ ತನ್ನದೆಯಾದ ಮಿತಿಯಲ್ಲಿ ಕೆಲಸ ಮಾಡುತ್ತಿದೆ. ಈ ಭಾಗದ ಅತಿದೊಡ್ಡ ಹಾಗೂ ಪ್ರಾಚೀನ ಮಠವೆಂದು

ಹಾಗೂ ಧಾರ್ಮಿಕ ಹಾಗೂ ಸಾಮಾಜಿಕ ಹಾಗೂ ಸಾಂಸ್ಕೃತಿಕ ಕಾರ್ಯ ಚಟುವಟಿಕೆಗಳ ಕೇಂದ್ರ ಬಿಂದುವಾಗಿ ಕಂಗೊಳಿಸುತ್ತದೆ.

### ೩. ೭. ಗೊಬ್ಬೂರ ವಿರಕ್ತ ಮಠ

ದೇವದುರ್ಗ ತಾಲೂಕಿನ ಗೊಬ್ಬೂರ ಗ್ರಾಮದ ವಿರಕ್ತ ಮಠಕ್ಕೆ ಬೂದಿ ಬಸವೇಶ್ವರ ಮಠವೆಂದು ಕರೆಯುತ್ತಾರೆ. ಪುತ್ರ ವರ್ಗದ ಪರಂಪರೆಯಲ್ಲಿ ಬೆಳೆದು ಬಂದ ಈ ಮಠವು ಕಾಶಿ ಪೀಠದ ಶಾಖಾ ಮಠವಾಗಿ ಕಂಗೊಳಿಸುತ್ತಿದೆ. ಶ್ರೀ ಬೂದಿ ಬಸವೇಶ್ವರ ಮಹಾಸ್ವಾಮಿಗಳೆಂಬುವವರು ಲೋಕ ಸಂಚಾರ ಕೈಗೊಂಡು ಈ ಗ್ರಾಮದ ಹತ್ತಿರವಿರುವ ಗುಡ್ಡದಲ್ಲಿ ಅನುಷ್ಠಾನ ಕೈಗೊಳುತ್ತಾರೆ. ತಪಸ್ಸಾಧನೆಯಲ್ಲಿ ತಲ್ಲಿನರಾಗಿದ್ದಾಗ ಗ್ರಾಮದ ಭಕ್ತರು ಬಂದು ನೋಡುತ್ತಾರೆ. ಈ ಯೋಗಿಗಳಿಗೆ ಗ್ರಾಮಕ್ಕೆ ಕರೆದುಕೊಂಡು ಹೋಗಿ ಮಠವನ್ನು ಸ್ಥಾಪಿಸಿಲು ಭಕ್ತರು ಒತ್ತಾಯಿಸುತ್ತಾರೆ. ಭಕ್ತರ ಮೇರೆಗೆ ಗ್ರಾಮದ ಹೊರವಲಯದಲ್ಲಿ ಮಠವನ್ನು ಸ್ಥಾಪನೆ ಮಾಡಿದ್ದರಿಂದ ಈ ಮಠಕ್ಕೆ ಬೂದಿ ಬಸವೇಶ್ವರ ಮಠವೆಂದು ಕರೆಯುತ್ತಾರೆ. ಈ ಮಠದಲ್ಲಿ ಅನೇಕ ಧಾರ್ಮಿಕ, ಸಾಮಾಜಿಕ, ಹಾಗೂ ಸಾಂಸ್ಕೃತಿಕ ಕಾರ್ಯಚಟುವಟಿಕೆಗಳನ್ನು ನಡೆಸಿಕೊಡು ಬರುತ್ತಾರೆ. ಶ್ರೀ ಮಠದಲ್ಲಿಯೇ ಶ್ರೀಗಳು ಜೀವಂತ ಸಮಾಧಿಯಾದರೆಂಬ ಪುರಾವೆಗಳು ಸಿಗುತ್ತವೆ. ಶ್ರೀ ಬೂದಿ ಬಸವೇಶ್ವರ ಮಹಾಸ್ವಾಮಿಗಳ ಕಾಲದಲ್ಲಿ ಶ್ರೀ ಮಠಕ್ಕೆ ಹೈದ್ರಾಬಾದ ನಿಜಾಮನು ನಲವತ್ತು ಎಕರೆ ಭೂಮಿಯನ್ನು ಉಂಬಳಿಯಾಗಿ ನೀಡಿರುತ್ತಾರೆ. ಈ ಭೂಮಿಯನ್ನು ಶ್ರೀಮಠದ ಅಧೀನದಲ್ಲಿ ಇಂದಿಗೂ ಒಳಗೊಂಡಿದ್ದು ಕಂಡು ಬರುತ್ತದೆ.

ವಂಶಾವಳಿ

೧) ಶ್ರೀ ಬೂದಿ ಬಸವೇಶ್ವರ ಮಹಾಸ್ವಾಮಿಗಳು (ಮಠದ ಸಂಸ್ಥಾಪಕರು)

೨) ಶ್ರೀ ಶಾಂತವೀರ ಶಿವಾಚಾರ್ಯ ಮಹಾಸ್ವಾಮಿಗಳು.

೩) ಶ್ರೀ ಎರಡನೆಯ ಬೂದಿ ಬಸವೇಶ್ವರ ಶಿವಾಚಾರ್ಯ ಸ್ವಾಮಿಗಳು.

೪) ಶ್ರೀ ಎರಡನೆಯ ಶಾಂತವೀರ ಶಿವಾಚಾರ್ಯ ಸ್ವಾಮಿಗಳು

೫) ಶ್ರೀ ಮೂರನೆಯ ಬೂದಿ ಬಸವೇಶ್ವರ ಶಿವಾಚಾರ್ಯ ಸ್ವಾಮಿಗಳು

ನೂತನ ಪೀಠಾಧಿಪತಿಯಾಗಿ ಮಠದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಧಾರ್ಮಿಕ ಪರಿಸರದಲ್ಲಿ ಹುಟ್ಟಿಕೊಂಡಿರುವ ಈ ಮಠವು ಪ್ರತಿ ತಿಂಗಳ ಅಮವಾಸೆಯೆಂದು ಶಿವಾನುಭವಗೋಷ್ಠಿಯೆಂಬ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ನಾಡಿನ ಹಿರಿಯ ವಿದ್ವಾಂಸರನ್ನು, ಸಾಹಿತಿಗಳನ್ನು, ಪಂಡಿತರನ್ನು, ಕರೆಯಿಸಿ, ಧಾರ್ಮಿಕ ಉಪನ್ಯಾಸ ಕಾರ್ಯಕ್ರಮಗಳನ್ನು ನಡೆಸುತ್ತಾರೆ. ಮಠದಲ್ಲಿ ನಿತ್ಯ ಅನ್ನದಾಸೋಹ ನಡೆಯುತ್ತದೆ.

ಜಾತಿಯತೆಯ ನಿರ್ಮೂಲನೆ ಮಾಡಲು ಹಳ್ಳಿ ಪಟ್ಟಣಗಳಿಗೆ ಸಂಚರಿಸಿದರು. ಪಾಠ – ಪ್ರವಚನಗಳ ಮುಖಾಂತರ ಜನರಲ್ಲಿ ಅಸ್ಪೃಶ್ಯತಾ ಭಾವನೆ, ಮೇಲು ಕಿಳೆಂಬ ಭಾವನೆ, ಕಿತ್ತೊಗೆಯಲು ಹಗಲಿರುಳು ಶ್ರಮಿಸುತ್ತಿರುತ್ತಾರೆ. ಸಾಹಿತ್ಯದ ಕಡೆ ಹೆಚ್ಚಿನ ಅಭಿರುಚಿ ಹೊಂದಿರುವ ನೂತನ ಪೀಠಾಧಿಪತಿಗಳು ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ಪದವಿಯನ್ನು ತೇರ್ಗಡೆ ಹೊಂದಿ ೨೫ನೇ ಜನವರಿ ೧೯೯೯ ರಂದು ಶ್ರೀ ಮಠದ ಪಟ್ಟಾಧಿಕಾರವನ್ನು ವಹಿಸಿಕೊಂಡಿದ್ದಾರೆ. ಮಠದ ಎಲ್ಲಾ ಜವಾಬ್ದಾರಿಯನ್ನು ತನ್ನ ಹೆಗಲ ಮೇಲೆ ಇರಿಸಿಕೊಂಡು ವ್ಯವಸ್ಥಿತವಾದ ರೀತಿಯಲ್ಲಿ ಮಠವನ್ನು ಬೆಳೆಸುತ್ತಿದ್ದಾರೆ. ನವರಾತ್ರಿ ಉತ್ಸವ, ಬಸವಜಯಂತಿ ಉತ್ಸವಗಳು ಅದ್ದೂರಿಯಾಗಿ ಜರುಗುತ್ತವೆ. ಶ್ರೀ ಮಠಕ್ಕೆ ನಾನಾ ಕಡೆಯಿಂದ ಭಕ್ತರು ಬರುತ್ತಾರೆ.

ಗೊಬ್ಬೂರ ಗ್ರಾಮದಲ್ಲಿಯೇ ಇನ್ನೊಂದು '' ಶ್ರೀ ಸಾವಿರ ದೇವರ ಮಠ ''ಕಂಡು ಬರುತ್ತದೆ. ಈ ಮಠವು ಹನ್ನೆರಡನೆಯ ಶತಮಾನದಲ್ಲಿ ಸ್ಥಾಪನೆಗೊಂಡಿದೆಯೆಂದು ತಿಳಿದು ಬರುತ್ತಿದೆ. ಶ್ರೀ ಮಹಾಂತ ಶಿವಾಚಾರ್ಯ ಮಹಾಸ್ವಾಮಿಗಳ ಲೋಕ ಸಂಚಾರದಲ್ಲಿ ಧರ್ಮ ಪ್ರಚಾರಕ್ಕೆಂದು ಬಂದು, ಈ ಮಠವು ಸ್ಥಾಪಿಸಿದರೆಂದು ತಿಳಿದು ಬಂದಿದೆ. ವೀರಶೈವ ಧರ್ಮದ ಕೇಂದ್ರ ಬಿಂದುವಿನಂತೆ ಈ ಮಠವು ತನ್ನ ಕಾರ್ಯ ವ್ಯಾಪ್ತಿಯನ್ನು ಬೆಳೆಸಿಕೊಂಡಿದೆ. ಈ ಮಠದಲ್ಲಿ ಸುಮಾರು ಆರು ಗದ್ದುಗೆಗಳು ಸ್ಥಾಪನೆಯಾಗಿವೆ. ಈ ಗದ್ದುಗೆಗಳಿಗೆ ನಿತ್ಯ ಪೂಜೆ ಪಾಠ ಮಾಡಿಸುತ್ತಾರೆ. ಶ್ರಾವಣ ಮಾಸದಲ್ಲಿ ಹಾಗೂ ಕಾರ್ತಿಕ ಮಾಸದಲ್ಲಿ ಪ್ರವಚನಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. ಮಹಾಂತೇಶ್ವರ ಶಿಕ್ಷಣ ಸಂಸ್ಥೆಯನ್ನು ತೆರೆದು ಗೊಬ್ಬೂರ ಹಾಗೂ ಮಟುವರಿ ಗ್ರಾಮಗಳಲ್ಲಿ ಪ್ರೌಢ ಶಾಲೆಯನ್ನು ನಡೆಸುತ್ತಿದ್ದಾರೆ. '' ಮಹಾಂತೇಶ್ವರ ಕಲ್ಯಾಣ ಮಂಟಪ'' ವನ್ನು ಸ್ಥಾಪಿಸಿ ಅಲ್ಲಿನ ಧಾರ್ಮಿಕ ಹಾಗೂ ಸಾಮಾಜಿಕ, ಸಾಂಸ್ಕೃತಿಕ ಕಾರ್ಯ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ''ಶ್ರೀ ಗುರು ಮಹಾಂತೇಶ್ವರ ಪುರಾಣ'' ಎಂಬ ಗ್ರಂಥವನ್ನು ಶ್ರೀ ಕರಿಬಸವೇಶ್ವರ ಕವಿಗಳಿಂದ

ರಚಿತಗೊಂಡಿದೆ. ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳ ಕಾರ್ಯದಲ್ಲಿ ತೊಡಗಿರುತ್ತಾರೆ.

ವಂಶಾವಳಿ

೧) ಷ.ಬ್ರ.ಶ್ರಿ. ಮಹಾಂತ ಶಿವಾಚಾರ್ಯ ಮಹಾಸ್ವಾಮಿಗಳು.

೨) ಷ.ಬ್ರ.ಶ್ರಿ. ಚೆನ್ನವೀರ ಶಿವಾಚಾರ್ಯ ಮಹಾಸ್ವಾಮಿಗಳು.

೩) ಷ.ಬ್ರ.ಶ್ರಿ. ಗುರುಪಾದ ಶಿವಾಚಾರ್ಯ ಮಹಾಸ್ವಾಮಿಗಳು.

೪) ಷ.ಬ್ರ.ಶ್ರಿ. ಮಹಾಂತ ಶಿವಾಚಾರ್ಯ ಮಹಾಸ್ವಾಮಿಗಳು. – ನೂತನ ಮಠಾಧಿಪತಿಗಳು

ಹೀಗೆ ಶ್ರೀ ಮಠದ ವಂಶಾವಳಿ ಬೆಳೆದು ಬಂದಿದೆ. ನೂತನ ಶ್ರೀಗಳಾದ ಷ. ಬ್ರ. ಶ್ರೀ ಮಹಾಂತ ಶಿವಯೋಗಿಯವರು

ಸಮಾಜದಲ್ಲಿ ಭಕ್ತರೊಡನೆ ನಿಕಟ ಸಂಬಂಧವನ್ನು ಇಟ್ಟುಕೊಂಡಿರುತ್ತಾರೆ.

## ೩. ೮. ಮಸರಕಲ್ಲು ವಿರಕ್ತಮಠ

ದೇವದುರ್ಗ ತಾಲೂಕಿನಲ್ಲಿ ಬರುವ ಮಸರಕಲ್ಲು ಗ್ರಾಮದ ವಿರಕ್ತ ಮಠವು ಒಂದು. ಇದು ಗ್ರಾಮದ ಹೊರವಲಯದಲ್ಲಿ. ಶ್ರೀ ಮುರುಘೇಂದ್ರ ಸ್ವಾಮಿಗಳೆಂಬುವವರಿಂದ ಈ ಮಠವು ಸ್ಥಾಪನೆಗೊಂಡಿದೆ. ಇಲ್ಲಿಯಾವುದೇ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುವುದಿಲ್ಲ. ವರ್ಷಕ್ಕೊಂದೆರಡು ಚಿಕ್ಕ ಪುಟ್ಟ ಜಯಂತೋತ್ಸವಗಳನ್ನು ಆಚರಿಸುತ್ತಾರೆ. ಶ್ರೀ ಮಠದಲ್ಲಿ ನಾಲ್ಕು ಸ್ವಾಮಿಗಳು ಪೀಠಾಧಿಕಾರವನ್ನು ವಹಿಸಿ ಸೇವೆ ಸಲ್ಲಿಸಿರುತ್ತಾರೆ. ಮೂರು ಸ್ವಾಮಿಗಳು ಗತಿಸಿದ ನಂತರ ಕೆಲವು ವರ್ಷಗಳು ಈ ಮಠದಲ್ಲಿ ಯಾರು ಸ್ವಾಮಿಗಳಿಲ್ಲದೆ ಹೋಗಿತ್ತು. ಹತ್ತಾರು ವರ್ಷಗಳ ನಂತರ ಮತ್ತೊಬ್ಬ ಸಾಮಿ ಮಠಕ್ಕೆ ನೇಮಿಸಲಾಯಿತ್ತು.

ವಂಶಾವಳಿ

೧) ಶ್ರೀ ಮ.ನಿ.ಪ್ರ. ಮುರುಘೇಂದ್ರ ಮಹಾಸ್ವಾಮಿಗಳು – (ಮೂಲ ಸಂಸ್ಥಾಪಕರು.)

೨) ಶ್ರೀ ಮ.ನಿ.ಪ್ರ. ಮಹಾಲಿಂಗ ಮಹಾಸ್ವಾಮಿಗಳು

೩) ಶ್ರೀ ಮ.ನಿ.ಪ್ರ. ಬಸವಯ್ಯಾ ಮಹಾಸ್ವಾಮಿಗಳು

೪) ಶ್ರೀ ಮ.ನಿ.ಪ್ರ. ಮರುಘೇಂದ್ರ ಮಹಾಸ್ವಾಮಿಗಳು – (ನೂತನ ಮಠಾಧೀಶರು )

ಮೂರನೆಯ ಮಠಾಧೀಶರಾದ ಶ್ರೀ ಮ.ನಿ.ಪ್ರ. ಬಸವಯ್ಯಾ ಮಹಾಸ್ವಾಮಿಗಳು ಲಿಂಗೈಕ್ಯರಾದ ಮೇಲೆ ಕೆಲವು ವರ್ಷಗಳ ಕಾಲ ಮಠ ಅನಾಥವಾಗಿ ಕಂಗೊಳಿಸಿತ್ತು. ಮಠವೊಂದು ಆಶ್ರಯ ಕಾಣದೆ ಹೊಯಿತ್ತು. ಹಲವಾರು ವರ್ಷಗಳ ನಂತರ ಗ್ರಾಮದ ಭಕ್ತರು ಕೂಡಿ ಚಿತ್ರದುರ್ಗದ ಬ್ರಹನ್ಮಠದ ಮುರುಘೇಂದ್ರ ಸ್ವಾಮಿಗಳ ಅಪ್ಪಣೆ ಆಶಿರ್ವಾದ ಪಡೆದುಕೊಂಡು ಒಂದು ಮರಿಯನ್ನು ನೇಮಕ ಮಾಡಿದರು. ನಂತರ ಮ.ನಿ.ಪ್ರ. ಮುರುಘೇಂದ್ರ ಮಹಾ ಸ್ವಾಮಿಗಳಿಂದು ಪಟ್ಟಾಧಿಕಾರ ವಹಿಸಿ ಅಧಿಕಾರ ವಹಿಸಿಕೊಟ್ಟರು. ಅಂದಿನಿಂದ ಮಠವು ಕೆಲವು ಪರಿವರ್ತನೆಯತ್ತ ಸಾಗುತ್ತಿದೆ.

### ೩.೯. ಮಾನವಿ ಕಲ್ಮಠ

ಮಾನವಿ ನಗರವು ರಾಯಚೂರ ಜಿಲ್ಲೆಯ ತಾಲೂಕ ಕೇಂದ್ರ ಸ್ಥಳವಾಗಿದೆ. ಈ ಗ್ರಾಮದ ಹೃದಯಭಾಗದಲ್ಲಿ ಶ್ರೀ ಗುರುಲಿಂಗ ಶಿವಾಚಾರ್ಯ ಮಹಾಸ್ವಾಮಿಗಳ ನೇತೃತ್ವದಲ್ಲಿ ಮಠವು ಸ್ಥಾಪನೆಯಾಗಿದೆ. ಮೊಟ್ಟ ಮೊದಲು ಶ್ರೀಗಳಿವರು ಲಿಂಗಪೂಜೆ ಧ್ಯಾನದಲ್ಲಿ ತಲ್ಲಿನರಾಗಿರುತ್ತಿದ್ದರು. ಭಕ್ತರಿಗೆ ದರ್ಶನ ಸಿಗುವುದು ತೀರಾ ಅಪರೂಪ. ಎರಡು ವಾರಕ್ಕೊಮ್ಮೆ ಮಾತ್ರ ಭಕ್ತರಿಗೆ ದರ್ಶನ ನೀಡುತ್ತಿದ್ದರೆಂದು ಹಲವು ಮೂಲಗಳಿಂದ ತಿಳಿದು ಬಂದಿದೆ. ಸದಾ ದ್ಯಾನ, ತಪಸ್ಸು, ಅನುಷ್ಠಾನಗಳಲ್ಲಿಯೇ ತಲ್ಲಿನರಾಗುತ್ತಿದ್ದರು. ಶ್ರೀ ಮಠದಲ್ಲಿ ಸುಮಾರು ಹದಿಮೂರು ಸ್ವಾಮಿಗಳು ಅಧಿಕಾರವನ್ನು ಸ್ವೀಕರಿಸಿದ್ದಾರೆ.

ವಂಶಾವಳಿ

೧) ಶ್ರೀ ಷ. ಬ್ರ. ಗುರುಲಿಂಗ ಶಿವಾಚಾರ್ಯ ಸ್ವಾಮಿಗಳು –(ಮಠದ ಮೂಲ ಸಂಸ್ಥಾಪಕರು.)

೨) ಶ್ರೀ ಷ. ಬ್ರ. ವೀರೂಪಾಕ್ಷ ಶಿವಾಚಾರ್ಯ ಸ್ವಾಮಿಗಳು.

೩) ಶ್ರೀ ಷ. ಬ್ರ. ಕವೀರ ಶಿವಾಚಾರ್ಯ ಸ್ವಾಮಿಗಳು.

೪) ಶ್ರೀ ಷ. ಬ್ರ. ಮಹಾಂತ ಶಿವಾಚಾರ್ಯ ಸ್ವಾಮಿಗಳು.

೫) ಶ್ರೀ ಷ. ಬ್ರ. ಸಿದ್ಧರಾಮ ಶಿವಾಚಾರ್ಯ ಸ್ವಾಮಿಗಳು.

೬) ಶ್ರೀ ಷ. ಬ್ರ. ಎರಡನೆಯ ವೀರೂಪಾಕ್ಷ ಶಿವಾಚಾರ್ಯ ಸ್ವಾಮಿಗಳು.

೭) ಶ್ರೀ ಷ. ಬ್ರ. ಎರಡನೆಯ ಕರಿವೀರ ಶಿವಾಚಾರ್ಯ ಸ್ವಾಮಿಗಳು.

೮) ಶ್ರೀ ಷ. ಬ್ರ. ಎರಡನೆಯ ಮಹಾಂತ ಶಿವಾಚಾರ್ಯ ಸ್ವಾಮಿಗಳು.

೯) ಶ್ರೀ ಷ. ಬ್ರ. ಸಂಗಮೇಶ್ವರ ಶಿವಾಚಾರ್ಯ ಸ್ವಾಮಿಗಳು.

೧೦) ಶ್ರೀ ಷ. ಬ್ರ. ಮೂರನೆಯ ಮಹಾಂತ ಶಿವಾಚಾರ್ಯ ಸ್ವಾಮಿಗಳು.

೧೧) ಶ್ರೀ ಷ. ಬ್ರ. ಮೂರನೆಯ ಸಿದ್ದರಾಮ ಶಿವಾಚಾರ್ಯ ಸ್ವಾಮಿಗಳು.

೧೨) ಶ್ರೀ ಷ. ಬ್ರ. ಮೂರನೆಯ ವಿರೂಪಾಕ್ಷ ಶಿವಾಚಾರ್ಯ ಸ್ವಾಮಿಗಳು.

೧೩) ಶ್ರೀ ಷ. ಬ್ರ. ಶಿವಮೂರ್ತಿ ಶಿವಾಚಾರ್ಯ ಸ್ವಾಮಿಗಳು. – (ನೂತನ ಮಠಾಧೀಶರು)

ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ಹಾಗೂ ಶೈಕ್ಷಣಿಕ ರಂಗದಲ್ಲಿ ಸೇವೆ ಸಲ್ಲಿಸುತ್ತಿರುವ ಈ ಮಠವು ಈ ಭಾಗದಲ್ಲಿ ಅಮರವಾಗಿ ಬೆಳೆಯುತಲಿದೆ. ಧರ್ಮ ಪ್ರಚಾರದೊಂದಿಗೆ. ಶೈಕ್ಷಣಿಕ ಸಂಸ್ಥೆಯನ್ನು ತೆರೆದು ಪ್ರಾಥ ಮಿಕ ಶಾಲೆ, ಪ್ರೌಢ ಶಾಲೆ, ಹಾಗೂ ಸಂಯುಕ್ತ ಪದವಿ ಪೂರ್ವ ಮಹಾವಿದ್ಯಾಲಯ ಸ್ಥಾಪಿಸಿ, ಅಲ್ಲದೆ ಆಯುರ್ವೆದ ಮೇಡಿಕಲ್ ಕಾಲೇಜಗಳನ್ನು ಪ್ರಾರಂಭಿಸಿರುವ ಹೆಗ್ಗಳಿಕೆ ಶ್ರೀ ಮಠದಾಗಿದೆ. ಸರ್ವತೋಮುಖ ಅಭಿವೃದ್ದಿಗೆ ಕಾರಣವಾದ ಶ್ರೀ ಮಠದ ನೂತನ ಪೀಠಾಧಿಪತಿಯಾದ ಷ.ಬ್ರ.ಶ್ರೀ. ಶಿವಮೂರ್ತಿ ಶಿವಾಚಾರ್ಯ ಸ್ವಾಮಿಗಳು. ಇವರು ಕಾಯಕ ನಿಷ್ಠೆಯುಳ್ಳವರಾಗಿದ್ದಾರೆ. ಬಡ ಮಕ್ಕಳಿಗಾಗಿ ಉಚಿತ ಪ್ರಸಾದ ನಿಲಯವನ್ನು ಸ್ಥಾಪಿಸಿದ್ದಾರೆ. ಸಮಾಜದೊಡನೆ ನಿಕಟವಾದ ಸಂಬಂಧವನ್ನು ಬೆಳೆಸಿಕೊಂಡಿರುತ್ತಾರೆ. ಶ್ರೀ ಮಠದಲ್ಲಿ ಪಾಠ – ಪ್ರವಚನ ಕಾರ್ಯ ಚಟುವಟಿಕೆಗಳನ್ನು ಸದಾ ನಡೆಸಿಕೊಂಡು ಮಠ ಅಭಿವೃದ್ದಿಗೊಳಿಸುತ್ತಿದ್ದಾರೆ.

೩. ೧೦. ಚಿಕ್ಕಲಪರ್ವಿ ವಿರಕ್ತ ಮಠ

ಮಾನವಿ ತಾಲೂಕಿನ ಚಿಕ್ಕಲಪರ್ವಿ ಗ್ರಾಮದಲ್ಲೊಂದು ವಿರಕ್ತ ಮಠ ದೊರೆಯುತ್ತದೆ. ಇದಕ್ಕೆ ರುದ್ರದೇವರ ಮಠವೆಂದು ಕರೆಯುತ್ತಾರೆ. ಇತ್ತೀಚಿಗೆ ಅಂದರೆ, ಸುಮಾರು ಹದಿನೆಂಟನೆ ಶತಮಾನದಲ್ಲಿ ಶ್ರೀ ರುದ್ರಮುನಿ ಸ್ವಾಮಿಗಳು ಈ ಮಠವನ್ನು ಸ್ಥಾಪಿಸಿದರೆಂದು ಪ್ರತಿತಿ. ಹಾಲವಿ ಗ್ರಾಮದ ವಿರಕ್ತ ಮಠದಲ್ಲಿ ಇವರು ಮಠಾಧೀಶರಾಗಿದ್ದರು. ಗ್ರಾಮದ ಭಕ್ತರು ಹಾಗೂ ಶ್ರೀಗಳಲ್ಲಿ ಯಾವುದೋ ವಿಷಯಕ್ಕೆ ವಾದ – ವಿವಾದಗಳಾಗಿ ಅಲ್ಲಿಯ ಮಠವನ್ನು ತ್ಯೆಜಿಸಿ ಈ ಗ್ರಾಮದಲ್ಲಿ ಬಂದು ಮಠವನ್ನು ಸ್ಥಾಪನೆ ಮಾಡಿದ್ದಾರೆಂದು ತಿಳಿದು ಬಂದಿದೆ. ಈ ನೂತನ ಮಠವನ್ನು ನಿರ್ಮಾಣ ಮಾಡಿ ಕಲ್ಯಾಣ ಮಂಟಪವನ್ನು ಕಟ್ಟಿಸಿದ್ದಾರೆ. ಧಾರ್ಮಿಕ ಕಾರ್ಯ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಾರೆ. ವೀರಶೈವ ಧರ್ಮದ ತತ್ವಗಳ ಪ್ರಚಾರವೇ ನಮ್ಮ ಧ್ಯೆಯವೆಂದು ಪಾಠ – ಪ್ರವಚನಗಳಲ್ಲಿ ಹೇಳುತ್ತಾರೆ. ಇವರ ತರುವಾಯ ಶ್ರೀ ಮ.ನಿ.ಪ್ರ.

ವೀರೂಪಾಕ್ಷ ಸ್ವಾಮಿಗಳು ದಿನಾಂಕ: ೦೯.೦೫.೧೯೩೯ ರಂದು ಮಠದ ಪಟ್ಟಾಧಿಕಾರವನ್ನು ವಹಿಸಿಕೊಂಡು ಮಠದ ಜೀರ್ಣೋದ್ದಾರ ಮಾಡುತ್ತಿದ್ದಾರೆ. ಭಕ್ತರೊಡನೆ ಸಂಬಂಧ ಸಂಪರ್ಕವನ್ನು ಹೊಂದಿರುತ್ತಾರೆ. ಪುರಾಣ ಪ್ರವಚನಗಳು ಶ್ರಾವಣ ಮಾಸದಲ್ಲಿ ನಡೆಸುತ್ತಾರೆ. ಮಠದಲ್ಲಿ ಅನ್ನದಾಸೋಹವನ್ನು ನಡೆಸಿಕೊಂಡು ಬರುತ್ತಿದ್ದಾರೆ.

೩.೧೧. ನೀಲಗಲ್ಲು ಹಿರೇಮಠ

ಸುಮಾರು ಆರುನೂರು ವರ್ಷಗಳ ಪ್ರಾಚೀನತೆಯ ಇತಿಹಾಸವುಳ್ಳ ಈ ಮಠವು ದೇವದುರ್ಗ ತಾಲೂಕಿನ ನೀಲಗಲ್ಲು ಗ್ರಾಮ್ರದ ಮಧ್ಯ ಭಾಗದಲ್ಲಿ ಸ್ಥಾಪನೆಗೊಂಡಿದೆ. ಈ ಮಠಕ್ಕೆ ಬೃಹನ್ಮಠ ವೆಂದು ಜನರು ಕರೆಯುತ್ತಾರೆ. ಈ ಭಾಗದ ಧಾರ್ಮಿಕ ಸಂಘಟನೆಯ ಕೇಂದ್ರ ಬಿಂದುವಾಗಿದೆ. ಸಮಾಜದ ಪರಿಸರದೊಡನೆ ನಿಕಟ ಸಂಭಂದವನ್ನು ಬೆಳೆಸಿಕೊಂಡಿರುತ್ತದೆ. ನೀಲಗಲ್ಲು ಗ್ರಾಮವು ಗುಡ್ಡಗಾಡು ಪ್ರದೇಶದ ವಿವಿಧ ರೀತಿಯ ಗಿಡ – ಮರಗಳಲ್ಲಿ ಕಂಡು ಬರುತ್ತದೆ.

ಮಠ ಸ್ಥಾಪನೆ

ಪೂಜ್ಯ ಶ್ರೀ ಷ.ಬ್ರ. ಬಸವಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ದೇಶ ಸಂಚಾರದಲ್ಲಿ ಧರ್ಮ ಪ್ರಚಾರಕೆಂದು ಬಂದು, ಈ ಗ್ರಾಮ ಮಟ್ಟಿದರು. ಧಾರ್ಮಿಕ ತತ್ವಗಳನ್ನರಿತ ಗ್ರಾಮದ ಭಕ್ತರು ಇವರಿಗೆ ಇಲ್ಲೆ ಮಠ ಮಾಡಿಕೊಂಡು ಇರಲು ಒತ್ತಾಯಿಸಿದರು. ಭಕ್ತರ ಆಸೆಯನ್ನು ತಿರಿಸಲು ಶ್ರೀಗಳು ಮಠವನ್ನು ಸ್ಥಾಪಿಸಿ, ಧರ್ಮ ಪ್ರಚಾರದ ಜತೆಗೆ ತಂಗಿದರು. ಶ್ರೀ ಮಠಕ್ಕೆ ಹೈದ್ರಾಬಾದ – ನಿಜಾಂನ ಕಾಲದಲ್ಲಿ ಸುಮಾರು ಇಪ್ಪತ್ತು ಎಕ್ಕರೆ ಭೂಮಿ ಉಂಬಳಿಯಾಗಿ ದೊರೆತ್ತಿದ್ದು, ಈಗ ಕಾಣದಂತಾಗಿದೆ.

ಪರಂಪರೆ

ಶ್ರೀ ಮಠಕ್ಕೆ ಸುಮಾರು ಎಂಟು ಸ್ವಾಮಿಗಳು ಅಧಿಕಾರ ಸ್ವೀಕರಿಸಿದ್ದರೆ, ಇಲ್ಲಿ ಕೆವಲ ನಾಲ್ಕು ಸ್ವಾಮಿಗಳ ಬಗ್ಗೆ ಇತಿಹಾಸ ದೊರೆಯುತ್ತಿದೆ. ಉಳಿದ ನಾಲ್ಕು ಜನ ಸ್ವಾಮಿಗಳ ಇತಿಹಾಸ ಸಿಕ್ಕಿಲ್ಲ. ೧) ಶ್ರೀ ಷ.ಬ್ರ. ಬಸವಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ೨) ಶ್ರೀ ಷ.ಬ್ರ.ಚನ್ನಮಲ್ಲ ಶಿವಾಚಾರ್ಯ ಮಹಾಸ್ವಾಮಿಗಳು ೩) ಶ್ರೀ ಷ. ಬ್ರ. ಶಾಂತಮಲ್ಲ ಶಿವಾಚಾರ್ಯ ಮಹಾಸ್ವಾಮಿಗಳು, ಇವರು ಪವಾಡ

ಪುರುಷ ಶಿದ್ಧಿಯೋಗಿಗಳೆಂದು ತಿಳಿದು ಬರುತ್ತಿದೆ. ಈ ಶ್ರೀಗಳ ಕಾಲದಲ್ಲಿ ಶ್ರೀ ಮಠದ ಕೀರ್ತಿ ಉನ್ನತಕ್ಕೆರಿತ್ತೆನ್ನಬಹುದು. ೪) ಶ್ರೀ ಷ. ಬ್ರ. ಶ್ರೀ ಪಂಚಾಕ್ಷರಿ ಶಿವಾಚಾರ್ಯ ಮಹಾಸ್ವಾಮಿಗಳು ಇವರು ನೂತನ ಮಠಾಧಿಪತಿಗಳು, ಶ್ರೀಗಳು ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ಶಿವಯೋಗ ಮಂದಿರದಲ್ಲಿ ಅಭ್ಯಾಸವನ್ನು ಕೈಗೊಂಡು ತಮ್ಮ ಹದಿನಾರನೆ ವಯಸ್ಸಿನಲ್ಲಿ (೧೯೬೮) ರಲ್ಲಿ ಶ್ರೀ ಮಠಕ್ಕೆ ಪಟ್ಟಾಧಿಕಾರವನ್ನು ವಹಿಸಿಕೊಂಡರು. ಅಂದಿನಿಂದ ಧಾರ್ಮಿಕ ಸಾಮಾಜಿಕ ಹಾಗೂ ಸಾಂಸ್ಕೃತಿಕ ಕಾರ್ಯಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ.

೩.೧೨. ಗೆಜ್ಜಿಬಾವಿ ಹಿರೇಮಠ

ಧಾರ್ಮಿಕ ಪರಿಸರದಲ್ಲಿಯೇ ಹುಟ್ಟಿಕೊಂಡಿರುವ ಗೆಜ್ಜಿಬಾವಿ ಹಿರೇಮಠವು ಪವಾಡಕ್ಕೆ ಹೆಸರುವಾಸಿಯಾಗಿದೆ. ಶ್ರೀ ಚನ್ನವಸವ ಶಿವಾಚಾರ್ಯ ಸ್ವಾಮಿಗಳಿಂದ ಈ ಮಠವು ಸ್ಥಾಪನೆಯಾಯಿತ್ತೆಂದು ತಿಳಿದು ಬಂದಿದೆ. ಶ್ರೀಗಳು ಹತ್ತಾರು ಕಡೆ ಅನುಷ್ಠಾನದ ಜತೆಗೆ, ಸಿದ್ಧಿ ಸಾಧಕ ಯೋಗಿಗಳಾಗಿ ಮೆರೆದವರು. ಬೆಡಿದ ಭಕ್ತರಿಗೆ ಬೆಡಿದ ವರವನ್ನು ಕೊಟ್ಟ ಮಹಾನ ಸತ್ಪುರುಷರು. ಗೆಜ್ಜಿಬಾವಿ, ಶಾಖಾಪೂರ ಹಾಗೂ ಮುಷ್ಟುರು ಗ್ರಾಮಗಳನ್ನುದಾರ ಮಾಡಿದ ಶ್ರೀ ಗಳಿವರು. ಅದ್ದರಿಂದ ಇಂದಿಗೂ ಕೂಡಾ ಶ್ರೀ "ಚನ್ನ ಬಸವೇಶ್ವರ ಮಠ" ವೆಂದು ಕರೆಯುತ್ತಾರೆ. ಶ್ರೀಗಳಿವರು ಮುನುರ ವರ್ಷಗಳ ಕಾಲ ಜೀವಂತ ಬದುಕಿ ನಂತರ ಜೀವಂತ ಸಮಾಧಿಯಾದರೆಂದು, ಇಂದಿನ ಪೂಜ್ಯರಾದ ಶ್ರೀ ಕರಿಬಸವ ಶಿವಾಚಾರ್ಯ ಸ್ವಾಮಿಗಳವರಿಂದ ತಿಳಿದುಕೊಳ್ಳಲಾಗಿದೆ.

ಪರಂಪರೆ

ಶ್ರೀ ಮಠದ ಪರಂಪರೆಯಲ್ಲಿ ಒಟ್ಟು ಇಪ್ಪತ್ತೆರಡು ಸ್ವಾಮಿಗಳು ಪಟ್ಟಾಧಿಕಾರ ವಹಿಸಿಕೊಂಡು ಮಠವನ್ನು ಅಭಿವೃದ್ಧಿಪಡಿಸಿದ್ದಾರೆ. ಅದರೆ ಶ್ರೀ ಚನ್ನವಸವ ಸ್ವಾಮಿಗಳ ಹೆಸರನ್ನೇ ಅಭಿದಾನ ಪಡೆದುಕೊಂಡು ಬೆಳೆದಿರುತ್ತದೆ. ನಮಗೆ ದೊರೆತ ಆಧಾರದಂತೆ ಕೇವಲ ಐದು ಸ್ವಾಮಿಗಳ ಹೆಸರನ್ನು ಇಂತಿವೆ.

೧) ಶ್ರೀ ಷ. ಬ್ರ. ಚೆನ್ನವಸವ ಶಿವಾಚಾರ್ಯ ಸ್ವಾಮಿಗಳು. (ಮೂಲ ಸಂಸ್ಥಾಪಕರು)

೨) ಶ್ರೀ ಷ. ಬ್ರ. ಶ್ರೀ ಚೆನ್ನಬಸವ ಮುದ್ದಾಪೆ ಕರಿಬಸವ ಶಿವಾಚಾರ್ಯ ಸ್ವಾಮಿಗಳು.

೩.) ಶ್ರೀ ಷ. ಬ್ರ. ಶ್ರೀ ಶಿವಾಚಾರ್ಯ ಸ್ವಾಮಿಗಳು.

೪) ಶ್ರೀ ಷ. ಬ್ರ. ಕರಿಬಸವ ಶಿವಾಚಾರ್ಯ ಸ್ವಾಮಿಗಳು.

೫) ಶ್ರೀ ಷ. ಬ್ರ. ಚನ್ನಬಸವ ಶಿವಾಚಾರ್ಯ ಸ್ವಾಮಿಗಳು – ಹೀಗೆ ಮಠದ ಪರಂಪರೆ ಕಂಡು ಬರುತ್ತದೆ.

### ೩.೧೩. ದೇವದುರ್ಗ ಶಿಖರ ಮಠ

ದೇವದುರ್ಗ ತಾಲೂಕಿನ ನಗರದಲ್ಲಿ ಅಂದು, (ಪ್ರಾಚೀನ ಕಾಲದಲ್ಲಿ) ಸುಮಾರು ಇಪ್ಪತ್ತೆರಡು ವೀರಶೈವ ಮಠಗಳ ಸಂಕೇತ ದೊರೆಯುತ್ತದೆ. ಆ ಮಠಗಳಾವುವೆಂದರೆ ೧) ಶಿವಶಂಕರ ಮಠ ೨) ಬಕ್ಕಯ್ಯನ ಮಠ ೩) ಶಿಖರ ಮಠ ೪) ಘೋಶಿ ಮಠ ೫) ಕರಡಿಗುಡ್ಡ ಮಠ ೬) ಶ್ರೀ ಕಂಬಳಿ ಅಯ್ಯಪ್ಪನ ಮಠ ೭) ಫಲಹಾರಿ ಮಠ ೮) ಶಿವಲಿಂಗಯ್ಯ ಮಠ ೯) ಸಿರಿನಾಥಪ್ಪನ ಮಠ ೧೦) ದೊಡ್ಡಂಬಳಿ ಮಠ ೧೧) ಸ್ಥಾವರ ಮಠ ೧೨) ಪತ್ರಿ ಮಠ ೧೩) ಯಳಗಯ್ಯನ ಮಠ ೧೪) ಮಟ್ಟಿ ಮಠ ೧೫) ಪೇಟೆ ಮಠ ೧೬) ಗಣಾಚಾರಿ ಮಠ ೧೭) ಮಠಪತಿ ಮಠ ೧೮) ಕಂಥಿ ಮಠ ೧೯) ಭಿಕ್ಷುಕಯ್ಯನ ಮಠ ೨೦) ಜಾಗಟೆ ಮಠ ೨೧) ಫಲಹಾರಿ ಮಠ – ಹೀಗೆ ಇಪ್ಪತ್ತೆರಡು ಮಠಗಳು ದೊರೆಯುತ್ತವೆ. ಅದರೆ ಈ ಮಠಗಳೆಲ್ಲ ಈಗ ಮಠಾಧೀಶರಿಲ್ಲದೆ ಖಾಲಿ ಉಳಿದಿದೆ. ಕೆಲವು ಮಠಗಳಲ್ಲಿ ಮನೆಯನ್ನು ಮಾಡಿಕೊಂಡು ಸಂಸಾರಿಕ ಜೀವನ ನಡೆಸುತ್ತಿದ್ದಾರೆ. ಕೆಲವು ಮಠಗಳು ಹಾಳು ಬದ್ದಿವೆ. ಈಗ ಕೇವಲ ಶಿಖರ ಮಠದಲ್ಲಿ ಮಾತ್ರ ಮಠಾಧೀಶರಿರುತ್ತಾರೆ. ಧಾರ್ಮಿಕ ಸಾಮಾಜಿಕ ಹಾಗೂ ಸಾಂಸ್ಕೃತಿಕ ಕಾರ್ಯಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ.

ಸಿದ್ಧರಾಮೇಶ್ವರ ಶಿಖರ ಮಠವು ಐತಿಹಾಸಿಕ ಪೇಕ್ಷಣಿಯ ಕೇಂದ್ರ ಸ್ಥಳವಾಗಿದೆ. ಈ ಮಠವು ಉಜ್ಜಯನಿ ಪೀಠದ ಶಾಖಾ ಮಠವಾಗಿ ಶಿಷ್ಯವರ್ಗದ ಪರಂಪರೆಯಲ್ಲಿ ಬೆಳೆದು ಬಂದಿದೆ. ಸಿದ್ದರಾಮೇಶ್ವರ ಸ್ವಾಮಿಗಳು ಶ್ರೀ ಶೈಲ ದಲ್ಲಿ ಅನುಷ್ಠಾನ ಕೈಗೊಂಡು ತಪಸ್ಸಾಧನೆಯಲ್ಲಿ ಪ್ರಸಿದ್ದಿಯನ್ನು ಪಡೆದುಕೊಂಡು ದೇಶ ಸಂಚಾರ ಕೈಗೊಂಡು ಈ ಗ್ರಾಮದಲ್ಲಿ ಮಠವನ್ನು ಸ್ಥಾಪಿಸಿದರೆಂಬ ಉಹೆಗಳಿವೆ. ಈ ಮಠಕ್ಕೆ ಸುಮಾರು ಸ್ವಾಮಿಗಳು ಅಧಿಕಾರವನ್ನು ಸ್ವೀಕರಿಸಿ ಸುವ್ಯವಸ್ಥಿತ ರೀತಿಯಲ್ಲಿ ಮಠವು ಮುನ್ನಡೆಸಿಕೊಂಡುಬಂದಿರುವುದು ಕಂಡು ಬರುತ್ತದೆ.

ಪರಂಪರೆ

೧) ಶ್ರೀ ಷ. ಬ್ರ. ಸಿದ್ಧರಾಮೇಶ್ವರ ಸ್ವಾಮಿಗಳು (ಮಠದ ಮೂಲ ಸಂಸ್ಥಾಪಕರು)

೨) ಶ್ರೀ ಷ. ಬ್ರ. ಶ್ರೀ ಮೂಕಬಸವಲಿಂಗ, ಶಿವಾಚಾರ್ಯ ಸ್ವಾಮಿಗಳು

೩) ಷ. ಬ್ರ. ಶ್ರೀ ರೇವಣ ಸಿದ್ಧ ಶಿವಾಚಾರ್ಯ ಸ್ವಾಮಿಗಳು

೪) ಶ್ರೀ ಷ. ಬ್ರ. ಶ್ರೀ ಮಹಾಂತಲಿಂಗ, ಶಿವಾಚಾರ್ಯ ಸ್ವಾಮಿಗಳು

೫) ಷ. ಬ್ರ. ಶ್ರೀ ಗುರುಲಿಂಗ, ಶಿವಾಚಾರ್ಯ ಸ್ವಾಮಿಗಳು

೬) ಷ. ಬ್ರ. ಶ್ರೀ ಸಿದ್ಧರಾಮೇಶ್ವರ, ಶಿವಾಚಾರ್ಯ ಸ್ವಾಮಿಗಳು

೭) ಷ. ಬ್ರ. ಶ್ರೀ ಗುರುಸಿದ್ಧರಾಮೇಶ್ವರ, ಶಿವಾಚಾರ್ಯ ಸ್ವಾಮಿಗಳು

೮) ಷ. ಬ್ರ. ಶ್ರೀ ನಾಗಭೂಷಣ ಲಿಂಗ, ಶಿವಾಚಾರ್ಯ ಸ್ವಾಮಿಗಳು

೯) ಷ. ಬ್ರ. ಶ್ರೀ ಅನ್ನದಾನ ಲಿಂಗ, ಶಿವಾಚಾರ್ಯ ಸ್ವಾಮಿಗಳು

೧೦) ಷ. ಬ್ರ. ಸಿದ್ಧರಾಮೇಶ್ವರ, ಶಿವಾಚಾರ್ಯ ಸ್ವಾಮಿಗಳು

೧೧) ಷ. ಬ್ರ. ಶ್ರೀ ಕಪಿಲ ಸಿದ್ಧರಾಮ, ಶಿವಾಚಾರ್ಯ ಸ್ವಾಮಿಗಳು – (ನೂತನ ಶ್ರೀಗಳು)

– ಹೀಗೆ ಶ್ರೀ ಮಠದ ಪರಂಪರೆ ಬೆಳೆದು ಬಂದಿದೆ. ಗ್ರಾಮದ ಹೊರವಲಯದಲ್ಲಿರುವ ಗುಡ್ಡದ ಮೇಲೆ ಈ ಮಠವನ್ನು ಸ್ಥಾಪಿಸಿದ್ದರಿಂದ ಈ ಮಠಕ್ಕೆ "ಶಿಖರ ಮಠ" ವೆಂದು ಕರೆಯುತ್ತಾರೆ. ಮೂರನೆಯ ಪೀಠಾಧಿಪತಿಯಾದ ಶ್ರೀ ಷ. ಬ್ರ. ರೇವಣಸಿದ್ಧ ಸ್ವಾಮಿಗಳು ಶಿಖರದಲ್ಲಿರುವ ಮಠವನ್ನು ಕೆಳಗಡೆ ತಂದು ಸ್ಥಾಪಿಸಿದ್ದಾರೆ. ಆರನೆಯ ಪೀಠಾಧಿಪತಿಯಾದ ಶ್ರೀ ಷ. ಬ್ರ. ಶ್ರೀ ಸಿದ್ಧರಾಮೇಶ್ವರ ಸ್ವಾಮಿಗಳು ಪವಾಡ ಪುರುಷರು ಸಿದ್ಧಿ ಪುರುಷರು ಚಿಕ್ಕ ವಯಸ್ಸಿನಲ್ಲಿ ಪವಾಡಗಳಲ್ಲಿ ಮೆರೆದರು. ನಾಡಿನಲ್ಲಿ ಹೆಸರು ವಾಸಿಯಾಗಿದ್ದರು. ತಮ್ಮ ಮೂವತ್ತಾರನೆಯ ವಯಸ್ಸಿನಲ್ಲಿಯೇ ತಪಸ್ಸಿನಲ್ಲಿ ಕುಳಿತಾಗ ಜಿವಂತ ಸಮಾಧಿಸ್ಥರಾದರು.

ಈ ಮಠವು ಧಾರ್ಮಿಕ ಪ್ರಚಾರದ ಕೇಂದ್ರಬಿಂದುವಾಗಿ ಬೆಳೆಯುತ್ತಿದೆ. ನೂತನ ಶ್ರೀಗಳಾದ ಷ. ಬ್ರ. ಶ್ರೀ ಕಪಿಲಸಿದ್ಧರಾಮ ಶಿವಚಾರ್ಯ ಸ್ವಾಮಿಗಳು ಧರ್ಮ ಸಂಘಟನೆಯ ಜತೆಗೆ, ದರ್ಮ ಪ್ರಚಾರ ಮಾಡಲು ಹಳ್ಳಿ – ಪಟ್ಟಣಗಳಲ್ಲಿ ಪಾಠ ಪ್ರವಚನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ಅಸ್ಪೃಶ್ಯತಾ ನಿವಾರಣೆ ಸಲುವಾಗಿ ಸತತವಾಗಿ ಶ್ರಮಿಸುತ್ತಾರೆ. ಸಾಮಾಜಿಕ ಹಾಗೂ ಸಾಂಸ್ಕೃತಿಕವಾದ ಹಲವಾರು

ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ಶ್ರೀ ಮಠದಲ್ಲಿ ಸತತವಾಗಿ ಅನ್ನದಾಸೋಹ ನಡೆಸಿಕೊಂಡು ಬರುತ್ತಿದ್ದಾರೆ.

೩.೧೪. ನವಿಲಕಲ್ಲು ಹಿರೇಮಠ

ಮಾನವಿ ತಾಲೂಕಿನ ನವಿಲುಕಲ್ಲು ಗ್ರಾಮದ ಹಿರೇಮಠವು ರಂಭಾಪುರಿ ಪೀಠದ ಪುತ್ರ ವರ್ಗದ ಪರಂಪರೆಯಲ್ಲಿ ಬೆಳೆದು ಬಂದಿದೆ. ಈ ಮಠವು ಪುರಾತನ ಮಠವಾಗಿದೆ. ಶ್ರೀ ಸೋಮಶೇಖರ ಶಿವಾಚಾರ್ಯ ಸ್ವಾಮಿಗಳು ದೇಶ ಸಂಚಾರದ ಜೊತೆಗೆ ಧರ್ಮ ಪ್ರಚಾರದಲ್ಲಿ ತೊಡಗಿ, ಈ ಗ್ರಾಮದಲ್ಲಿ ಬಂದು ಮಠವನ್ನು ಸ್ಥಾಪಿಸಿದರೆಂಬುದು ತಿಳಿದು ಬರುತ್ತದೆ. ಈ ಸ್ವಾಮಿಗಳು ಲಿಂಗೈಕ್ಯರಾದ ನಂತರ ಹಲವಾರು ವರ್ಷಗಳ ಕಾಲ ಮಠವು ಅನಾಥವಾಗಿ ಉಳಿದಿತ್ತು. ಮಠಾಧೀಶರಿಗಾಗಿ ಶ್ರೀಮಠವು ಹಸಿದು ಕುಳಿತುಕೊಂಡಿತ್ತು. ಅಂತಹ ಸಂದರ್ಭದಲ್ಲಿ ಶ್ರೀ ಷ. ಬ್ರ. ಪಂಚಾಕ್ಷರಿ ಶಿವಾಚಾರ್ಯ ಸ್ವಾಮಿಗಳು ಮಠದ ಅಧಿಕಾರವನ್ನು ವಹಿಸಿಕೊಂಡರು. ಸ್ಥಗಿತಗೊಂಡ ಧಾರ್ಮಿಕ ಕಾರ್ಯ ಚಟುವಟಿಕೆಗಳು ಪುಃನ ಪ್ರಾರಂಭಿಸಿದರು. ಮಠದಲ್ಲಿ ಪಾಠ ಪ್ರವಚನ ನಡೆಸಿಕೊಂಡು ಬರುತ್ತಾರೆ. ಕೃತ ಗದ್ದುಗೆಗೆ ನಿತ್ಯ ಪೂಜ್ಯ ನಡೆಯುತ್ತದೆ. ಶ್ರೀ ಮಠದಲ್ಲಿ ಅನ್ನ ದಾಸೋಹ ನಡೆಸಿಕೊಂಡು ಬರುತ್ತಿದ್ದಾರೆ.

೩. ೧೫. ಅಮರೇಶ್ವರ ವಿರಕ್ತಮಠ

ಮಾನವಿ ತಾಲೂಕಿನಲ್ಲಿಯೇ ಬರುವ ಅಮರೇಶ್ವರ ಗ್ರಾಮದ ವಿರಕ್ತಮಠವು ಧಾರ್ಮಿಕ ಪ್ರಚಾರಕೆಂದೇ ಸ್ಥಾಪನೆಗೊಂಡಿದೆ. ೧೯೫೪ ರ ಅಗಸ್ಟ ಹದಿಮೂರನೆ ತಾರಿಖಿನಂದು ಶ್ರೀ ಮಠವು ಶ್ರೀ ಚನ್ನಬಸವ ಶಿವಯೋಗಿಗಳು, (ಬಳಬಳ್ಳಾರಿ) ಹಾಗೂ ಶ್ರೀ ವೀರೂಪಾಕ್ಷ ದೇಶಿಕೇಂದ್ರ ಸ್ವಾಮಿಗಳು (ಭೋಗಾಪೂರ) ಇವರಿಬ್ಬರ ಅಮೃತ ಹಸ್ತದಿಂದ ಶ್ರೀ ಮಠವು ಸ್ಥಾಪನೆಯಾಯಿತೆಂದು ತಿಳಿದು ಬಂದಿದೆ. ಹಳ್ಳಿ – ಪಟ್ಟಣಗಳಿಗೆ ಸಂಚರಿಸಿ ಧಾರ್ಮಿಕ ಪ್ರಚಾರವನ್ನು ಮಾಡಿದರು. ಪಾಠ ಪ್ರವಚನಗಳ ಮುಖಾಂತರ ಜನರಲ್ಲಿರುವ ಕಲ್ಮಶಗಳನ್ನು ಕಿತ್ತೊಗೆಯಲು ಪ್ರಯತ್ನಿಸಿದರು, ಶ್ರೀ ಚನ್ನಬಸವ ಶಿವಯೋಗಿಗಳು ತಪೋನಿಷ್ಠರಾಗಿದ್ದರು. ಭಕ್ತರ ಉದ್ಧಾರ ಬಯಸುತ್ತಿದರು. ಇವರು ಅರಣ್ಯದಲ್ಲಿಯೇ ತಪಸ್ಸಿನಲ್ಲಿ ತಲ್ಲಿನರಾಗುತ್ತಿದ್ದರು. ಆದ್ದರಿಂದ ''ಅಡವಿ ಅಮರೇಶ್ವರ ಮಠ''ಯೆಂದು ಕರೆಯುತ್ತಾರೆ. ಇವರು ೭೫ನೇ ವರ್ಷ ತುಂಬಿದ ಜನ್ಮ ದಿನಾಚರಣೆಯ ಸಂದರ್ಭದಲ್ಲಿ ಬಹಳ ವಿಜೃಂಬಣೆಯಿಂದ ನೆರವೆರಿಸಿದರು. ಆ

ಸಂದರ್ಭದಲ್ಲಿ ಶ್ರೀ ಮೃತುಂಜಯ ದೇವರು ಎಂಬುವವರೇ ಶ್ರೀ ಶಾಂತಮಲ್ಲ ಸ್ವಾಮಿಗಳಿಂದು ಅಭಿದಾನ ಪಡೆದು ಮರಿಯಾಗಿ ನೇಮಕ ಗೊಂಡು ಅಧಿಕಾರವನ್ನು ವಹಿಸಿಕೊಂಡರು. ಮಂದೆ ಮಠವನ್ನು ಸುವ್ಯವಸ್ಥಿತ ರೀತಿಯಲ್ಲಿ ನಡೆಸಿಕೊಂಡು ಬರುತ್ತಿದ್ದಾರೆ.

೩. ೧೬. ಊಟಕನೂರ ವಿರಕ್ತ ಮಠ

ಮಾನವಿ ತಾಲೂಕಿನ ಊಟಕನೂರು ಗ್ರಾಮದಲ್ಲೊಂದು ವಿರಕ್ತ ಮಠವಿದೆ. ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಗಣನೀಯವಾದ ಸೇವೆಯನ್ನು ಸಲ್ಲಿಸಿದೆ. ಬೆಳಗಾಂವ ಜಿಲ್ಲೆಯ ಗೋಕಾಕ ತಾಲೂಕಿನ ಅಂಕಲಿ ಮಠದ ಸಂಸ್ಥಾಪಕರಾದ ಶ್ರೀ ಅಡವಿ ಸಿದ್ದರಾಮೇಶ್ವರ ಸ್ವಾಮಿಗಳು ಈ ಗ್ರಾಮದಲ್ಲಿ ಮಠವನ್ನು ಸ್ಥಾಪಿಸಿದರು. ಇವರು ತಪೋನಿಷ್ಠರು, ಸಿದ್ಧಿಪುರುಷರೆಂದು ಅಭಿದಾನ ಪಡೆದವರು. ಗ್ರಾಮದಲ್ಲಿ ಪಾಠ ಪ್ರವಚನಗಳ ಮುಖಾಂತರ ಜನರಲ್ಲಿರುವ ಕಲ್ಮಷಗಳನ್ನು ಕಿತ್ತೊಗೆಯಲು ಹಗಲಿರುಳು ಶ್ರಮಿಸಿದವರು. ಅನುಭವ ಗೋಷ್ಠಿಗಳನ್ನು ಏರ್ಪಡಿಸಿ ಅದರ ಮೂಖಾಂತರ ಹಲವಾರು ವಿದ್ವಾಂಸರನ್ನು, ಪಂಡಿತರನ್ನು, ಸಾಹಿತಿಗಳನ್ನು ಕರೆಯಿಸಿ, ಧಾರ್ಮಿಕೋಪದೇಶ ಉಪನ್ಯಾಸ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ಶ್ರೀ ಮಠದಲ್ಲಿ ಅನ್ನದಾಸೋಹ ಕಾರ್ಯಕ್ರಮವನ್ನು ನಡೆಸಿಕೊಂಡು ಬರುತ್ತಿದ್ದಾರೆ. ಶ್ರೀಗಳು ಧಾರ್ಮಿಕ ಪ್ರಚಾರದೊಂದಿಗೆ ಮಠವನ್ನು ಅಭಿವೃದ್ಧಿ ಪಡಿಸುತ್ತಿದ್ದಾರೆ.

ರಾಯಚೂರ ಜಿಲ್ಲೆಯ ಸಿಂದನೂರು ನಗರದಲ್ಲಿ ಪುರಾತನ ಕಾಲದ ಒಂಬತ್ತು ವೀರಶೈವ ಮಠಗಳು ಅಸ್ತಿತ್ವದಲ್ಲಿವೆ. ಶ್ರೀ ಕಲ್ಮಠ, ಶ್ರೀ ಕಂಟಿ ಮಠ, ಶ್ರೀ ಸಿದ್ಧಾಂತಿ ಮಠ, ಶ್ರೀ ಗುಗ್ಗಳ ಮಠ, ಶ್ರೀ ಹಿರೇಮಠ, ಶ್ರೀ ಪರಗಣಾಚಾರಿ ಮಠ, ಶ್ರೀ ಸಗರದ ಮಠ, ಶ್ರೀ ಬಜಾರ ಮಠ, ಶ್ರೀ ವಿರಕ್ತ ಮಠ – ಹೀಗೆ ಒಂಬತ್ತು ವೀರಶೈವ ಮಠಗಳು ದೊರೆಯುತ್ತವೆ. ಇವುಗಳಲ್ಲಿ ಮೂರು ಹಿರೇಮಠಗಳಾದರೆ, ಆರು ಮಠಗಳು ವಿರಕ್ತ ಸಂಪ್ರದಾಯಕ್ಕೆ ಸಂಬಂಧಿಸಿದೆ. ಈ ಮಠಗಳೆಲ್ಲ ಕಾಲಾನುಕ್ರಮವಾಗಿ ಅಳಿಸಿ ಹೋಗಿದೆ. ಹೆಸರಿಗೆ ಮಾತ್ರ ಮಠಗಳೆಂದು ಪರಿಗಣಿಸಲಾಗಿದೆ. ಅಲ್ಲದೆ ಕೆಲವು ಮಠಗಳು ಮನೆಳಾಗಿ ಪರಿವರ್ತನೆಗೊಂಡಿವೆ. "ಶ್ರೀ ಕಲ್ಮಠ" ಒಂದನ್ನು ಮಾತ್ರ ಧಾರ್ಮಿಕ, ಸಾಂಸ್ಕೃತಿಕ, ಕಾರ್ಯಚಟುವಟಿಕೆಗಳ ಜತೆಗೆ ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡು ಬಂದಿದೆ.

೩.೧೭. ಕಲ್ಮಠ

ಧಾರ್ಮಿಕ ಪ್ರಚಾರದ ಕೇಂದ್ರ ಬಿಂದುವಾಗಿ ಈ ಮಠವು ಕಾರ್ಯ ನಡೆಸುತ್ತಿದೆ. ಉಜ್ಜಯನಿ ಶಾಖಾಮಠವಾಗಿ ಪುತ್ರವರ್ಗದ ಪರಂಪರೆಯಲ್ಲಿ ಈ ಮಠವು ಬೆಳೆದು ಬಂದಿದೆ. ಈದಕ್ಕೆ ಹಿರೇಮಠವೆಂದು ಸಹ ಕರೆಯುತ್ತಾರೆ. ಶ್ರೀ ಸಿದ್ದಲಿಂಗ ಶಿವಾಚಾರ್ಯ ಸ್ವಾಮಿಗಳು ಧರ್ಮ ಪ್ರಚಾರಕ್ಕೆಂದು ಲೋಕ ಸಂಚಾರ ಕೈಗೊಂಡು ಹಲವಾರು ಬೆಟ್ಟ ಗುಡ್ಡ ಪ್ರದೇಶಗಳಲ್ಲಿ ಅನುಷ್ಠಾನಗಳನ್ನು ಕೈಗೊಂಡು, ಕೊನೆಗೆ ಈ ಗ್ರಾಮದಲ್ಲಿ ಬಂದು ನೆಲೆಸಿದರು. ಗ್ರಾಮದ ಭಕ್ತರೆಲ್ಲರೂ ಕೂಡಿ, ಶ್ರೀಗಳಿಗೆ ತಮ್ಮ ಗ್ರಾಮದಲ್ಲಿ ಇಲ್ಲೆ ನೆಲೆಸಲು ಕಳಕಳಿಯಿಂದ ಭಿನ್ನವಿಸಿಕೊಂಡಾಗ, ಭಕ್ತರ ಕರೆಗೆ ಓಗೊಟ್ಟು ಶ್ರೀಗಳು ಒಪ್ಪಿಕೊಂಡರು. ಅಂದಿನ ಕಾಲದಲ್ಲಿ ಸುಂದರವಾದ ಕಲ್ಲಿನಿಂದ ಮಠವನ್ನು ಸ್ಥಾಪಿಸಿದರಿಂದ ಈ ಮಠಕ್ಕೆ '' ಕಲ್ಮಠ'' ವೆಂದು ಕರೆಯುತ್ತಾರೆ. ಒಂದೇ ಕಲ್ಲಿನಸಲ್ಲಿ ಕೆತ್ತಲ್ಪಟ್ಟ ಸಿಂಹಾಸನವು ಶ್ರೀ ಮಠದ ಪರಂಪರೆಯ ಇತಿಹಾಸವನ್ನು ಎತ್ತಿ ಹೇಳುವಂತಿದೆ. ಮಠದಲ್ಲಿ '' ಸಭಾ ಮಂಟಪ'' '' ನವರಂಗ ಮಂಟಪ''ಗಳನ್ನು ನಿರ್ಮಾಣ ಗೊಂಡಿವೆ. ಪುರಾತನ ಬೆಳ್ಳಿಯ ಪೂಜಾ ಪರಿಕಾರಗಳು ಕಂಡು ಬರುತ್ತವೆ. ಶ್ರೀ ಮಠವು ಹೆಚ್ಚು ಪ್ರಸಿದ್ಧಿಯನ್ನು ಪಡೆದುಕೊಂಡಿದೆ.

ಮಠದ ಪರಂಪರೆ

ಶ್ರೀ ಮಠಕ್ಕೆ ಒಟ್ಟು ಮೂರು ಸ್ವಾಮಿಗಳು ಅಧಿಕಾರವನ್ನು ಸ್ವೀಕರಿಸಿದ್ದಾರೆ. ಎರಡನೇ ಪೀಠಾಧಿಪತಿಯಾದ ಶ್ರೀ ಷ. ಬ್ರ. ಬಸವಲಿಂಗ ಶಿವಾಚಾರ್ಯ ಸ್ವಾಮಿಗಳು ಲಿಂಗೈಕ್ಯರಾದ ನಂತರ ಕೆಲವು ವರ್ಷಗಳು ಅಂದರೆ ಸುಮಾರು ಆರವತ್ತೆರಡು ವರ್ಷಗಳ ಕಾಲ ಶ್ರೀ ಮಠವು ಅನಾಥವಾಗಿ ಉಳಿದಿತು. ಮಠದ ಪರಂಪರೆಯಲ್ಲಿ ಪ್ರಥಮವಾಗಿ ಶ್ರೀ ಷ. ಬ್ರ. ಸಿದ್ದಲಿಂಗ ಶಿವಾಚಾರ್ಯ ಸ್ವಾಮಿಗಳು ಮಠದ ಮೂಲಗುರುಗಳು ಎರಡನೆಯದಾಗಿ ಶ್ರೀ ಷ. ಬ್ರ. ಬಸವಲಿಂಗ ಶಿವಾಚಾರ್ಯ ಸ್ವಾಮಿಗಳು ಮೂರನೆಯದಾಗಿ ಶ್ರೀ ಷ. ಬ್ರ. ಸಿದ್ದಲಿಂಗ ಶಿವಾಚಾರ್ಯ ಸ್ವಾಮಿಗಳು, ೧೯೮೮ ರ ಮಾರ್ಚ ೨೬ ರಂದು ಉಜ್ಜಯನಿ ಪೀಠದ ಜಗದ್ಗುರು ಶ್ರೀ ಮರುಳಾರಾಧ್ಯ ಶಿವಾಚಾರ್ಯ ಭಗವತ್ಪಾದಕರ ಸಾನಿಧ್ಯದಲ್ಲಿ ''ಶ್ರೀ ಸಿದ್ದಲಿಂಗ ಶಿವಾಚಾರ್ಯ ಸ್ವಾಮಿ'' ಗಳೆಂದು ಅಭಿದಾನ ಪಡೆದು ಅಧಿಕಾರಮ್ನು ಸ್ವೀಕರಿಸಿಕೊಂಡರೆಂದು ತಿಳಿದು ಬಂದಿದೆ.

ನೂತನ ಶ್ರೀಗಳು ಮಠದಲ್ಲಿ ಧಾರ್ಮಿಕ ಹಾಗೂ ಸಾಮಾಜಿಕ ಸಾಂಸ್ಕೃತಿಕ ಕಾರ್ಯಚಟುವಟಿಗಳನ್ನು ಸದಾ ನಡೆಸಿಕೊಂಡು ಬರುತ್ತಿದ್ದಾರೆ. ಹಿಂದಿನ ಗುರುಗಳ ಜಯಂತೋತ್ಸವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದಾರೆ. ಮಠದಲ್ಲಿ ಪುರಾಣ ಪ್ರವಚನ ಕಾರ್ಯಕ್ರಮಗಳನ್ನು ನಡೆಸುತ್ತಾರೆ. ಶ್ರಾವಣ ಮಾಸದಲ್ಲಿ ಧಾರ್ಮಿಕ ಗೋಷ್ಠಿಗಳನ್ನು ನಡೆಸಿ ನಾಡಿನ ವಿದ್ವಾಂಸರನ್ನು ಕರೆಸುತ್ತಾರೆ. ಅವರಿಂದ ಉಪನ್ಯಾಸ ಕಾರ್ಯಕ್ರಮವನ್ನಿಡುತ್ತಾರೆ.

೩. ೧೮. ಮುಳ್ಳೂರ ವಿರಕ್ತಮಠ

ಸಿಂಧನೂರ ತಾಲೂಕಿನ ಮುಳ್ಳೂರ ಗ್ರಾಮದಲ್ಲೊಂದು ವಿರಕ್ತ ಮಠ ಇದೆ. ಗ್ರಾಮದ ಹೊರವಲಯದಲ್ಲಿ ಶ್ರೀ ಶಂಭುಲಿಂಗೇಶ್ವರ ಮಹಾಸ್ವಾಮಿಗಳು ಈ ಮಠವನ್ನು ಸ್ಥಾಪನೆ ಮಾಡಿದರಿಂದ ಇದಕ್ಕೆ ''ಶಂಭುಲಿಂಗೇಶ್ವರ ಮಠ'' ವೆಂದು ಕರೆಯುತ್ತಾರೆ. ಶ್ರೀಗಳವರು ಪವಾಡ ಪುರುಷ ಸಿದ್ಧಿಪುರುಷರೆಂದು ಪ್ರಸಿದ್ಧಿ ಪುರುಷರೆಂದು ಕೀರ್ತಿ ಪಡೆದಿದ್ದರು. ಮಠದಲ್ಲಿ ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಿದ್ದರು. ೧೯೮೬ ರಲ್ಲಿ ಲಿಂಗೈಕ್ಯರಾದರು. ಇವರ ಗದ್ದುಗೆ ಶ್ರೀಮಠದಲ್ಲಿ ದೊರೆಯುತ್ತದೆ. ಇತ್ತೀಚಿನ ಶ್ರಿಗಳಾದ ಶ್ರೀ ಬಸವಲಿಂಗಯ್ಯಾ ಮಹಾಸ್ವಾಮಿಗಳು ಮಠದ ಅಧಿಕಾರವನ್ನು ವಹಿಸಿಕೊಂಡು ಮಠದ ಜಾಗೃತಿಯನ್ನುಂಟು ಮಾಡುತ್ತಿದ್ದಾರೆ. ಪೂರ್ವ ಪೀಠಾಧಿಪತಿಯ ಗದ್ದುಗೆಗೆ ನಿತ್ಯಪೂಜೆ ನಡೆಯುತ್ತದೆ. ಧಾರ್ಮಿಕ ಕಾರ್ಯಕ್ರಮಗಳನ್ನು ಸ್ವಲ್ಪಮಟ್ಟಿಗೆ ನಡೆಸಲು ಪ್ರಯತ್ನಿಸುತಿದ್ದಾರೆ.

೩. ೧೯. ಗೋಪುರಕಲ್ಲು ಹಿರೇಮಠ

ಸಿಂಧನೂರ ತಾಲೂಕಿನ ಗೋಪುರಕಲ್ಲು ಗ್ರಾಮದ ಹಿರೇಮಠವು ಧಾರ್ಮಿಕ ಕಾರ್ಯಚಟುವಟಿಕೆಗಳ ಕೇಂದ್ರ ಬಿಂದುವಾಗಿ ಇತ್ತೀಚಿಗೆ ಸ್ಥಾಪನೆಯಾಗಿದೆ. ಈ ಮಠವು ಕರಿ ವೀರಭದ್ರೇಶ್ವರ ಮಹಾಸ್ವಾಮಿಗಳು ಉಜ್ಜಯನಿ ಪೀಠದ ಶಾಖಾ ಮಠವಾಗಿ ಇಲ್ಲಿ ಸ್ಥಾಪನೆ ಮಾಡಿದ್ದಾರೆ. ಈ ಮಠಕ್ಕೆ ''ಕರಿವೀರಭದ್ರೇಶ್ವರ ಮಠ'' ವೆಂದು ಜನರು ಕರೆಯುವ ವಾಡಿಕೆ ಇದೆ. ಶ್ರಿಗಳು ಧಾರ್ಮಿಕ ಸಂಘಟನೆಯ ಜತೆಗೆ ಧರ್ಮ ಜಾಗೃತಿಯನ್ನುಂಟು ಮಾಡಿದ್ದಾರೆ. ಜನರಲ್ಲಿ ಅರಿವಿನ ಬೀಜವನ್ನು ಬಿತ್ತಿದ್ದರು. ಹಳ್ಳಿ ಪಟ್ಟಣಗಳಿಗೆ ಸಂಚರಿಸಿ ಪಾಠ ಪ್ರವಚನಗಳ ಮುಖಾಂತರ ಧರ್ಮೋಪದೇಶ ಸಾರಿದರು. ಧರ್ಮ ಜಾಗೃತಿಯ ಸಂಚರದಲ್ಲಿದ್ದಾಗಲೆ, ''ಮುಕ್ಕುಂಡಿ'' ಯೆಂಬ ಗ್ರಾಮದಲ್ಲಿ ನಿಧನ ರಾದರು. ಇವರ ಗದ್ದಗೆ ಶ್ರೀ

ಮುಕ್ಕುಂಡಿಯಲ್ಲಿಯೇ ಸ್ಥಾಪನೆಯಾಗಿದೆ. ಇವರ ತರುವಾಯ ಹಲವಾರು ವರ್ಷಗಳ ಕಾಲ ಮಠವು ಮಠಾಧೀಶರಿಲ್ಲದೆ ಖಾಲಿ ಉಳಿದಿತ್ತು. ಗ್ರಾಮದ ಜನರೆಲ್ಲ ಕೂಡಿ ಶ್ರೀ "ಚೆನ್ನಯ್ಯಾ ಸ್ವಾಮಿ" ಯೆಂಬ ಗುರುಗಳಿಗೆ ಮಠದ ಅಧಿಕಾರವನ್ನು ವಹಿಸಿಕೊಟ್ಟರು. ಅಂದಿನಿಂದ ಶ್ರೀ ಮಠವು ಧಾರ್ಮಿಕ ಕ್ಷೇತ್ರದಲ್ಲಿ ತನ್ನದೆಯಾದ ಮಿತಿಯಲ್ಲಿ ಸೇವೆ ಸಲ್ಲಿಸುತ್ತಿದೆ.

೩. ೨೦. ತುರುಬಿಹಾಳು ಹಿರೇಮಠ

ಸಿಂಧನೂರ ತಾಲೂಕಿನ ತುರಬಿಹಾಳು ಗ್ರಾಮದ ಹಿರೇಮಠವು ಶ್ರೀ ವೀರಸಂಗ ಶಿವಾಚಾರ್ಯ ಸ್ವಾಮಿಗಳು ಸ್ಥಾಪನೆ ಮಾಡಿದ್ದಾರೆ. ಈ ಪೀಠಾಧಿಪತಿಯವರು ಲಿಂಗೈಕ್ಯರಾದ ನಂತರ ಕೆಲವು ವರ್ಷಗಳ ಕಾಲ ಮಠವು ಮಠಾಧೀಶರಿಲ್ಲದೇ ಖಾಲಿ ಉಳಿದಿತ್ತು. ನಂತರ ಶ್ರೀ ಸಿದ್ದಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಮಠದ ಅಧಿಕಾರವನ್ನು ವಹಿಸಿಕೊಂಡು ಮಠದ ಜಾಗೃತಿಯನ್ನು ಧರ್ಮ ಜಾಗೃತೆಯನ್ನು ಮಾಡಿದರು. ಇವರು ಲಿಂಗೈಕ್ಯರಾದ ನಂತರ ಶ್ರೀ ವೀರಸಂಗಯ್ಯಾ ಶಿವಾಚಾರ್ಯ ಮಹಾಸ್ವಾಮಿಗಳು ಮಠದ ಅಧಿಕಾರವನ್ನು ವಹಿಸಿಕೊಂಡರು. ಇವರು ಧಾರ್ಮಿಕ ಕಾರ್ಯ ಚಟುವಟಿಕೆಗಳನ್ನು ನಡೆಸಿಕೊಂಡು ಬಂದರು. ನಂತರ ಶ್ರೀ ಅಮರಗುಂಡ ದೇಶಿಕರಿಗೆ ಇತ್ತೀಚಿಗೆ ಮಠದ ಮರಿಯನ್ನಾಗಿ ನೇಮಿಸಲಾಗಿದೆ. ಅವರು ಮಠದ ಜವಾಬ್ದಾರಿಯನ್ನು ವಹಿಸಿಕೊಂಡ ಮಠ ಉತ್ತಮ ರೀತಿಯಲ್ಲಿ ಮುನ್ನಡೆಸಿಕೊಂಡು ಬರುತ್ತಿದ್ದಾರೆ.

೩. ೨೧. ಚಿಕ್ಕಸುಗೂರ ಚೌಕಿ ಮಠ

ರಾಯಚೂರ ತಾಲೂಕಿನಲ್ಲಿ ಕಂಡುಬರುವ ಚಿಕ್ಕಸುಗೂರ ಗ್ರಾಮದ ವಿರಕ್ತ ಮಠಕ್ಕೆ ಚೌಕಿ ಮಠವೆಂದು ಕರೆಯುತ್ತಾರೆ. ಈ ಮಠವು ಧಾರ್ಮಿಕ ಕೇಂದ್ರ ಬಿಂದುವಾಗಿ ಬೆಳೆವಣಿಗೆಯನ್ನು ಹೊಂದಿದೆ. ಈ ಮಠವು ಪುರಾತನ ಕಾಲದಲ್ಲಿ ಸ್ಥಾಪನೆಗೊಂಡಿದೆಯೆಂದು ತಿಳಿದು ಬಂದಿದೆ. ದೇಶ ಸಂಚಾರಕ್ಕೆಂದು ಬಂದು ನನ್ನಯ್ಯಾ ಎಂಬ ಮಹಾಸ್ವಾಮಿಗಳು ಈ ಗ್ರಾಮದ ಹೊರ ವಲಯದಲ್ಲಿ ಅನುಷ್ಠಾನ ಕುಳಿತುಕೊಂಡರು. ಈ ಗ್ರಾಮದ ಭಕ್ತರ ನೋಡಿ ಮಹಾಯೋಗಿಗೆ ಮಠ ಕಟ್ಟಿಕೊಟ್ಟರು. ಭಕ್ತರ ಕರೆಗೆ ಓಗೊಟ್ಟು ಶ್ರೀ ನನ್ನಯ್ಯ ಸ್ವಾಮಿಗಳು " ಸಿದ್ದಲಿಂಗ ಮಹಾಸ್ವಾಮಿ"ಗಳೆಂದು ಅಭಿದಾನ ಪಡೆದು ಮಠದ ಅಧಿಕಾರವನ್ನು ವಹಿಸಿಕೊಂಡರು. ಮಠದಲ್ಲಿ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬಂದರು.

ಪರಂಪರೆ

೧) ಶ್ರೀ ಮ.ನಿ. ಪ್ರ. ಸಿದ್ಧಲಿಂಗ ಸ್ವಾಮಿ, ಶ್ರೀ ನನ್ನಯ್ಯ ಮಹಾಸ್ವಾಮಿಗಳ -ಇವರು ಮಠದ ಮೂಲ ಸ್ಥಾಪಕರು.

೨) ಶ್ರೀ ಮ. ನಿ.ಪ್ರ. ಗುರುಲಿಂಗ ಮಹಾಸ್ವಾಮಿಗಳು.

೩) ಶ್ರೀ ಮ. ನಿ.ಪ್ರ. ಸಿದ್ಧಾರಾಮ ಸ್ವಾಮಿಗಳು.

೪) ಶ್ರೀ ಮ. ನಿ.ಪ್ರ. ವೀರುಪಾಕ್ಷ ಸ್ವಾಮಿಗಳು.

೫) ಶ್ರೀ ಮ. ನಿ.ಪ್ರ. ಸಿದ್ಧಲಿಂಗ ಸ್ವಾಮಿಗಳು.

೬) ಶ್ರೀ ಮ. ನಿ. ಪ್ರ. ಸಿದ್ಧರಾಮ ಸ್ವಾಮಿಗಳು

ಹೀಗೆ ಮಠದ ಪರಂಪರೆ ಬೆಳೆದು ಬಂದಿದೆ. ನೂತನ ಪೀಠಾಧಿಪತಿಯಾದ ಶ್ರೀ ಮ. ನಿ.ಪ್ರ. ಸಿದ್ಧರಾಮ ಸ್ವಾಮಿಗಳು ಮಠವನ್ನು ಸರ್ವತೋಮುಖವಾಗಿ ಬೆಳೆಸಿಕೊಂಡು ಬರುತ್ತಿದ್ದಾರೆ.

ರಾಯಚೂರು ತಾಲೂಕಿನಲ್ಲಿ ಮಟಮಾರಿ ಗ್ರಾಮದಲ್ಲೊಂದು ಹಿರೇಮಠ ದೊರೆಯುತ್ತದೆ. ಇದು ಹಾಳು ಬಿದ್ದ ಮಠವಾಗಿ ಕಂಗೋಳಿಸುತ್ತಿದೆ ಬಿಚ್ಚಾಲಿ ಮಠದ ಮಹಾಂತೇಶ್ವರ ಸ್ವಾಮಿಗಳು ಮಠದ ಆಡಳಿತವನ್ನು ನಡೆಸಿಕೊಂಡು ಬರುತ್ತಿದ್ದರು. ಇಂದು ಶ್ರೀ. ಷ. ಬ್ರ. ವೀರಭದ್ರಯ್ಯ ಶಿವಾಚಾರ್ಯ ಸ್ವಾಮಿಗಳು ಮಠದ ಅಧಿಕಾರವನ್ನು ವಹಿಸಿಕೊಂಡು ಆಡಳಿತವನ್ನು ಮುನ್ನಡೆಸಿಕೊಂಡು ಬರುತ್ತಿದ್ದಾರೆ.

## ೪. ಕೊಪ್ಪಳ ಜಿಲ್ಲೆ

### ೪.೧. ಕೊಪ್ಪಳ ಗವಿಮಠ

ಒಂದು ಸಾವಿರ ವರ್ಷಗಳ ಪ್ರಾಚೀನತೆಯ ಭವ್ಯ ಇತಿಹಾಸ ಶ್ರೀ ಮಠಕ್ಕಿದೆ. ಕವಿರಾಜ ಮಾರ್ಗಕಾರನು ವರ್ಣಿಸಿದಂತೆ ಕೊಪ್ಪಳ " ವಿದಿತ ಮಹಾ ಕೊಪ್ಪಳ" ನಗರ ವೆಂದೆ ಪ್ರಸಿದ್ದಿ ಪಡೆದಿದೆ. ಈ ಜಿಲ್ಲೆಯ ಹಿಂದೆ ರಾಯಚೂರು ಜಿಲ್ಲೆಯ ಕೇಂದ್ರ ಸ್ಥಳವಾಗಿತ್ತು. ಇಂದು ಪ್ರತ್ಯೇಕ ಜಿಲ್ಲೆಯಾಗಿ ಮಾರ್ಪಡಾಗಿದೆ. ಈ ಮಠವು ವಿರಕ್ತ ಸಂಪ್ರದಾಯಕ್ಕೆ ಸೇರಿದ ಮಠವಾಗಿದೆ. ಮೂಡಣಕ್ಕೆ ಕೊಪ್ಪಳ ಪಡುವಣಕ್ಕೆ ಮೃಡಗಿರಿ ನಗರಗಳು ಐತಿಹಾಸಿಕ ಹಾಗೂ ಧಾರ್ಮಿಕ ಪ್ರಚಾರ ಪ್ರಸಾರದ ಕೇಂದ್ರಗಳಾಗಿವೆ. ನಗರದ ಹೊರ ಒಳಾಂಗಣದಲ್ಲಿ ಜೈನ ಮಂದಿರಗಳನ್ನು ಹೆಚ್ಚಾಗಿ ಕಂಗೊಳಿಸುತ್ತವೆ.

ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟೀಷರ ವಿರುದ್ಧ ಭಾರತೀಯರು ಸ್ವಾತಂತ್ರ್ಯ ಸಂಪಾದಿಸಲು ಸಂಗ್ರಾಮ ಸಾರಿದರು. ಮಹಾರಾಷ್ಟ್ರದ ಛತ್ರಪತಿ ಶಿವಾಜಿ ಮಾಹಾರಾಜನಿಗೆ ಸ್ವಾಮಿ ರಮಾತೀರ್ಥರು, ರಾಣಿ ಕಿತ್ತೂರ ಚನ್ನಮ್ಮಜ್ಜಿಗೆ ಶ್ರೀ ಕಲ್ಮಠದ ಸ್ವಾಮಿಜಿ, ಅಂಹಿಸಾತ್ಮಕ ಹೋರಾಟ ನಡೆಸಿದ. ಭಾರತೀಯರಿಗೆ, ಮಹಾತ್ಮಾಗಾಂಧಿಜಿ, ಶಸಸ್ತ್ರಹೋರಾಟ ನಡೆಸಿದ "ಹೈದ್ರಾಬಾದ ಜನತೆಗೆ ಸ್ವಾಮಿ ರಮಾನಂದ ತೀರ್ಥ, ಸ್ವಾತಂತ್ರ್ಯ ಬಂಡಾಯ ಸಾರಿದ ಮುಂಡರಗಿ ಭಿಮರಾಯ, ಹಮ್ಮಿಗಿ ಕೆಂಚನ ಗೌಡ, ಹಾಗೂ ಮುಂಡರಗಿ ಶಿಬಿರದ ಭೂಗತ ಸಶಸ್ತ್ರ ಸ್ವಯಂ ಸೇವಕ ಸೈನಿಕರಿಗೆ ಕೊಪ್ಪಳ ಬಾಹಾದ್ದೂರ ಬಂಡಿ ಮುಂಡುರಗಿ ಧರ್ಮ ದೇವತೆಗಳುಳ್ಳ ಕೋಟೆ ಕೊಪ್ಪಳ ಶ್ರೀ ಗವಿಸಿದ್ದೇಶ್ವರ ಸ್ವಾಮಿ ಮಠ ಶ್ರೀ ಅನ್ನದಾನಿಶ್ವರ ಸ್ವಾಮಿ ಮಠ ಈ ಎಲ ದಿವ್ಯ ಶಕ್ತಿಗಳ ತಪೋಬಲದ ಬೆಂಬಲ ಆಶ್ರಯ ಪ್ರೇರಣೆ ಹಾಗೂ ಆಶಿರ್ವಾದವಿದ್ದಿತ್ತು." [೧೩] ಅಂದು ಶ್ರೀ ಗವಿಮಠವು ಸ್ವಾತಂತ್ರ್ಯ ಹೋರಾಟದಲ್ಲಿ ತನ್ನ ಪಾತ್ರವನ್ನು ಪ್ರಮುಖ ವಹಿಸಿ ಹೋರಾಡಿತ್ತು. ಧೈರ್ಯದಿಂದ ಮುನ್ನುಗಿ ಸಮರಕ್ಕೆ ಸಿದ್ದವಾಗಿತ್ತು. ಈ ಮಠದ ವತಿಯಿಂದ ಸಾವಿರಾರು ಭಕ್ತರು ಬೆಂಬಲಿಗರಾದರು.

ಧಾರ್ಮಿಕ ಸಾಮಾಜಿಕ ಶೈಕ್ಷಣಿಕ ಹಾಗೂ ಸಾಹಿತ್ಯಿಕ ಸಾಂಸ್ಕೃತಿಕವಾದ ಮಹಾತ್ಕಾರ್ಯಗಳಿಗೆ ಸದಾ ಬೆನ್ನೆಲುವಾಗಿ ಶ್ರೀ ಮಠ ಪೆ. ಗಾವಿ ಮಠ. ಭಕ್ತರ ಉದ್ದಾರವೇ ಭಗಂವತನ ಸಾಕ್ಷಾತ್‌ಕಾರ ಎಂಬಂತೆ ಶ್ರೀ ಮಠದ ಧ್ಯೇಯವಾಗಿದೆ.

" ಎತ್ತಣ ಮಾಮರ ಎತ್ತಣ ಕೋಗಿಲೆ?
ಎತ್ತಣೆಂದೆತ್ತ ಸಂಬಂಧವಯ್ಯ ?
ಬೆಟ್ಟದ ನೆಲ್ಲಿಯ ಕಾಯಿ, ಸಮುದ್ರದೋಳಗಣ ಉಪ್ಪು
ಎತ್ತಗೆಂದತ್ತ ಸಂಬಂಧವಯ್ಯ ?
ಗುಹೇಶ್ವರ ಲಿಂಗಕ್ಕೆಯಾ ಎನಗೆಯಾ
ಎತ್ತಣೆಂದೆತ್ತ ಸಂಬಂಧ ವಯ್ಯ" [೧೪]

ಎಂಬ ಅಲ್ಲಮನ ವಚನದಂತೆ ಯಾವ ಕಾಲದ ಋಣಾನುಬಂದವೋ, ಎಂಬಂತೆ ಶ್ರೀ ಕಾಶಿಯಲ್ಲಿರುವ ಜಂಗಮವಾಡಿಯ ಮಠದ ಶ್ರೀ ವಿಶ್ವಾರಾಧ್ಯ ಸ್ವಾಮಿಗಳವರಿಂದ ಅಪ್ಪಣೆ ಹಾಗೂ ಆಶಿರ್ವಾದ ಪಡೆದು, ಶ್ರೀ ರುದ್ರಮುನಿ ದೇವರು ದೇಶ ಸಂಚಾರ ಮಾಡುತ್ತ, ಧರ್ಮೋಪದೇಶ ಸಾರುತ್ತ ಅನೇಕ ತೀರ್ಥ ಯಾತ್ರೆಗಳನ್ನು ಸಂದರ್ಶಿಸಿ ಕೊನೆಗೆ ಕೊಪ್ಪಳ ಗವಿಯನ್ನು ಸೇರಿದರು. ಅಲ್ಲಿಯೇ ಮಠವನ್ನು ಸ್ಥಾಪನೆ

ಮಾಡಿದರೆಂದು ಉಲ್ಲೇಖಗಳಿವೆ. ''ಕಾಶಿಚರವರ್ಯ ಶ್ರೀ ರುದ್ರಮುನಿ ಶಿವಾಚಾರ್ಯರಿಂದ ಸ್ಥಾಪಿತವಾದ ಗವಿಮಠವು ತದನಂತರ ಬಂದ ಶ್ರೀಗಳು ತಮ್ಮ ಕರ್ತೃತ್ವ ಶಕ್ತಿ ಹಾಗೂ ಜನತೆಯ ಸಹಯೋಗದೊಂದಿಗೆ ಮಠವನ್ನು ಉತ್ತರಿಸುತ್ತಲೇ ಬಂದರೆಂಬುದಕ್ಕೆ ನಿರ್ಮಾಣಗೊಂಡ ವಿವಿಧ ಮಂಟಪಗಳನ್ನೊಳಗೊಂಡ ಕೈಲಾಸದೂದಿಯಲ್ಲಿ ನಿಂತಿರುವ ಮಠವು ಭಾವುಕರ ಭಕ್ತಿಯನ್ನು ಉಕ್ಕಿಸುವುದು''[೨] ಕೊಪ್ಪಳ ಶ್ರೀ ಗವಿಮಠವು ಮಹಿಮಾನ್ವಿತ ಚರಿತ್ರೆಯನ್ನೊಳಗೊಂಡಿದೆ. ಶ್ರೀ ಮಠವು ಎಡಬಿಡದೆ ಸದಾ ಕಾಯಕದಲ್ಲಿ ತೊಡಗಿಸಿಕೊಂಡಿದೆ. ಈ ಮಠದಲ್ಲಿ ಸುಮಾರು ಹದಿನೆಳು ಮಠಾಧೀಶರು ಸೇವೆ ಸಲ್ಲಿಸಿದ್ದು ಕಂಡುಬರುತ್ತದೆ. ಶ್ರೀಮಠವು ಹಿಂದೆ ಬ್ರಿಟೀಷರ ವಿರುದ್ಧ ಹೋರಾಡಿ, ಕೆಲವು ಹೋರಾಟಗಾರರಿಗೆ ತಮ್ಮ ಮಠದಲ್ಲಿ ಆಶ್ರಯವನ್ನು ಲಭಿಸಿದರೆಂದು ಹೇಳಬಹುದು.

ಪರಂಪರೆ

೧) ಶ್ರೀ ಮ.ನಿ.ಪ್ರ. ರುದ್ರಮುನಿ ಮಹಾಸ್ವಾಮಿಗಳು – ಮಠದ ಮೂಲ ಸಂಸ್ಥಾಪಕರು.

೨) ಶ್ರೀ ಮ.ನಿ.ಪ್ರ. ಶ್ರೀ ಸಂಗನ ಬಸವ ಸ್ವಾಮಿಗಳು

೩) ಶ್ರೀ ಮ.ನಿ.ಪ್ರ. ಚನ್ನವೀರ ಮರಿದೇವರು

೪) ಶ್ರೀ ಮ.ನಿ.ಪ್ರ. ಎರಡನೇಯ ಚನ್ನವೀರ ಸ್ವಾಮಿಗಳು

೫) ಶ್ರೀ ಮ.ನಿ.ಪ್ರ. ಕರಿಬಸವ ಸ್ವಾಮಿಗಳು

೬) ಶ್ರೀ ಮ.ನಿ.ಪ್ರ. ಶಿವಲಿಂಗ ದೇವರು

೭) ಶ್ರೀ ಮ.ನಿ.ಪ್ರ. ಪುಟ್ಟ ಚನ್ನವೀರ ಸ್ವಾಮಿಗಳು

೮) ಶ್ರೀ ಮ.ನಿ.ಪ್ರ. ಚನ್ನಮಲ್ಲ ಮರಿದೇವರು

೯) ಶ್ರೀ ಮ.ನಿ.ಪ್ರ.ಸಂಗಮೇಶ್ವರ ಸ್ವಾಮಿಗಳು

೧೦) ಶ್ರೀ ಮ.ನಿ.ಪ್ರ. ಚನ್ನಬಸವ ಸ್ವಾಮಿಗಳು

೧೧) ಶ್ರೀ ಮ.ನಿ.ಪ್ರ. ಗವಿಸಿದ್ದೇಶ್ವರ ಸ್ವಾಮಿಗಳು

೧೨) ಶ್ರೀ ಮ.ನಿ.ಪ್ರ. ಹಿರಿಯ ಶಾಂತವೀರ ಸ್ವಾಮಿಗಳು

೧೩) ಶ್ರೀ ಮ.ನಿ.ಪ್ರ. ಗವಿಶಾಂತ ವೀರಸ್ವಾಮಿಗಳು

೧೪) ಶ್ರೀ ಮ.ನಿ.ಪ್ರ. ಮರಿ ಶಾಂತ ದೇವರು

೧೫) ಶ್ರೀ ಮ.ನಿ.ಪ್ರ. ಶಿವಕಾಂತ ಸ್ವಾಮಿಗಳು

೧೬) ಶ್ರೀ ಮ.ನಿ.ಪ್ರ. ಮರಿ ಶಾಂತ ವೀರ ಸ್ವಾಮಿಗಳು

೧೭) ಶ್ರೀ ಮ.ನಿ.ಪ್ರ. ಶಿವಶಾಂತವೀರ ಮಹಾಸ್ವಾಮಿಗಳು– ನೂತನ ಪೀಠಾಧೀಶರು

## ೪.೨. ಎತ್ತಿನ ಹಟ್ಟಿ ವಿರಕ್ತ ಮಠ

ಕೊಪ್ಪಳ ತಾಲೂಕಿನ ಎತ್ತಿನ ಹಟ್ಟಿ ಗ್ರಾಮದ ವಿರಕ್ತ ಮಠವು ಧಾರ್ಮಿಕ ಚಟುವಟಿಕೆಗಳನ್ನು ನಡೆಸಿಕೊಂಡು ಬರುವ ಮಠವಾಗಿದೆ. ಈ ಮಠಕ್ಕೆ ಬಸವರಾಜೇಂದ್ರ ಮಠವೆಂದು ಕರೆಯುತ್ತಾರೆ. ಶ್ರೀ ಬಸವರಾಜೇಂದ್ರ ಮಹಾಸ್ವಾಮಿಗಳು ಧರ್ಮ ಸಂಘಟನೆ, ಧರ್ಮ ಪ್ರಚಾರಕ್ಕಾಗಿ ಬಂದು ಈ ಗ್ರಾಮದಲ್ಲಿ ನೆಲೆಸಿ, ಭಕ್ತರ ಅಭಿಲಾಷೆಯಂತೆ ಮಠವನ್ನು ಸ್ಥಾಪಿಸಿದರು. ವೀರಶೈವ ಧರ್ಮದ ಪ್ರತಿಕವಾಗಿ ಹುಟ್ಟಿಕೊಂಡ ಮಠವು ಶರಣರ ನಡೆ, ನುಡಿ, ತತ್ವ ಪಾಠ, ಪ್ರವಚನ, ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಂಡು, ನಾಡಿನ ವಿದ್ವಾಂಸ ಸಾಹಿತಿಗಳನ್ನು ಕರೆಯಿಸಿ, ಅವರಿಂದ ಉಪನ್ಯಾಸಗಳನ್ನು ಗೋಷ್ಠಿಗಳನ್ನು ಹಮ್ಮಿಕೊಳ್ಳುತ್ತಾರೆ. ಶ್ರೀ ಮಠಕ್ಕೆ ಮೂವರು ಪೀಠಾಧಿಪತಿಗಳು ಅಧಿಕಾರವನ್ನು ಸ್ವೀಕರಿಸಿ ಸೇವೆ ಸಲ್ಲಿಸಿದ್ದಾರೆ. ೧) ಶ್ರೀ. ಮ.ನಿ.ಪ್ರ. ಬಸವರಾಜೇಂದ್ರ ಮಹಾಸ್ವಾಮಿಗಳು (ಮಠದ ಮೂಲ ಸ್ಥಾಪಕರು) ೨) ಶ್ರೀ. ಮ.ನಿ.ಪ್ರ. ಮಲ್ಲಿಕಾರ್ಜುನ ಮಹಾಸ್ವಾಮಿಗಳು ೩) ಶ್ರೀ. ಮ.ನಿ.ಪ್ರ. ಗಂಗಾಧರ ಮಹಾಸ್ವಾಮಿಗಳು ನೂತನ ಪೀಠಾಧಿಪತಿಗಳು. ಮಠದಲ್ಲಿ ಎರಡು ಗದ್ದುಗೆಗಳು ಕಂಡು ಬರುತ್ತವೆ. ಈ ಗದ್ದುಗೆ ಪ್ರತಿ ನಿತ್ಯ ಪೂಜೆ ನಡೆಯುತ್ತದೆ. ಪ್ರತಿ ಅಮವಾಸೆ ಹಾಗೂ ಹುಣ್ಣಿಮೆಗಳಲ್ಲಿ ವಿಶೇಷ ಪೂಜಾ ಕಾರ್ಯಕ್ರಮ ಜರಗುತ್ತದೆ.

## ೪.೩. ಅಳವಂಡಿ ಹಿರೇಮಠ

ಕೊಪ್ಪಳ ತಾಲೂಕಿನ ಅಳವಂಡಿ ಗ್ರಾಮದಲ್ಲಿ ಸುಮಾರು ಐದು ವೀರಶೈವ ಮಠಗಳು ದೊರೆಯುತ್ತವೆ. ಶ್ರಿ ಸಿದ್ದೇಶ್ವರ ಮಠ. ಶ್ರೀ ಡಂಗುರ ಮಠ. ಶ್ರೀ ತುಪ್ಪದ ಮಠ. ಶ್ರೀ ಅರಳೆಲೆ ಮಠ. ಶ್ರೀ ಗವಿ ಮಠ. ಹೀಗೆ ಐದು ಮಠಗಳು ದೊರೆಯುತ್ತವೆ. ಆದರೆ ಅವುಗಳಲ್ಲಿ ಕೇವಲ ಸಿದ್ಧೇಶ್ವರ ಮಠದಲ್ಲಿ ಮಾತ್ರ ಮಠಾಧಿಪತಿಗಳು ದೊರೆಯುತ್ತಾರೆ. ಉಳಿದ ನಾಲ್ಕು ಮಠಗಳಲ್ಲಿ ಯಾವುದೇ ಸ್ವಾಮಿಗಳು ದೊರೆಯುವುದಿಲ್ಲ, ಕೇವಲ ಹೆಸರಿಗೆ ಮಾತ್ರ ಮಠಗಳಂತೆ ಗೋಚರಿಸುತ್ತವೆ.

ಗ್ರಾಮದ ಹೃದಯ ಭಾಗದಲ್ಲಿ ಕಂಡು ಬರುವ ಶ್ರೀ ಸಿದ್ದೇಶ್ವರ ಹಿರೇಮಠವು ಉಜ್ಜಯನಿ ಪೀಠದ ಶಾಖಾ ಮಠವಾಗಿ ಬೆಳೆದುಬಂದಿದೆ. ಈ ಮಠವು ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದು ಕಂಡು ಬರುತ್ತದೆ. ಶ್ರೀ ಸಿದ್ದೇಶ್ವರ ಮಹಾಸ್ವಾಮಿಗಳು ಈ ಮಠವನ್ನು ಸ್ಥಾಪಿಸಿದರು. ಈ ಮಠಕ್ಕೆ ಶ್ರೀ ಸಿದ್ದೇಶ್ವರ ಮಠವೆಂದು ಕರೆಯುವ ವಾಡಿಕೆ ಇದೆ. ಈ ಮಠಕ್ಕೆ ಹೈದ್ರಾಬಾದ ನಿಜಾಮನು ಹತ್ತು ಎಕ್ಕರೆ ಭೂಮಿಯನ್ನು

ಧಾನವಾಗಿ ನೀಡಿದರೆಂಬುದು ತಿಳಿದು ಬರುತ್ತದೆ. ಶ್ರೀ ಮಠಕ್ಕೆ ಸುಮಾರು ಆರು ಸ್ವಾಮಿಗಳು ಅಧಿಕಾರವನ್ನು ವಹಿಸಿದ್ದಾರೆ. ಆದರೆ ಅವರೆಲ್ಲರ ಹೆಸರುಗಳು ದೊರಕಿರುವುದಿಲ್ಲ. ಕೇವಲ ಮೂರು ಗುರುಗಳ ಹೆಸರು ಮಾತ್ರ ದೊರೆಸಿವೆ. ಶ್ರೀ ಸಿದ್ದೇಶ್ವರ ಮಾಹಸ್ವಾಮಿಗಳನ್ನು ಮಠದ ಮೂಲ ಸಂಸ್ಥಾಪಕರು ಇಂದು ಶ್ರೀ ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಮಠದ ಆಡಳಿತವನ್ನು ವಹಿಸಿಕೊಂಡು ಮಠ ಉನ್ನತ ರೀತಿಯಲ್ಲಿ ಮುನ್ನಡೆಸುತ್ತಿದ್ದಾರೆ. ಧಾರ್ಮಿಕ ಗೋಷ್ಠಿಗಳನ್ನು ಏರ್ಪಡಿಸಿಕೊಂಡು ಬರತ್ತಿದ್ದಾರೆ.

### ೪.೪. ಹಿರೇಸಿಂದೂಗಿ ವಿರಕ್ತ ಮಠ

ಕೊಪ್ಪಳ ತಾಲೂಕಿನ ಹಿರೇಸಿಂದೂಗಿ ಗ್ರಾಮದ ವಿರಕ್ತ ಮಠವಿದೆ. ಧಾರ್ಮಿಕ ಕಾರ್ಯ ಚಟುವಟಿಕೆಗಳನ್ನು ಸತತವಾಗಿ ನಡೆಸಿಕೊಂಡು ಬರುತ್ತಾರೆ. ಶ್ರೀ ಚನ್ನಬಸವೇಶ್ವರ ಶಿವಯೋಗಿ ಮಹಾ ಸ್ವಾಮಿಗಳು ಲೋಕದ ಜನ ಕಲ್ಯಾಣಕ್ಕಾಗಿ ದೇಶ ಸಂಚಾರಯಾತ್ರೆಯನ್ನು ಕೈಗೊಂಡು ಈ ಗ್ರಾಮದ ತಪ್ಪಲ ಪ್ರದೇಶದಲ್ಲಿ ಗುಡ್ಡದ ಅನುಷ್ಠಾನ ಕೈಗೊಂಡರು. ಸಿದ್ಧಿ ಪಡೆದ ಪುರುಷರು ಅಲ್ಲಿಂದ ಹಿರೇಸಿಂದೂಗಿ ಗ್ರಾಮದ ಹತ್ತಿರ ಮಠವನ್ನು ಸ್ಥಾಪಿಸಿಕೊಂಡು ಕುಳಿತರು. ಇದಕ್ಕೆ ಭಕ್ತರ ಸಹಕಾರವಿತ್ತು ವೀರಶೈವ ಧರ್ಮ ಸಂಘಟನೆ, ಧರ್ಮೋಪದೇಶ ಕಾರ್ಯಕ್ರಮಗಳನ್ನು ಇಟ್ಟುಕೊಳ್ಳುತಿದ್ದರು. ಜನರಿಗೆ ಧರ್ಮದ ಅರಿವಿನ ಬೀಜವನ್ನು ಬಿತ್ತುತ್ತಿದ್ದರು. ಇವರ ಕಾಲದಲ್ಲಿ ಶ್ರೀ ಮಠದ ಕೀರ್ತಿ ಉನ್ನತಕ್ಕೇರಿತ್ತು. ಶ್ರೀ ಮಠಕ್ಕೆ ಒಟ್ಟು ನಾಲ್ಕು ಸ್ವಾಮಿಗಳು ಅಧಿಕಾರವನ್ನು ವಹಿಸಿಕೊಂಡಿದ್ದು ಕಂಡು ಬರುತದೆ. ೧) ಶ್ರೀ. ಮ. ನಿ. ಪ್ರ. ಚನ್ನಬಸವೇಶ್ವರ ಮಹಾಸ್ವಾಮಿಗಳು (ಮಠದ ಮೂಲ ಸಂಸ್ಥಾಪಕರು) ೨) ಶ್ರೀ. ಮ. ನಿ. ಪ್ರ. ಮಲ್ಲಣಾಚಾರ್ಯ ಮಹಾಸ್ವಾಮಿಗಳು ೩) ಶ್ರೀ. ಮ. ನಿ. ಪ್ರ. ತೋಟಪಯ್ಯ ಮಹಾಸ್ವಾಮಿಗಳು ೪) ಶ್ರೀ ಮ.ನಿ.ಪ್ರ. ಚಿದಾನಂದ ಸ್ವಾಮಿಗಳು ನೂತನ ಪಿಠಾಧಿಪತಿಗಳು, ಹೀಗೆ ಮಠದ ವಂಶಾವಳಿ ಕಂಡು ಬರುತ್ತದೆ.

ನೂತನ ಶ್ರೀಗಳಾದ ಮ. ನಿ.ಪ್ರ. ಚಿದಾನಂದ ಸ್ವಾಮಿಗಳು ೧೯೮೩ ರ ಮಾರ್ಚ್ ಇಪ್ಪತ್ತೈದರಂದು ಪೀಠಾಧಿಕಾರವ ವಹಿಸಿಕೊಂಡರು. ಅಂದಿನಿಂದ ಶ್ರೀ ಮಠದಲ್ಲಿ ಧಾರ್ಮಿಕ ಕಾರ್ಯಚಟುವಟಿಕೆಗಳು ಹಾಗೂ ಸಾಂಸ್ಕೃತಿಕ ಕಾರ್ಯ ಚಟುವಟಿಕೆಗಳು ಒಂದಿಲ್ಲೊಂದು ರೀತಿಯಲ್ಲಿ ನಡೆಯುತ್ತಿವೆ. ಪಾಠ– ಪ್ರವಚನಗಳ ಮುಖಾಂತರ ಭಕ್ತರಲ್ಲಿ ಸನ್ನಡತೆಯ ಮಾರ್ಗವನ್ನು ತೋರಿಸುತ್ತಿದ್ದಾರೆ. ಉತ್ತಮ ರೀತಿಯಲ್ಲಿ ಮಠವನ್ನು ಅಭಿವೃದ್ಧಿ ಪಡಿಹಿಸಿಕೊಂಡು ಬರುತ್ತಿದ್ದಾರೆ. ಭಕ್ತರೊಡನೆ ನೇರ ಸಂಪರ್ಕವನ್ನು ಇಟ್ಟುಕೊಂಡಿದ್ದಾರೆ.

೪.೫. ಕುಷ್ಟಗಿ ಹಿರೇಮಠ

ಕೊಪ್ಪಳ ಜಿಲ್ಲೆಯ ಕುಷ್ಟಗಿ ತಾಲೂಕಿನ ಮಹಾನಗರದಲ್ಲಿ ಶ್ರೀ ರಂಭಾಪುರಿ ಪೀಠದ ಶಾಖಾ ಮಠವೇ ಈ ಹಿರೇಮಠ. ಈ ಮಠವು ಸುಮಾರು ಹನ್ನೊಂದನೇ ಶತಮಾನದಲ್ಲಿ ಸ್ಥಾಪಿತಗೊಂಡಿದೆಯೆಂದು ತಿಳಿದು ಬಂದಿದೆ. ಈ ಭಾಗದಲ್ಲಿ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಚಟುವಟಿಕೆಗಳ ಕೇಂದ್ರಬಿಂದುವಂತಿದೆ. ಶ್ರೀ ಕರಿಬಸವ ಸ್ವಾಮಿಗಳೆಂಬುವವರು ಧರ್ಮ ಸಂಘಟನೆಗಾಗಿ, ದೇಶ ಸಂಚಾರ ಕೈಗೊಂಡು, ಈ ಗ್ರಾಮದ ಹೊರವಲಯದಲ್ಲಿ ಅನುಷ್ಠಾನ ಕುಳಿತರು. ಅಂತಹ ಸಂದರ್ಭದಲ್ಲಿ ಗ್ರಾಮದೊಳಗೆ ಮದವೇರಿದ ಆನೆಯನ್ನು ಹೊಕ್ಕು ಜನರಿಗೆ ಬೆನ್ನಟ್ಟುತಿತ್ತು. ಜನರು ಭಯಗೊಂಡು ತಣ್ಣಗಾದರು ದೇವರ ಮೇಲೆ ನಂಬಿಕೆಯಿಟ್ಟು ತಮ್ಮ ತಮ್ಮ ಮನೆಯೊಳಗೆ ಸೇರಿಸಿಕೊಂಡರು ಈ ಗ್ರಾಮದ ಜನರು ತುಂಬಾ ಸಂಕಷ್ಟದಲಿದ್ದರು. ಇಂತಹ ಗಂಭಿರ ಪರಿಸ್ಥಿತಿಯ ವಿಷಯ ಶ್ರೀ ಕರಿಬಸವ ಸ್ವಾಮಿಗಳಿಗೆ ತಿಳಿಯಿತು. ಶ್ರೀಗಳು ಗ್ರಾಮಕ್ಕೆ ಬಂದು ಮದವೆರಿದ ಅನೆಯನ್ನು ಮದವನ್ನು ಮುರಿಸಿ ಗ್ರಾಮದಿಂದ ಹೊರಹಾಕಿದರೆಂಬ ಪ್ರತಿತಿ ಇದೆ. ಆದರಿಂದ ಗ್ರಾಮದ ಭಕ್ತರೆಲ್ಲ ಕೂಡಿ ಶ್ರೀಗಳಿಗೆ ಇಲ್ಲೆ ಮಠ ಮಾಡಿ ತಂಗಲು ಕೈ ಜೊಡಿಸಿ ಕೇಳಿಕೊಂಡರು. ಭಕ್ತರ ಕರೆಗೆ ಓಗೊಟ್ಟು ಶ್ರೀ ಕರಿಬಸವ ಸ್ವಾಮಿಗಳು ಈ ಗ್ರಾಮದಲ್ಲಿ ಮಠವನ್ನು ಸ್ಥಾಪಿಸಿದರು. ಆದ್ದರಿಂದ ಇವರಿಗೆ ಮದ್ದಾನೇಶ್ವರ ಸ್ವಾಮಿಯೆಂದು ಹಾಗೂ ಮದ್ದಾನೆ ಮಠವೆಂದು ಇಂದಿಗೂ ಕರೆಯುವ ವಾಡಿಕೆ ಇದೆ.

ಮಠದ ಪರಂಪರೆ

ಶ್ರೀ ಮಠಕ್ಕೆ ಒಟ್ಟು ಹನ್ನೆರಡು ಜನ ಅಧಿಕಾರವನ್ನು ವಹಿಸಿದ್ದಾರೆ. ಆದರೆ ಅವರೆಲ್ಲರ ವಂಶಾವಳಿ ಕರ್ತೃಗುರುಗಳ ಹೆಸರನ್ನೇ ಅಭಿದಾನ ಪಡೆದು ಪಟ್ಟಾಧಿಕಾರ ವಹಿಸಿಕೊಳ್ಳುವ ಸಂಪ್ರದಾಯ ಬೆಳೆದು ಬಂದಿದೆ. ಶ್ರೀ. ಷ. ಬ್ರ. ಮದ್ದಾನೆ ಕರಿಬಸವ ಸ್ವಾಮಿಗಳೆಂದು ಕರೆಯಲಾಗಿದೆ. ಷ. ಬ್ರ. ಶ್ರೀ ಎರಡನೇ ಮದ್ದಾನೆ ಕರಿಬಸವ ಸ್ವಾಮಿಗಳು ..... ಹೀಗೆ ಹನ್ನೊಂದು ಶ್ರೀಗಳ ಹೆಸರನ್ನು ಕಂಡು ಬರುತ್ತದೆ. ನೂತನವಾಗಿ ಶ್ರೀ ಷ.ಬ್ರ. ಹನ್ನೆರಡನೇ ಮದಾನೆ ಕರಿಬಸವ ಸ್ವಾಮಿಗಳು ಅಧಿಕಾರವನ್ನು ವಹಿಸಿಕೊಂಡು ಮಠವನ್ನು ಉನ್ನತ ರೀತಿಯಲ್ಲಿ ಮುನ್ನಡೆಸುತ್ತಿದ್ದಾರೆ. ಶ್ರೀಗಳು ಮಠದಲ್ಲಿ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಾರೆ. ಅಡ್ಡ ಪಲ್ಲಕ್ಕಿ ಉತ್ಸವ ಕಾರ್ಯಕ್ರಮ ಜರುತ್ತದೆ. ಶ್ರೀ ಮಠಕ್ಕೆ ಹೈದ್ರಾಬಾದ ನಿಜಾಮನ ಕಾಲದಲ್ಲಿ ಸುಮಾರು ನಾಲ್ಕು ನೂರು ಎಕ್ಕರೆ ಭೂಮಿ ಧಾನವಾಗಿ ದೊರಕಿ, ಈಗ ಕೇವಲ

ಮೂವತ್ತೈದು ಎಕ್ಕರೆ ಭೂಮಿ ಮಾತ್ರ ಶ್ರೀ ಮಠದ ಹೆಸರಿನಲ್ಲಿದ್ದುದು ಕಂಡು ಬರುತ್ತದೆ. ಶ್ರೀ ಮಠದಲ್ಲಿ "ಮದ್ದಾನೇಶ್ವರ ವಿದ್ಯಾವರ್ಧಕ ಸಂಸ್ಥೆ" ಯನ್ನು ಪ್ರಾರಂಭಿಸಿ ಅದರ ಮುಖಾಂತರ ಹಾಗೂ ಶಿಶುವಿಹಾರ ಪೂರ್ವ ಪ್ರಾಥಮಿಕ ಶಾಲೆಯನ್ನು ನಡೆಸುತ್ತಿದ್ದಾರೆ.

೪. ೬. ಚಳಗೇರಿ ಹಿರೇಮಠ

ಕುಷ್ಟಗಿ ತಾಲೂಕಿನ ಚಳಗೇರಿ ಗ್ರಾಮದ ಹಿರೇಮಠವು ಧಾರ್ಮಿಕ ಸಂಘಟನೆಯ ಹಾಗೂ ಧಾರ್ಮಿಕ ಪ್ರಸಾರದ ಕೇಂದ್ರ ಬಿಂದುವಾಗಿ ಬೆಳೆದುಬಂದಿದೆ. ಶ್ರೀಮಠದಲ್ಲಿ ನಿತ್ಯ ಗದ್ದುಗೆ ಪೂಜೆ ನಡೆಯುತ್ತದೆ. ಅಮವಾಸೆಯಲ್ಲಿ ರುದ್ರಾಭಿಷೇಕ ಪೂಜೆ ಜರಗುತ್ತದೆ. ಶ್ರಾವಣ ಮಾಸದಲ್ಲಿ ಪುರಾಣ ಪ್ರವಚನಗಳನ್ನು ಹಮ್ಮಿಕೊಂಡು ಧಾರ್ಮಿಕೋಪ ದೇಶವನ್ನು ಬಿರುತ್ತಾರೆ. ವಿವಿಧ ಉಪನ್ಯಾಸ ಗೋಷ್ಠಿಗಳನ್ನು ಏರ್ಪಡಿಸಿ ನಾಡಿನ ವಿವಿಧ ವಿದ್ವಾಂಸರನ್ನು ಪಂಡಿತರನ್ನು ಕರೆಯಿಸಿ, ಅವರಿಂದ ಜನರಿಗೆ ಅನೂಕೂಲವಾದ ಉಪದೇಶಗಳ ಬೋಧನೆಯನ್ನು ಹಮ್ಮಿಕೊಳ್ಳುತ್ತಾರೆ.

ಮಠದ ಪರಂಪರೆ

ಶ್ರೀ ಮಠಕ್ಕೆ ಒಟ್ಟು ಏಳು ಮಠಾಧೀಪತಿಗಳು ಅಧಿಕಾರ ವಹಿಸಿರುತ್ತಾರೆ. ಶ್ರೀ. ಷ.ಬ್ರ. ರುದ್ರಮುನಿ ಶಿವಾಚಾರ್ಯ ಮಹಾಸ್ವಾಮಿಗಳು, ಲೋಕ ಸಂಚಾರ ಕೈಗೊಂಡು ಈ ಗ್ರಾಮದ ಹೊರವಲಯದಲ್ಲಿ ಅನುಷ್ಠಾನಗೈದು, ಗ್ರಾಮದ ಭಕ್ತರ ಮೇರೆಗೆ ಈ ಗ್ರಾಮದ ಮಧ್ಯಭಾಗದಲ್ಲಿ ಈ ಮಠವನ್ನು ಸ್ಥಾಪಿಸಿದರು. ಈ ಮಠವು ರಂಭಾಪೂರಿ ಪೀಠದ ಶಾಖಾ ಮಠವೆಂದು ಬೆಳವಣಿಗೆಗೆ ಪಾತ್ರವಾಗಿದೆ. ಇವರ ತರುವಾಯ ಶ್ರೀ. ಷ. ಬ್ರ. ಪಂಚಾಕ್ಷರಿ ಶಿವಾಚಾರ್ಯ ಮಹಾಸ್ವಾಮಿಗಳು, ಮೂರನೆಯವರಾಗಿ ಶ್ರೀ ಷ.ಬ್ರ. ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ೪) ಶ್ರೀ ಷ.ಬ್ರ. ವೀರೂಪಾಕ್ಷಯ್ಯಾ ಶಿವಾಚಾರ್ಯ ಮಹಾಸ್ವಾಮಿಗಳು ೫) ಶ್ರಿ.ಷ.ಬ್ರ ಶ್ರೀ ವೀರಸಂಗಯ್ಯಾ ಶಿವಾಚಾರ್ಯ ಮಹಾಸ್ವಾಮಿಗಳು ೬) ಶ್ರೀ ಷ.ಭ್ರ. ವೀರೂಪಾಕ್ಷಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ೭) ಶ್ರೀ ಷ.ಬ್ರ. ವೀರಸಂಗಮೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು ನೂತನ ಪೀಠಾಧಿಪತಿಗಳು.

– ಹೀಗೆ ಮಠದ ಪರಂಪರೆ ಬೆಳೆದು ಬಂದಿದೆ. ಆರನೆಯ ಪೀಠಾಧಿಪತಿಯಾದ ಶ್ರೀ ಷ.ಬ್ರ.ವಿರೂಪಾಕ್ಷಲಿಂಗ ಶಿವಾಚಾರ್ಯರರ ಕಾಲದಲ್ಲಿ ಮಠದ ಕೀರ್ತಿ ಪಸರಿಸಿತ್ತು. ಮಠವನ್ನು

ಜೀರ್ಣೋದ್ದಾರ ಮಾಡಿದರು. ಶ್ರೀ ಮಠದ ಕಟ್ಟಡವನ್ನು ರಚಿಸಿದರು. ಶ್ರೀಮಠದಲ್ಲಿ ರೇಣುಕಾಚಾರ್ಯರ ಮೂರ್ತಿಯನ್ನು ಸ್ಥಾಪಿಸಿ, ಅದಕ್ಕೆ ಪ್ರತಿ ನಿತ್ಯ ಪೂಜೆ ಸಲ್ಲಿಸುತ್ತಿದ್ದಾರೆ. ಶ್ರೀ ಮಠದ ಅವರಣದಲ್ಲಿ ''ಕಲ್ಯಾಣ ಮಂಟಪ '' ವನ್ನು ರಚಿಸಿದ್ದಾರೆ. ಇಂದು ಶ್ರೀ ಷ. ಬ್ರ. ವೀರಸಂಗಮೇಶ್ವರ ಶಿವಾಚಾರ್ಯ ಸ್ವಾಮಿಗಳು ಮಠವನ್ನು ಸುವ್ಯವಸ್ಥಿತ ರೀತಿಯಲ್ಲಿ ಕಾಪಾಡಿಕೊಂಡು ಬರುತ್ತಿದ್ದಾರೆ. ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಚಟುವಟಿಕೆಗಳನ್ನು ಏರ್ಪಡಿಸಿಕೊಂಡು ಬರುತ್ತಿದ್ದಾರೆ. ಭಕ್ತರೊಡನೆ ನಿಕಟವಾದ ಸಂಬಂಧವನ್ನಿಟ್ಟು ಕೊಂಡಿದ್ದಾರೆ.

೪. ೭. ನಿಡಸೋಸಿ ಹಿರೇಮಠ

ಕುಷ್ಟಗಿ ತಾಲೂಕಿನಲ್ಲಿಯೇ ಬರುವ ನಿಡಸೋಸಿ ಗ್ರಾಮದ ಹೊರ ವಲಯದಲ್ಲಿ ಹಿರೇಮಠವು ಸ್ಥಾಪನೆಗೊಂಡಿದೆ. ಈ ಮಠಕ್ಕೆ ''ಪಟ್ಟಕಂತೆ ಹಿರೇಮಠ'' ವೆಂದು ಕರೆಯುತ್ತಾರೆ. ಈ ಭಾಗದ ಧಾರ್ಮಿಕ ಚಟುವಟಿಕೆಗಳ ಕೇಂದ್ರ ಬಿಂದುವಿನಂತಿದೆ. ಸುಮಾರು ಹದಿನಾರನೇ ಶತಮಾನದಲ್ಲಿ ಶ್ರೀ ಚನ್ನಬಸವ ಸ್ವಾಮಿಗಳೆಂಬವವರು ಜನ ಕಲ್ಯಾಣಕ್ಕಾಗಿ ಲೋಕ ಸಂಚಾರವನ್ನು ಕೈಗೊಂಡು, ಈ ಗ್ರಾಮದಲ್ಲಿ ನೆಲೆಸಿ, ನಂತರ ಮಠವನ್ನು ಸ್ಥಾಪಿಸಿದರು. ಈ ಮಠವು ಕಾಶಿ ಪೀಠದ ಶಾಖಾ ಮಠವಾಗಿ ಕಂಗೊಳಿಸುತ್ತಿದೆ. ಶ್ರೀ ಚನ್ನಬಸವ ಸ್ವಾಮಿಗಳು ಪವಾಡ ಪುರುಷರೆಂದೇ ಖ್ಯಾತಿ ಪಡೆದಿದ್ದರು. ತಪೋನಿಧಿಗಳಾಗಿದ್ದರು, ಅನುಷ್ಠಾನ ಮಾಡಿದ್ದವರಾಗಿದ್ದಾರೆ. ಭಕ್ತರನ್ನು ಕಂಡರೆ ಪ್ರೀತಿ ವಾತ್ಸಲ್ಯದಿಂದ ನೋಡಿಕೊಳ್ಳುತ್ತಿದ್ದರು. ಇವರ ಕಾಲದಲ್ಲಿ ಶ್ರೀಮಠದ ಕೀರ್ತಿ ನಾಡಿನ ತುಂಬೆಲ್ಲ ಪಸರಿಸಿದೆ.

ಪರಂಪರೆ

ಪಟ್ಟಕಂತೆಯ ಹಿರೇಮಠಕ್ಕೆ ಕೆವಲ ನಾಲ್ಕು ಸ್ವಾಮಿಗಳು ಪಟ್ಟಾಧಿಕಾರವನ್ನು ವಹಿಸಿ ಸೇವೆಯನ್ನು ಸಲ್ಲಿಸಿದ್ದು ಈ ಕೆಳಗಿನಂತೆ ಕಂಡು ಬರುತ್ತದೆ.

೧) ಶ್ರೀ ಷ.ಬ್ರ. ಚನ್ನಬಸವ ಶಿವಾಚಾರ್ಯ ಸ್ವಾಮಿಗಳು.

೨) ಶ್ರೀ ಷ.ಬ್ರ. ಕರಿಬಸವ ಶಿವಾಚಾರ್ಯ ಸ್ವಾಮಿಗಳು.

೩.) ಶ್ರೀ ಷ.ಬ್ರ. ಇಮ್ಮಡಿ ಕರಿಬಸವ ಶಿವಾಚಾರ್ಯ ಸ್ವಾಮಿಗಳು.

೪) ಶ್ರೀ ಷ.ಬ್ರ.ಎರಡನೆಯ ಚೆನ್ನಬಸವ ಶಿವಾಚಾರ್ಯ ಸ್ವಾಮಿಗಳು.

ಹೀಗೆ ಮಠದ ವಂಶಾವಳಿ ಬೆಳೆದು ಬಂದಿದೆ. ನೂತನ ಶ್ರೀಗಳಾದ ಎರಡನೇ ಚೆನ್ನಬಸವ ಶಿವಾಚಾರ್ಯ ಸ್ವಾಮಿಗಳ ಪೂರ್ವ ಹೆಸರು " ಶ್ರೀ ಘನಲಿಂಗ ಶಾಂತಮೂರ್ತಿ" ಸ್ವಾಮಿಗಳೆಂದಿತ್ತು. ಅದನ್ನು ಮಠದ ಮೂಲ ಗುರುಗಳ ಹೆಸರನ್ನು ಅಭಿದಾನ ಪಡಿಸಿ ೨೪.೦೨.೨೦೦೦ ರಂದು ಪಟ್ಟಾಧಿಕಾರವನ್ನು ವಹಿಸಿಕೊಟ್ಟರು. ಅಂದಿನಿಂದ ಶ್ರೀಗಳು ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸುವ್ಯವಸ್ಥಿತ ರೀತಿಯಲ್ಲಿ ನಡೆಸಿಕೊಂಡು ಬರುತ್ತಿದ್ದಾರೆ. ಭಕ್ತರೊಡನೆ ನಿಕಟವಾದ ಸಂಬಂಧವನ್ನಿಟ್ಟುಕೊಂಡಿದ್ದಾರೆ.

ಶ್ರೀ ಮಠದಿಂದ ಸುಮಾರು ಆರು ಶಾಖ ಮಠಗಳು ಹುಟ್ಟಿಕೊಂಡಿದ್ದು ಮುಂದಿನಂತೆ ಹೆಸರಿಸಲಾಗಿದೆ.

| | ಗ್ರಾಮ | ತಾಲೂಕ | ಜಿಲ್ಲಾ | ರಾಜ್ಯ |
|---|---|---|---|---|
| ೧. | ಹೊಸೂರ | ಕುಷ್ಟಗಿ | ಕೊಪ್ಪಳ | ಕರ್ನಾಟಕ |
| ೨. | ಕುಷ್ಟಗಿ | ಕುಷ್ಟಗಿ | ಕೊಪ್ಪಳ | ಕರ್ನಾಟಕ |
| ೩. | ಮಾದಾಪೂರ | ಕುಷ್ಟಗಿ | ಕೊಪ್ಪಳ | ಕರ್ನಾಟಕ |
| ೪. | ಲೋಕಾಪೂರ | ಮುಧೋಳ | ಕೊಪ್ಪಳ | ಕರ್ನಾಟಕ |
| ೫. | ಗೆಜ್ಜೆಭಾವಿ | ದೇವದುರ್ಗ | ರಾಯಚೂರ | ಕರ್ನಾಟಕ |
| ೬. | ಗುಡದೂರ | ಸಿಂಧನೂರ | ರಾಯಚುರ | ಕರ್ನಾಟಕ |

ಹೀಗಿ ಶಾಖಾ ಮಠಗಳು ಹೆಸರಿಸಬಹುದು. ಕುಷ್ಟಗಿ ನಗರದಲ್ಲಿ ಇರುವ ಶಾಖಾ ಮಠವು ಉತ್ತಮ ರೀತಿಯಲ್ಲಿ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯ ಚಟುವಟಿಕೆಯನ್ನು ನಡೆಸಿಕೊಂಡು ಬರುತ್ತಿದೆ. ನಿಡಸೋಸಿ ಮಠದ ನೂತನ ಪೀಠಾಧಿಪತಿಯಾದ ಚೆನ್ನಬಸವ ಮಹಾ ಸ್ವಾಮಿಗಳು ಈ ಮಠದ ಅಧಿಕಾರವನ್ನು ವಹಿಸಿ ಜವಾಬ್ದಾರಿಯಿಂದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಶ್ರೀ ಮಠದಲ್ಲಿ ಪ್ರತಿ ಅಮವಾಸ್ಯೆಯ ನಿಮಿತ್ಯ ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸಿ, ಭಕ್ತರಿಗೆ ಉಪಚಾರ, ಉಪದೇಶವನ್ನು ನೀಡುತ್ತಾರೆ. ಶಿವಾನುಭವ ಗೋಷ್ಠಿಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ಈ ಮಠದಲ್ಲಿ ಅಡ್ಡ ಪಲ್ಲಕ್ಕಿ ಉತ್ಸವ ಕಾರ್ಯಕ್ರಮ ಜರಗುತ್ತದೆ. ಶ್ರವಣ ಮಾಸದಲ್ಲಿ ಪುರಾಣ ಕಾರ್ಯಕ್ರಮ ಪ್ರವಚನಗಳನ್ನು ಹಮ್ಮಿಕೊಳ್ಳುತ್ತಾರೆ. ವಿದ್ಯಾರ್ಥಿನಿಲಯವನ್ನು ಪ್ರಾರಂಭಿಸಿ ಬಡಮಕ್ಕಳಿಗೆ ಉಚಿತವಾಗಿ ಆಶ್ರಯ ಕಲ್ಪಿಸಿಕೊಟ್ಟಿದ್ದಾರೆ. ಶ್ರಾವಣ ಮಾಸದಲ್ಲಿ ಅನ್ನದಾಸೋಹ ನಡೆಸುತ್ತಾರೆ. ಸಮಾಜದ ಉನ್ನತಿಗಾಗಿ ಶ್ರೀಗಳು ಹಗಲಿರಳು ಶ್ರಮಿಸುತ್ತಾರೆ.

### ೪.೮. ಪುರ್ತಗೇರಿ ಮಠ

ಕುಷ್ಟಗಿ ತಾಲೂಕಿನ ಪುರ್ತಗೇರಿ ಗ್ರಾಮದ ಹೃದಯ ಭಾಗದಲ್ಲಿ ಶ್ರೀ ರಂಭಾಪುರಿ ಪೀಠದ ಶಾಖ ಮಠವು ಇದೆ. ಇದು ಹಿರೇಮಠವಾಗಿ ಕಂಗೊಳಿಸುತ್ತಿದೆ. ಶ್ರೀ ರುದ್ರಮುನಿ ಶಿವಾಚಾರ್ಯ ಸ್ವಾಮಿಗಳು ಈ ಮಠವನ್ನು ಸ್ಥಾಪಿಸಿದರೆಂಬ ಉಲ್ಲೇಖಗಳಿವೆ. ಇವರ ಕಾಲದಲ್ಲಿ ಧಾರ್ಮಿಕ ಕಾರ್ಯ ಚಟುವಟಿಕೆಗಳಿಗೆ ಮಹತ್ವದ ಸ್ಥಾನವಿತ್ತು. ಇವರು ಲಿಂಗೈಕ್ಯರಾದ ನಂತರ ಹಲವಾರು ವರ್ಷಗಳ ಕಾಲ ಈ ಮಠವು ಮಠಾಧೀಶರಿಲ್ಲದೇ ಖಾಲಿ ಉಳಿದಿತ್ತು. ಮಠಾಧೀಶರಿಗೆ ಶ್ರೀ ಮಠವು ಕೈಮಾಡಿ ಕರೆಯುತ್ತಿತ್ತು. ಅಂತಹ ಸಂದರ್ಭದಲ್ಲಿ ಶ್ರೀ ಗುರುಪಾದ ಶಿವಾಚಾರ್ಯ ಮಹಾಸ್ವಾಮಿಗಳು ಮಠದ ನೇತೃತ್ವವನ್ನು ವಹಿಸಿಕೊಂಡು ಮಠವು ಉನ್ನತ ರೀತಿಯಿಂದ ಮುನ್ನೆಡೆಸಿಕೊಂಡು ಬಂದರು. ಇವರ ತರುವಾಯ ಶ್ರೀ ಷ.ಬ್ರ. ಶಿವಸಂಗಯ್ಯಾ ಮಹಾಸ್ವಾಮಿಗಳು ಮಠದ ಅಧಿಕಾರವನ್ನು ವಹಿಸಿಕೊಂಡರು. ಇವರ ನಂತರ ಶ್ರೀ ಷ.ಬ್ರ. ಕೈಲಾಸಲಿಂಗನಾಥಯ್ಯಾ ಶಿವಾಚಾರ್ಯ ಮಹಾಸ್ವಾಮಿಗಳು ಮಠದ ಅಧಿಕಾರವನ್ನು ವಹಿಸಿಕೊಂಡು ಸೇವೆಯನ್ನು ಸಲ್ಲಿಸಿದರು. ನಂತರ ಶ್ರೀ ಮಠವು ಮತ್ತೆ ಕೆಲವು ವರ್ಷಗಳ ಕಾಲ ಮಠಾಧೀಶರಿಲ್ಲದೆ ಖಾಲಿ ಉಳಿದಿತ್ತು. ಗ್ರಾಮದ ಭಕ್ತರೆಲ್ಲರೂ ಕೂಡಿ ಶ್ರೀ ಷ.ಬ್ರ. ಗುರುಪಾದ ಶಿವಾಚಾರ್ಯ ಸ್ವಾಮಿಗಳವರನ್ನು ಉತ್ತರಧಿಕಾರಿಯನ್ನಾಗಿ ನೇಮಕ ಮಾಡಿದರು. ನೂತನ ಶ್ರೀಗಳು ಮಠದಲ್ಲಿ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯ ಚಟುವಟಿಕೆಗಳನ್ನು ನಡೆಸಿಕೊಂಡು ಭಕ್ತರಲ್ಲಿ ಮೆಚ್ಚುಗೆ ಪಡೆಯುತ್ತಿದ್ದಾರೆ. ಶ್ರೀ ಮಠದಲ್ಲಿ ಪಾಠ ಪ್ರವಚನ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ನಾಡಿನ ವಿವಿಧ ವಿದ್ವಾಂಸರನ್ನು ಕರೆಯಿಸಿ ಧಾರ್ಮಿಕ ತತ್ವಗಳ ಮೂಲಕ ಉಪನ್ಯಾಸ ಉಪದೇಶಗಳನ್ನು ನಡೆಸಿಕೊಂಡು ಬರುತ್ತಾರೆ.

### ೪.೯. ಗುಡುದೂರ ಮಠ

ಗುಡದೂರ ಗ್ರಾಮದ ಹೃದಯ ಭಾಗದಲ್ಲಿ ದೊಡ್ಡ ಬಸವೇಶ್ವ ಮಠ ಸ್ಥಾಪನೆಯಾಗಿದೆ. ಈ ಮಠವು ಗ್ರಾಮದಿಂದ ಹೊರವಲಯಕ್ಕೆ ವರ್ಗಾಯಿಸಲಾಗಿದೆ. ಮಠ ಹೊಸ ರೂಪ ತಾಳಿದೆ. ಮಠದಲ್ಲಿ ಧಾರ್ಮಿಕ ಕಾರ್ಯಕ್ರಮಗಳು ಸದಾ ಜರುಗುತ್ತವೆ. ಈ ಮಠವು ಸಂಸಾರಿಕ ಮಠವಾಗಿ ಪರವರ್ತನೆಗೊಂಡಿದೆ. ನೂತನ ಪೀಠಾಧಿಪತಿಗಳಾದ ಶ್ರೀ ನೀಲಕಂಠ ಸ್ವಾಮಿಗಳು ಸಂಸಾರಿಕತೆಯ ಜತೆ ಜತೆಗೆ ಧಾರ್ಮಿಕ ಗೋಷ್ಠಿಗಳನ್ನು ನಡೆಸಿಕೊಂಡು ಬರುತ್ತಾರೆ.

ಪರಂಪರೆ

ಶ್ರೀ ದೊಡ್ಡ ಬಸವೇಶ್ವರ ತಾತ ನವರು ಮಠದ ಮೂಲ ಸಂಸ್ಥಾಪಕರು. ಆದ್ದರಿಂದಲೇ ಈ ಮಠಕ್ಕೆ ಈ ಹೆಸರು ಬಂದಿದೆ. ಎರಡನೆಯವರು ಶ್ರೀ ಬಸವಯ್ಯಾ ತಾತನವರು ಇವರು ಶ್ರೀ ಮಠದ ಧಾರ್ಮಿಕ ಕಾರ್ಯಕ್ರಮಗಳನ್ನು ಉತ್ತಮ ರೀತಿಯಲ್ಲಿ ನಡೆಸಿಕೊಂಡು ಬಂದವರು. ಇವರ ನಂತರ ಶ್ರೀ ನೀಲಕಂಠಯ್ಯಾ ತಾತನವರು ಪ್ರಸ್ತುತ ಇರುವ ಸ್ವಾಮಿಗಳು.

೪. ೧೦. ಯಲಬರ್ಗಾ ಹಿರೇಮಠ

ಕೊಪ್ಪಳ ಜಿಲ್ಲೆಯ ಯಲಬರ್ಗಾ ನಗರದ ಹೃದಯ ಭಾಗದಲ್ಲಿ '' ಶ್ರೀ ಸಿದ್ಧರಾಮೇಶ್ವರ ಸಂಸ್ಥಾನ ಮಠವು '' ಸ್ಥಾಪನೆಯಾಗಿದೆ. ಇದು ಪುರಾತನ ಮಠವೆಂದು ಹೇಳಲಾಗುತ್ತದೆ. ವೀರಶೈವ ಧರ್ಮದ ಕೇಂದ್ರ ಬಿಂದುವಾಗಿ ಈ ಮಠವು ಬೆಳೆಯ ತೊಡಗಿದೆ.

ಪರಂಪರೆ

ಶ್ರೀ ಮಠಕ್ಕೆ ಹತ್ತು ಜನ ಸ್ವಾಮಿಗಳು ಅಧಿಕಾರವನ್ನು ವಹಿಸಿಕೊಂಡು ಸೇವೆಯನ್ನು ಸಲ್ಲಿಸಿದ್ದಾರೆ.

೧) ಶ್ರೀ ಷ.ಬ್ರ. ಜಡೇ ಸಿದ್ಧರಾಮ ಶಿವಾಚಾರ್ಯ ಸ್ವಾಮಿಗಳು – ಮಠದ ಮೂಲ ಸಂಸ್ಥಾಪಕರು

೨) ಶ್ರೀ ಷ.ಬ್ರ. ಕೆಂಪ ಸಿದ್ಧರಾಮ ಶಿವಾಚಾರ್ಯ ಸ್ವಾಮಿಗಳು.

೩) ಶ್ರೀ ಷ.ಬ್ರ. ಆರು ಬೆರಳಿನ ಸಿದ್ಧರಾಮ ಶಿವಾಚಾರ್ಯ ಸ್ವಾಮಿಗಳು.
(ಈ ಶ್ರೀಗಳಿಗೆ ಒಂದು ಕೈಯಲ್ಲಿ ಆರು ಬೆರಳುಗಳಿದ್ದವು. ಆದ್ದಕಾರಣ ಇವರಿಗೆ ಈ ಹೆಸರು ಬಂದಿದೆಯೆಂದು ತಿಳಿದು ಬರುತ್ತದೆ. )

೪) ಶ್ರೀ ಷ.ಬ್ರ. ರುದ್ರಾಕ್ಷಿ ಕಿರಿಟ ಸಿದ್ಧರಾಮ ಶಿವಾಚಾರ್ಯ ಸ್ವಾಮಿಗಳು.
(ಈ ಸ್ವಾಮಿಗಳಿಗೆ ರುದ್ರಾಕ್ಷಿಯ ಕಿರಿಟದಾರಣೆಯನ್ನು ಮಾಡಿದ್ದರಿಂದ ಈ ಹೆಸರು ಲಭಿಸಿದೆಯೆಂದು ತಿಳಿದು ಬಂದಿದೆ.)

೫) ಶ್ರೀ ಷ.ಬ್ರ. ವೈರಾಗ್ಯ ಸಿದ್ಧರಾಮ ಶಿವಾಚಾರ್ಯ ಸ್ವಾಮಿಗಳು.

೬) ಶ್ರೀ ಷ.ಬ್ರ. ಎರಡನೆಯ ವೈರಾಗ್ಯಸಿದ್ಧರಾಮ ಶಿವಾಚಾರ್ಯ ಸ್ವಾಮಿಗಳು.

೭) ಶ್ರೀ ಷ.ಬ್ರ. ಸಿದ್ಧರಾಮ ಶಿವಾಚಾರ್ಯ ಸ್ವಾಮಿಗಳು.

೮) ಶ್ರೀ ಷ.ಬ್ರ. ಮೂರನೆಯ ಸಿದ್ಧರಾಮ ಶಿವಾಚಾರ್ಯ ಸ್ವಾಮಿಗಳು.

೯) ಶ್ರೀ ಷ.ಬ್ರ. ಸಿದ್ಧರಾಮ ಶಿವಾಚಾರ್ಯ ಸ್ವಾಮಿಗಳು.

೧೦) ಶ್ರೀ ಷ.ಬ್ರ. ಸಿದ್ಧರಾಮೇಶ್ವರ ಶಿವಾಚಾರ್ಯ ಸ್ವಾಮಿಗಳು. – (ಇವರು ನೂತನ ಶ್ರೀಗಳು)

– ಹೀಗೆ ಶ್ರೀ ಮಠದ ಪರಂಪರೆ ಬೆಳೆದು ಬಂದಿದೆ. ಶ್ರೀಮಠದಲ್ಲಿ ಸದಾ ಧಾರ್ಮಿಕ, ಕಾರ್ಯ ಚಟುವಟಿಕೆಗಳು ನಡೆಯುತ್ತವೆ. ಪಾಠ – ಪ್ರವಚನ ಕಾರ್ಯಕ್ರಮಗಳನ್ನು ಏರ್ಪಡಿಸಿ, ನಾಡಿನ ವಿವಿಧ ವಿದ್ವಾಂಸರವನ್ನು ಕರೆಯಿಸಿ ಉಪನ್ಯಾಸ ಉಪದೇಶಗಳನ್ನು ನೀಡುತ್ತಾ ಧರ್ಮ ಸಂಘಟನೆ ಹಾಗೂ ಧರ್ಮ ಪುರಾಣವನ್ನು ಮಾಡುತ್ತಾರೆ. ಶ್ರೀ ಮಠದಲ್ಲಿ ಅನ್ನದಾಸೊಹ ಸತತವಾಗಿ ನಡೆಸಿಕೊಂಡು ಬರುತ್ತಾರೆ. "ಸಿದ್ದರಾಮೇಶ್ವರ ಶಿಕ್ಷಣ ಸಂಸ್ಥೆ" ಯನ್ನು ಪ್ರಾರಂಭಿಸಿ ಪೂರ್ವ ಪ್ರಾಥಮಿಕ, ಹಾಗೂ ಪ್ರೌಢ ಶಾಲೆಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ. ಅಲ್ಲದೆ ಮಠದಲ್ಲಿ ಹೊಲಿಗೆ ತರಬೆತಿ ಕೇಂದ್ರವನ್ನು ಪ್ರಾರಂಬಿಸಿದ್ದಾರೆ. ಇದರಿಂದ ಗ್ರಾಮದ ಹೆಣ್ಣು ಮಕ್ಕಳಿಗೆ ಅನುಕೂಲವಾಗುತ್ತಿದೆ. ಪ್ರತಿ ತಿಂಗಳ ಅಮವಾಸೆಯ ನಿಮಿತ್ಯ ಶಿವಾನೂಭವ ಗೊಷ್ಠಿಯನ್ನು ಏರ್ಪಡಿಸುತ್ತಾರೆ. ಸರ್ವತೋಮುಖ ಅಭಿವೃದ್ದಿಗಾಗಿ ಶ್ರೀಗಳು ಸತತ ಪ್ರಯತ್ನ ಪಡುತ್ತಾರೆ.

೪.೧೧. ಶ್ರೀದರಮುಡಿ ಹಿರೇಮಠ

ಯಲಬುರ್ಗಾ ನಗರದ ಹೊರ ವಲಯದಲ್ಲಿ ಉಜ್ಜಯನಿ ಮಠದ ಶಾಖಾ ಮಠವಾಗಿ ಸ್ಥಾಪನೆಯಾಗಿದೆ ಧಾರ್ಮಿಕ ಕಾರ್ಯ ಚಟುವಟಿಕೆಗಳನ್ನು ಸತತವಾಗಿ ನಡೆಸಿಕೊಂಡು ಮಠದ ಕೀರ್ತಿ ನಾಡಿನಲ್ಲಿ ಪಸರಿಸಿದೆ. ಶ್ರೀ ಬಸವಲಿಂಗ ಶಿವಾಚಾರ್ಯ ಸ್ವಾಮಿಗಳೆಂಬುವವರು, ಬಳ್ಳಾರಿ ಜಿಲ್ಲೆಯಿಂದ ಲೋಕಸಂಚಾರ ಕೈಗೊಂಡು, ಧರ್ಮ ಪ್ರಚಾರಕೆಂದು ಹೊರಟು, ಈ ಗ್ರಾಮಕ್ಕೆ ಬಂದು ನೆಲೆಸಿದರು. ಭಕ್ತರ ಒತ್ತಾಯದ ಮೇರೆಗೆ ಈ ಗ್ರಾಮದಲ್ಲಿ ಒಂದು ಮಠವನ್ನು ಸ್ಥಾಪಿಸಿದ್ದರು.

ವಂಶಾವಳಿ

೧) ಶ್ರೀ ಷ.ಬ್ರ. ಬಸವಲಿಂಗ ಶಿವಾಚಾರ್ಯ ಸ್ವಾಮಿಗಳು ಮಠದ ಮೂಲ ಸಂಸ್ಥಾಪಕರು

೨) ಶ್ರೀ ಷ.ಬ್ರ. ಗುಡ್ಡದ ಶಿವಾಚಾರ್ಯ ಸ್ವಾಮಿಗಳು.

೩) ಶ್ರೀ ಷ.ಬ್ರ. ಕರಿಬಸವ ಶಿವಾಚಾರ್ಯ ಸ್ವಾಮಿಗಳು.

೪) ಶ್ರೀ ಷ.ಬ್ರ. ಕೊಟ್ಟುರ ಬಸವ ಶಿವಾಚಾರ್ಯ ಸ್ವಾಮಿಗಳು.

೫) ಶ್ರೀ ಷ.ಬ್ರ. ಎರಡನೆಯ ಬಸವಲಿಂಗ ಶಿವಾಚಾರ್ಯ ಸ್ವಾಮಿಗಳು.

೬) ಶ್ರೀ ಷ.ಬ್ರ. ಮೂರನೆಯ ಬಸವಲಿಂಗ ಶಿವಾಚಾರ್ಯ ಸ್ವಾಮಿಗಳು.

೭) ಶ್ರೀ ಷ.ಬ್ರ. ರವಿಸ್ವಾಮಿ ಶಿವಾಚಾರ್ಯ ಸ್ವಾಮಿಗಳು – ನೂತನ ಪೀಠಾಧಿಪತಿಗಳು.

– ಹೀಗೆ ಶ್ರೀ ಮಠದ ಪರಂಪರೆ ಒಟ್ಟು ಏಳು ಪೀಠಾಧಿಪತಿಗಳು ಅಧಿಕಾರವನ್ನು ವಹಿಸಿದ್ದಾರೆ. ಮೂರನೆಯ ಪೀಠಾಧಿಪತಿಯಾದ ಷ.ಬ್ರ. ಶ್ರೀ ಕರಿಬಸಬವ ಶಿವಾಚಾರ್ಯ ಸ್ವಾಮಿಗಳು ಪಟ್ಟಾಧಿಕಾರಿಗಳಾಗಿದ್ದಾಗ ಮಠವು ಸರ್ವೋನ್ನತ ರೀತಿಯಲ್ಲಿ ಪ್ರಗತಿಯನ್ನು ಸಾಧಿಸಿದ್ದರು. ಇಂದು ಶ್ರೀ ಮಠದಲ್ಲಿ ಅನ್ನದಾಸೋಹ ಸತತವಾಗಿ ನಡೆಸಿಕೊಂಡು ಬರುತ್ತಾರೆ. ಮಠದಲ್ಲಿ ಪಾಠ ಪ್ರವಚನ ಕಾರ್ಯಕ್ರಮಗಳು ಜರುಗುತ್ತವೆ.

೪. ೧೨. ಬೆದವಟ್ಟಿ ಹಿರೇಮಠ

ಯಲಬರ್ಗಾ ತಾಲೂಕಿನ ಬೆದವಟ್ಟಿ ಗ್ರಾಮದ ಹಿರೇಮಠವು ಈ ಭಾಗದ ಧಾರ್ಮಿಕ ಕೇಂದ್ರವಾಗಿ ಕಂಗೊಳಿಸುತ್ತಿದೆ. ವೀರಶೈವ ಧರ್ಮದ ತತ್ವ ಪ್ರಚಾರಣೆಯಲ್ಲಿ ಮಹತ್ವದ ಪಾತ್ರ ವಹಿಸಿದ ಮಠವಾಗಿದೆ. ಶ್ರಿಮಠವು ಪಂಚಪೀಠ ಜಗದ್ಗುರುಗಳ ಬಗ್ಗೆ ನಿಕಟವಾದ ಸಂಪರ್ಕಹೊಂದಿದೆ. ಎಲ್ಲ ಕಾರ್ಯಕ್ರಮಗಳು ಪಂಚಾಚಾರ್ಯರ ಸಂಪ್ರದಾಯದಂತೆ ನಡೆಯುತವೆ. ಶ್ರೀಮಠಕ್ಕೆ ಒಟ್ಟು ಹತ್ತು ಪೀಠಾಧಿಪತಿಗಳು ತಮ್ಮ ಸೇವೆಯನ್ನು ಸಲ್ಲಿಸಿದ್ದರು.

ವಂಶಾವಳಿ

೧) ಶ್ರೀ ಷ.ಬ್ರ. ಸಿದ್ಧರಾಮ ಶಿವಾಚಾರ್ಯ ಮಹಾಸ್ವಾಮಿಗಳು (ಮಠದ ಮೂಲ ಸಂಸ್ಥಾಪಕರು).

೨) ಶ್ರೀ ಷ.ಬ್ರ. ಎರಡನೆಯ ಸಿದ್ಧರಾಮ ಶಿವಾಚಾರ್ಯ ಮಹಾಸ್ವಾಮಿಗಳು.

೩) ಶ್ರೀ ಷ.ಬ್ರ. ಗುರುಲಿಂಗಯ್ಯಾ ಶಿವಾಚಾರ್ಯ ಮಹಾಸ್ವಾಮಿಗಳು.

೪) ಶ್ರೀ ಷ.ಬ್ರ. ಅನ್ನದಾನ ಶಿವಾಚಾರ್ಯ ಮಹಾಸ್ವಾಮಿಗಳು.

೫) ಶ್ರೀ ಷ.ಬ್ರ. ಚರಂತಯ್ಯಾ ಬಸವಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು.

೬) ಶ್ರೀ ಷ.ಬ್ರ. ಮುರನೆಯ ಸಿದ್ಧರಾಮ ಬಸವಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು.

೭) ಶ್ರೀ ಷ.ಬ್ರ. ಪುಷ್ಪದಯ್ಯಾ ಶಿವಾಚಾರ್ಯ ಮಹಾಸ್ವಾಮಿಗಳು.

೮) ಶ್ರೀ ಷ.ಬ್ರ. ಪಂಚಾಕ್ಷರಯ್ಯಾ ಶಿವಾಚಾರ್ಯ ಮಹಾಸ್ವಾಮಿಗಳು.

೯) ಶ್ರೀ ಷ.ಬ್ರ. ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು.

೧೦) ಶ್ರೀ ಷ.ಬ್ರ. ಶಿವಸಂಗಮೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು.

– ಹೀಗೆ ಶ್ರೀ ಮಠದ ಪರಂಪರೆ ಬೆಳೆದು ಬಂದಿದೆ. ಇಲ್ಲಿಯ ಮಹತ್ವದ ಅಂಶವೆನೆಂದರೆ ಈ ಮಠಕ್ಕೆ ಪಟ್ಟಾಧಿಕಾರವನ್ನು ವಹಿಸಿಕೊಳ್ಳುವ ಸಂದರ್ಭದಲ್ಲಿ ಅವರ ಹೆಸರಿನ ಹಿಂದೆ “ ೧೦೮ ” ಎಂದು

ಪಂಚಾಚಾರ್ಯರ ಸಂಕೇತವನ್ನು ಈ ಮಠದ ಪರಂಪರೆಯಲ್ಲಿ ಕಂಡುಬರುತ್ತದೆ. ಶ್ರೀ ಮಠದಲ್ಲಿ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಾರೆ. ಪ್ರತಿ ಹುಣ್ಣಿಮೆ ಹಾಗೂ ಅಮವಾಸೆಯ ದಿವಸದಂದು ವಿಶೇಷ ಪೂಜೆ ಪ್ರವಚನಗಳ ಕಾರ್ಯಕ್ರಮಗಳು ಜರುಗತ್ತವೆ. ಶ್ರೀ ಸಿದ್ದಲಿಂಗ ಶಿವಾಚಾರ್ಯ ಸ್ವಾಮಿಗಳು ಪುಣ್ಯರಾಧನೆ ಕಾರ್ಯಕ್ರಮದ ನಿಮಿತ್ಯ ಪಂಚ ಪೀಠಾಧಿಶರನ್ನು ಕರೆಯಿಸಿ, ಅಡ್ಡ ಪಲ್ಲಕ್ಕಿ ಉತ್ಸವವನ್ನು ಏರ್ಪಡಿಸುತ್ತಾರೆ. ವಿವಿಧ ವಿಧ್ವಾಂಸರನ್ನು ಸಾಹಿತಿಗಳನ್ನು ಕರೆಯಿಸಿ, ಧರ್ಮೋಪದೇಶ ನಿಡಿಸುತ್ತಾರೆ. ಮಠದಲ್ಲಿ ಅನ್ನದಾಸೋಹ ಸತತವಾಗಿ ನಡೆದುಕೊಂಡು, ಮಠ ಮುನ್ನಡೆಸುತ್ತಿದ್ದಾರೆ.

### ೪. ೧೩. ಕುದರೆಮೋತಿ ವಿರಕ್ತಮಠ

ಯಲಬುರ್ಗಾ ತಾಲೂಕಿನ ಕುದುರೆಮೋತಿ ಗ್ರಾಮದ ವಿರಕ್ತಮಠವು ಪ್ರಾಚೀನವಾದ ಮಠವೆಂದು ಉಲ್ಲೇಖಿಸಲಾಗಿದೆ. ಮಠದ ಮೂಲ ಗುರುಗಳು ಮೈಸೂರ ನಗರದವರಾಗಿದ್ದರಿಂದ ಈ ಮಠವು " ಮೈಸೂರ ಸಂಸ್ಥಾನ ಮಠ " ವೆಂದು ಕರೆಯುವ ವಾಡಿಕೆ ಇದೆ. ಈ ಭಾಗದಲ್ಲಿ ಧಾರ್ಮಿಕ ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿದೆ.

### ಪರಂಪರೆ

ಮೈಸೂರ ಮಹಾಸ್ವಾಮಿಗಳು ಲೋಕಕಲ್ಯಾಣಕ್ಕಾಗಿ ದೇಶ ಸಂಚಾರ ಗೈಯುತ್ತ ಈ ಗ್ರಾಮದ ಹೊರ ವಲಯದಲ್ಲಿ ಬಂದು ಅನುಷ್ಠಾನ ಕುಳಿತರು. ಗ್ರಾಮದ ಭಕ್ತರೆಲ್ಲರೂ ಕೂಡಿ ಶ್ರೀಗಳಿಗೆ ಗ್ರಾಮಕ್ಕೆ ಕರೆದುಕೊಂಡು ಬಂದು ಮಠವನ್ನು ಸ್ಥಾಪಿಸಲು ಭಿನ್ನವಿಸಿಕೊಂಡರು. ಭಕ್ತರ ಕರೆಗೆ ತಿರಸ್ಕರಿಸದೆ ಮಠವನ್ನು ಸ್ಥಾಪಿಸಿದರು. ಕೆಲವು ಕಾಲ ಶ್ರೀಮಠದಲ್ಲಿಯೇ ದ್ಯಾನ, ಅನುಷ್ಠಾನಗಳನ್ನು ಕೈಗೊಂಡರು. ನಂತರ ಶ್ರೀ ಕರಿಸಿದ್ಧ ಸ್ವಾಮಿಗಳಿಗೆ ಅಧಿಕಾರವನ್ನು ವಹಿಸಿಟೊಟ್ಟು ಮತ್ತೆ ದೇಶ ಸಂಚಾರಕ್ಕೆಂದು ಹೊರಟು ಹೋದರು. ಹೋದ ಶ್ರೀಗಳು ಮರಳಿ ಬರಲಿಲ್ಲವೆಂದು ತಿಳಿದು ಬರುತ್ತದೆ. ಮೂರನೆಯವರಾಗಿ ಶ್ರೀ ಮ.ನಿ.ಪ್ರ. ಗುರುಮಹಾಂತ ಸ್ವಾಮಿಗಳು. ೪) ಶ್ರೀ ಮ.ನಿ.ಪ್ರ.ಮರಿ ಮಹಾಂತ ಸ್ವಾಮಿಗಳು ೫) ಶ್ರೀ ಮ.ನಿ.ಪ್ರ. ಎರಡನೆಯ ಕರಿಸಿದ್ದ ಸ್ವಾಮಿಗಳು ೬) ಶ್ರೀ ಮ.ನಿ.ಪ್ರ. ಸಿದ್ಧರಾಮ ಸ್ವಾಮಿಗಳು ೭) ಶ್ರೀ ಮ.ನಿ.ಪ್ರ. ಗುರುಮಹಾಂತ ಸ್ವಾಮಿಗಳು ೮) ಶ್ರೀ ಮ.ನಿ.ಪ್ರ.ಎರಡನೆಯ ಸಿದ್ಧರಾಮ ಸ್ವಾಮಿಗಳು ೯) ಶ್ರೀ ಮ.ನಿ.ಪ್ರ.ಮೂರನೆಯ ಗುರುಮಹಾಂತ ಸ್ವಾಮಿಗಳು ೧೦) ಶ್ರೀ ಮ.ನಿ.ಪ್ರ. ಎರಡನೆಯ ಮರಿ ಮಹಾಂತ ಸ್ವಾಮಿಗಳು ೧೧) ಶ್ರೀ

ಮ.ನಿ.ಪ್ರ. ಸಿದ್ದೇಶ್ವರ ಸ್ವಾಮಿಗಳು ೧೨) ಶ್ರೀ ಮ.ನಿ.ಪ್ರ. ಮುರನೆಯ ಮರಿ ಮಹಾಂತ ಸ್ವಾಮಿಗಳು ೧೩) ಶ್ರೀ ಮ.ನಿ.ಪ್ರ. ನಾಲ್ಕನೆಯ ಗುರುಮಹಾಂತ ಸ್ವಾಮಿಗಳು ೧೪) ಶ್ರೀ ಮ.ನಿ.ಪ್ರ. ವಿಜಯ ಮಹಾಂತ ಸ್ವಾಮಿಗಳು (ನೂತನ ಮಠಾಧೀಶರು).

– ಹೀಗೆ ಮಠದ ಪರಂಪರೆಯಲ್ಲಿ ಒಟ್ಟು ಹದಿನಾಲ್ಕು ಸ್ವಾಮಿಗಳು ಅಧಿಕಾರಕ್ಕೆ ಬಂದಿರುತ್ತಾರೆ. ಶ್ರೀ ಮಠದಲ್ಲಿ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳು ಹಮ್ಮಿಕೊಳ್ಳುತ್ತಾರೆ. ವಿದ್ವಾಂಸರನ್ನು ಕರೆಯಿಸಿ ಅವರಿಂದ ಉಪನ್ಯಾಸ ಉಪದೇಶಗಳನ್ನು ಕೊಡಿಸುತ್ತಾರೆ. ಶರಣರ ತತ್ವಗಳನ್ನು ಪರಿಪಾಲಿಸಿಕೊಂಡು, ಧರ್ಮದ ಜಾಗೃತಿಯನ್ನುಂಟು ಮಾಡುತ್ತಿದ್ದಾರೆ, ಸರ್ವತೋಮುಖವಾಗಿ ಮಠವು ಅಭಿವೃದ್ಧಿ ಪಡಿಸುತ್ತಿದ್ದಾರೆ.

೪. ೧೪. ಗಂಗಾವತಿ ವಿರಕ್ತಮಠ

ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನಲ್ಲಿ ವಿರಕ್ತ ಮಠವಿದೆ. ಇದಕ್ಕೆ ''ಕೊಟ್ಟುರೇಶ್ವರ ಕಲ್ಮಠ'' ವೆಂದು ಕರೆಯುತ್ತಾರೆ. ಅಲ್ಲದೆ ಇದೇ ನಗರದಲ್ಲಿ ಶ್ರೀ ಮಲ್ಲಿಕಾರ್ಜುನ ಮಠ ಹಾಗೂ ಗುಮ್ಮಳಾಪುರದ ಮಠಗಳು ದೊರೆಯುತ್ತವೆ. ಆದರೆ ಗಂಗಾವತಿ ಮಹಾನಗರದ ಹೃದಯ ಭಾಗದಲ್ಲಿರುವ ಶ್ರೀ ಕೊಟ್ಟುರೇಶ್ವರ ಕಲ್ಮಠವು ಮಾತ್ರ ಪ್ರಸಿದ್ಧಿಯನ್ನು ಪಡಿದುಕೊಂಡು ಬೆಳೆಯುತ್ತಿದೆ. ಮಠದ ಮೂಲ ಗುರುಗಳಾದ ಶ್ರೀ ಕೊಟ್ಟುರೇಶ್ವರ ಮಹಾಸ್ವಾಮಿಗಳ ನೇತೃತ್ವದಲ್ಲಿ ಶ್ರೀ ಮಠವು ಭವ್ಯವಾದ ಕಲ್ಲಿನಿಂದ ನಿರ್ಮಿಸಿದ್ದರಿಂದ ಈ ಮಠಕ್ಕೆ ''ಕಲ್ಮಠ'' ವೆಂದು ಕರೆಯುವ ಸಂಪ್ರಾದಾಯವಿದೆ. ಶ್ರೀ ಕೊಟ್ಟುರೇಶ್ವರ ಸ್ವಾಮಿಗಳು ಧರ್ಮ ಪ್ರಚಾರಕ್ಕಾಗಿ ಹೊರಟು ಗಂಗಾವತಿ ನಗರವನ್ನು ಸೇರುತ್ತಾರೆ. ಈ ಗ್ರಾಮದ ಶ್ರೀ ದಿಗಂಬರ ಯೋಗಿಗಳೆಂಬುವವರು ಬಂದು ಶ್ರೀ ಕೊಟ್ಟುರೇಶ್ವರ ಸ್ವಾಮಿಗಳಿಗೆ ಈ ಗ್ರಾಮದಲ್ಲಿ ತಾವು ನೆಲೆಸಿ ವೀರಶೈವ ಧರ್ಮವನ್ನು ಬೆಳೆಸಬೇಕೆಂದು ಭಿನ್ನವಿಸಿಕೊಂಡಾಗ ಶ್ರೀ ಕೊಟ್ಟುರೇಶ್ವರ ಸ್ವಾಮಿಗಳು ಈ ಭಾಗದಲ್ಲಿ ಭಕ್ತಮೆರೆಗೆ ಭವ್ಯ ಮಠವನ್ನು ನಿರ್ಮಿಸಿ ವೀರಶೈವ ತತ್ವ ಪ್ರಚಾರ ಮಾಡತೋಡಗಿದರೆಂದು ಹೇಳಲಾಗುತ್ತದೆ. ಶ್ರೀಗಳು ಸಿದ್ಧಿಪುರುಷರು, ತಪೋನಿಷ್ಠರಾಗಿದ್ದರು. ಅಲ್ಲದೆ ಪವಾಡ ಪುರುಷರೆಂದೇ ಖ್ಯಾತಿ ಪಡೆದಿದ್ದರು.

ಪರಂಪರೆ

ಶ್ರೀ ಕೊಟ್ಟುರೇಶ್ವರ ಕಲ್ಮಠ (ವಿರಕ್ತಮಠ) ದಲ್ಲಿ ಒಟ್ಟು ಒಂಬತ್ತು ಸ್ವಾಮಿಗಳು ಅಧಿಕಾರವನ್ನು ವಹಿಸಿಕೊಂಡು ಸೇವೆಯನ್ನು ಸಲ್ಲಿಸಿದರು.

೧) ಶ್ರೀ ಮ.ನಿ.ಪ್ರ. ಕೊಟ್ಟುರೇಶ್ವರ ಸ್ವಾಮಿಗಳು (ಮಠದ ಮೂಲ ಸಂಸ್ಥಾಪಕರು)

೨) ಶ್ರೀ ಮ. ನಿ ಪ್ರ. ಮ.ನಿ.ಪ್ರ. ಚೆನ್ನಬಸವ ಸ್ವಾಮಿಗಳು ೩) ಹಿರೇಕೊಟ್ಟುರು ಸ್ವಾಮಿಗಳು.

೪) ಶ್ರೀ ಮ.ನಿ.ಪ್ರ ಚನ್ನಬಸವ ಸ್ವಾಮಿಗಳು. ೫) ಶ್ರೀ ಮ. ನಿ. ಪ್ರ. ಸಣ್ಣಕೊಟ್ಟುರ ಸ್ವಾಮಿಗಳು

೬) ಶ್ರೀ ಮ. ನಿ. ಪ್ರ. ಸಿದ್ದಲಿಂಗ ಕೊಟ್ಟುರು ಸ್ವಾಮಿಗಳು.

೭) ಶ್ರೀ ಮ.ನಿ.ಪ್ರ. ಎರಡನೆಯ ಹಿರೇಕೊಟ್ಟುರ ಸ್ವಾಮಿಗಳ. ೮) ಶ್ರೀ ಮ. ನಿ. ಪ್ರ. ಚನ್ನಬಸವ ಸ್ವಾಮಿಗಳು

೯) ಶ್ರೀ ಮ.ನಿ. ಪ್ರ. ಮರಿ ಚನ್ನವಸವ ಸ್ವಾಮಿಗಳು ೧೦) ಕೊಟುರೇಶ್ವರ ಸ್ವಾಮಿಗಳು (ಸದ್ಯದ ಶ್ರೀಗಳು),

– ಹೀಗೆ ಶ್ರೀ ಮಠದ ಪರಂಪರೆ ಬೆಳೆದು ಬಂದಿದೆ. ವೀರಶೈವ ಧರ್ಮ ಬೆಳವಣಿಗೆಗೆ ಸಹಕಾರ ಸಲ್ಲಿಸಿದ್ದಾರೆ. ಶರಣರ ತತ್ವ ನಡೆ – ನುಡಿಗಳನ್ನು ತಪ್ಪದೆ ನಡೆದುಕೊಂಡು ಬಂದು ವೀರಶೈವ ಧರ್ಮವನ್ನು ಉದ್ದರಿಸಿದ್ದಾರೆ. ಶ್ರೀ ಮಠದಲ್ಲಿ ಪಾಠ ಪ್ರವಚನ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಹೆಸರಾಂತ ವಿದ್ವಾಂಸರನ್ನು ಕರೆಯಿಸಿ ಅವರ ಮುಖಾಂತರ ಉಪನ್ಯಾಸ ಉಪದೇಶ ತತ್ವಗಳನ್ನು ಸಾರುತಿದ್ದಾರೆ. ಈ ಭಾಗದ ಧಾರ್ಮಿಕ ಕೇಂದ್ರ ಸ್ಥಳವಾಗಿ ಕಂಗೊಳಿಸುತ್ತಿದೆ. ಶ್ರೀ ಮಠದಲ್ಲಿ ಪ್ರತಿ ನಿತ್ಯಬಂದ ಭಕ್ತರಿಗೆ ಅನ್ನದಾಸೋಹ ವ್ಯವಸ್ಥೆಯನ್ನು ಮಾಡಲಾಗಿದೆ. ಮೇಲು ಕೀಳೆಂಬ ಭಾವನೆಯನ್ನು ಆಚೆ ಸರಿಸಿ ಎಲ್ಲರಿಗೂ ಸಮಾನ ದೃಷ್ಟಿಯಿಂದ ನೋಡುತ್ತಿದ್ದಾರೆ. ೧೯೬೫ ರಲ್ಲಿ "ಕೊಟ್ಟುರೇಶ್ವರ ವಿದ್ಯಾವರ್ಧಕ ಸಂಘ" ವನ್ನು ಪ್ರಾರಂಭಿಸಿ ಈ ಭಾಗದ ಜನರಿಗೆ ಶೈಕ್ಷಣಿಕ ಸೇವೆಗೆ ಕಂಕಣಬದ್ದರಾಗಿದ್ದಾರೆ. ಶ್ರೀ ಚನ್ನವಸವ ಸ್ವಾಮಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆ, ಹಾಗೂ ಪ್ರೌಢ ಶಾಲೆ, ಕಲ್ಮಠ ಶ್ರೀ ಚನ್ನವಸವ ಸ್ವಾಮಿ ಕಲಾ ಮತ್ತು ವಾಣಿಜ್ಯ ಮಹಿಳಾ ಮಹಾವಿದ್ಯಾಲಯ, ಜಿ.ಎಚ್.ಎಸ್ ವಾಣಿಜ್ಯ ಮಹಾವಿದ್ಯಾಲಯ, ಎಚ್.ಆರ್ ಸರೋಜಮ್ಮಾ ಸ್ಮಾರಕ ಬಾಲಕಿಯರ ಪದವಿ ಪೂರ್ವ ಮಹಾವಿದ್ಯಾಲಯ, ಹೀಗೆ ಮುಂತಾದ ಶಾಲಾ ಕಾಲೇಜುಗಳನ್ನು ಪ್ರಾರಂಭಿಸಿದ್ದಾರೆ. ಅಲ್ಲದೆ ಉಚಿತ ಪ್ರಸಾದ ನಿಲಯವನ್ನು ಪ್ರಾರಂಭಿಸಿ ಬಡ ಜನರಿಗೆ ಅನೂಕೂಲಕರವಾಗಿದೆ.

೪. ೧೫. ಕನಕಗಿರಿ ವಿರಕ್ತ ಮಠ

ಗಂಗಾವತಿ ತಾಲೂಕಿನಲ್ಲಿ ಬರುವ ಕನಕಗಿರಿ ಗ್ರಾಮದ ವಿರಕ್ತ ಸಂಪ್ರದಾಯದ ಮಠವಿದೆ. ಈ ಮಠಕ್ಕೆ "ರುದ್ರಸ್ವಾಮಿ ಮಠ" ವೆಂದು ಜನ ಕರೆಯುವ ವಾಡಿಕೆ ಇದೆ. ಏಕೆಂದರೆ ಶ್ರೀ ರುದ್ರಸ್ವಾಮಿಗಳು

ಲೋಕಕಲ್ಯಾಣಕ್ಕಾಗಿ, ಜನ ಕಲ್ಯಾಣಕ್ಕಾಗಿ ದೇಶ ಸಂಚಾರ ಕೈಗೊಂಡು, ಈ ಗ್ರಾಮದಲ್ಲಿ ನೆಲೆಸಿ ಮಠವನ್ನು ಸ್ಥಾಪಿಸಿದರಿಂದ ಈ ಮಠಕ್ಕೆ ಶ್ರೀ ರುದ್ರಸ್ವಾಮಿ ಮಠವೆಂದು ಕರೆಯುತ್ತಾರೆ. ಅಲ್ಲದೆ ''ಕಲ್ಮಠ'' ಹಾಗೂ ''ಸುವರ್ಣಗಿರಿ'' ಸಂಸ್ಥಾನ ಮಠವೆಂದು ಸಹ ಕರೆಯುವ ವಾಡಿಕೆ ಇದೆ. ಈ ಮಠಕ್ಕೆ ಹೈದ್ರಾಬಾದ ನಿಜಾಮನ ಕಾಲದಲ್ಲಿ ಭೂಮಿಯನ್ನು ಉಂಬಳಿಯಾಗಿ ದೊರೆತ್ತಿದುದ್ದು ಕಂಡು ಬಂದಿದೆ. ಶ್ರೀ ಮಠದಲ್ಲಿ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮುಗಳು ಜರುಗುತ್ತವೆ. ಪ್ರತಿ ಹುಣ್ಣಿಮೆ ಹಾಗೂ ಅಮವಾಸೆಯೆಂದು ಪಾಠ ಪ್ರವಚನ ಕಾರ್ಯಚಟುವಟಿಕೆಗಳನ್ನು ನಡೆಸುತ್ತಾರೆ. ವೀರಶೈವ ಧರ್ಮದ ತತ್ವ ಪರಿಪಾಲಿಸಿಕೊಂಡು ಬರುತ್ತಾರೆ. ಜನರಿಗೆ ಭೋದಿಸುತ್ತಾರೆ. ಮಠದ ಪರಂಪರೆಯಲ್ಲಿ ಸುಮಾರು ಸ್ವಾಮಿಗಳು ಅಧಿಕಾರ ಸ್ವೀಕರಿಸಿದ್ದಾರೆ. ಅದರೆ ಅವರೆಲ್ಲರ ಹೆಸರುಗಳನ್ನು ಲಭ್ಯವಾಗಿಲ್ಲ. ನಮಗೆ ದೊರೆತ ಆಧಾರದಂತೆ ಕೇವಲ ನಾಲ್ಕು ಜನ ಸ್ವಾಮಿಗಳು ಅಧಿಕಾರವನ್ನು ವಹಿಸಿದ್ದಾರೆ. ೧) ಶ್ರೀ ಮ. ನಿ. ಪ್ರ. ರುದ್ರ ಸ್ವಾಮಿಗಳು ಮಠದ ಮೂಲ ಸಂಸ್ಥಾಪಕರು. ೨) ಶ್ರೀ ಮ. ನಿ. ಪ್ರ. ಎರಡನೆಯ ರುದ್ರಸ್ವಾಮಿಗಳು. ೩) ಶ್ರೀ ಮ. ನಿ. ಪ್ರ. ಚನ್ನಮಲ್ಲಿಸ್ವಾಮಿಗಳು ೪) ಶ್ರೀ ಮ. ನಿ. ಪ್ರ. ಮೂರನೆಯ ರುದ್ರಸ್ವಾಮಿಗಳು. ನೂತನ ಪೀಠಾಧಿಪತಿಗಳು.

ಹೀಗೆ ಶ್ರೀ ಮಠದ ಪರಂಪರೆ ಬೆಳೆದು ಬಂದಿದೆ. ಇದೇ ಗ್ರಾಮದಲ್ಲಿ ಮತ್ತೊಂದು ಹಿರೇಮಠ ದೊರೆಯುತ್ತದೆ. ಅದರೆ ಅಲ್ಲಿ ಯಾರು ಮಠಾಧೀಶರಿಲ್ಲ ಈ ಮಠವು ಮನೆಯಾಗಿ ಪರಿವರ್ತನೆಗೊಂಡಿದೆ. ಶ್ರೀ ಮಠದಲ್ಲಿ ಎರಡು ಗದ್ದುಗೆಗಳು ಮಾತ್ರ ಕಂಡು ಬಂದೆವೆ.

### ೪. ೧೬. ಹೆಬ್ಬಾಳ ಹಿರೇಮಠ

ಗಂಗಾವತಿ ತಾಲೂಕಿನಲ್ಲಿ ಹೆಬ್ಬಾಳ ಗ್ರಾಮದ ಹೃದಯ ಭಾಗದಲ್ಲಿ ದೊರೆಯುವ ಹಿರೇಮಠವು ಶ್ರೀ ರಂಭಾಪುರಿ ಪೀಠದ ಶಾಖಾಮಠವಾಗಿ ಸ್ಥಾಪನೆಯಾಗಿದೆ. ಈ ಮಠಕ್ಕೆ ಶ್ರೀ ಬೋಳೊಡಿ ಬಸವೇಶ್ವರ ಸಂಸ್ಥಾನ ಮಠವೆಂದು ಕರೆಯುತ್ತಾರೆ. ಈ ಮಠವು ವೀರಶೈವ ಧರ್ಮದ ಬೆನ್ನೆಲುಬಾಗಿ ಹುಟ್ಟಿಕೊಂಡಿದೆ. ವೀರಶೈವ ತತ್ವ ನಡೆ – ನುಡಿಗಳಿಗೆ ಅನ್ವಯಿಸಿಕೊಂಡು ಬರುವ ಸಂಪ್ರದಾಯದ ಮಠವಾಗಿದೆ.

### ಮಠದ ವಂಶಾವಳಿ

ಶ್ರೀ ಮಠಕ್ಕೆ ಇಲ್ಲಿಯವರೆಗೆ ಎಂಟು ಸ್ವಾಮಿಗಳು ಅಧಿಕಾರವನ್ನು ವಹಿಸಿದ್ದಾರೆ.

೧) ಶ್ರೀ ಷ. ಬ್ರ. ಚೋಳೊಡಿ ಬಸವೇಶ್ವರ ಶಿವಾಚಾರ್ಯ ಸ್ವಾಮಿಗಳು ಮಠದ ಮೂಲ ಗುರುಗಳು ೨) ಶ್ರೀ ಷ. ಬ್ರ. ಬಸವರಾರ್ಯ ಶಿವಾಚಾರ್ಯ ಸ್ವಾಮಿಗಳು. ೩) ಶ್ರೀ ಷ. ಬ್ರ. ಎರಡನೆಯ ಸಣ್ಣ ಬಸವರಾರ್ಯ ಶಿವಾಚಾರ್ಯ ಸ್ವಾಮಿಗು ೪) ಶ್ರೀ ಷ. ಬ್ರ. ಸಿದ್ದೇಶ್ವರ ಶಿವಾಚಾರ್ಯ ಸ್ವಾಮಿಗಳು. ೫) ಶ್ರೀ ಷ. ಬ್ರ. ಶಾಂತವೀರ ಶಿವಾಚಾರ್ಯ ಸ್ವಾಮಿಗಳು. ೬) ಶ್ರೀ ಷ. ಬ್ರ. ಮರಿಶಾಂತವೀರ ಶಿವಾಚಾರ್ಯ ಸ್ವಾಮಿಗಳು. ೭) ಶ್ರೀ ಷ. ಬ್ರ. ನಾಗಭೂಷಣ ಬಸವೇಶ್ವರ ಶಿವಾಚಾರ್ಯ ಸ್ವಾಮಿಗಳು. ೮) ಶ್ರೀ ಷ. ಬ್ರ. ಮರಿ ನಾಗಭೂಷಣ ಶಿವಾಚಾರ್ಯ ಸ್ವಾಮಿಗಳು ನೂತನ ಪೀಠಾಧಿಪತಿಗಳು.

ಹೀಗೆ ಶ್ರೀಮಠದ ವಂಶಾವಳಿ ಬೆಳೆದು ಬಂದಿದೆ. ನಾಲ್ಕನೆಯ ಪೀಠಾಧಿಪತಿಯಾದ ಶ್ರೀ ಷ. ಬ್ರ. ಸಿದ್ದೇಶ್ವರ ಶಿವಾಚಾರ್ಯ ಸ್ವಾಮಿಗಳು ತಪೋನಿಷ್ಠರು, ಸಿದ್ಧಿಪುರುಷರು, ಪವಾಡ ಪುರುಷರೆಂದೇ ಖ್ಯಾತಿ ಪಡೆದಿದ್ದರು. ಇವರ ನೇತೃತ್ವದಲ್ಲಿ ಶ್ರೀ ಮಠದ ಕೀರ್ತಿ ನಾಡಿನಲ್ಲೆ ತುಂಬೆಲ್ಲ ಪಸರಿಸಿತ್ತು. ಇಂದು ಮಠ ಉನ್ನತ ರೀತಿಯಲ್ಲಿ ಅಭಿವೃದ್ಧಿಗೊಂಡು ಬೆಳೆಯತೊಡಗಿದೆ.

## ೪. ೧೭. ಬೂದಗುಂಪಾ ವಿರಕ್ತ ಮಠ

ಗಂಗಾವತಿ ತಾಲೂಕಿನ ಬೂದುಗುಂಪಾ ಗ್ರಾಮದ ವಿರಕ್ತಮಠವು ಧಾರ್ಮಿಕ ತತ್ವಗಳ ಪ್ರಚಾರದಲ್ಲಿ ತೊಡಗಿದೆ. ಗ್ರಾಮದ ಹೊರವಲಯದಲ್ಲಿ ಶ್ರೀ ವಿರಕ್ತ ಮಠವು ದೊರೆಯುತ್ತದೆ. ಇದು ಬಳ್ಳಾರಿಯ ಕೊಟ್ಟೂರ ಸ್ವಾಮಿ ಮಠದ ಶಾಖಾ ಮಠವಾಗಿ ಬೆಳೆದು ಬಂದಿದೆ.

### ಪರಂಪರೆ

ಶ್ರೀ ಮಠಕ್ಕೆ ಐದು ಸ್ವಾಮಿಗಳು ಅಧಿಕಾರವನ್ನು ವಹಿಸಿ ಸೇವೆಯನ್ನು ಸಲ್ಲಿಸಿದ್ದಾರೆ. ೧) ಶ್ರೀ ಮ.ನಿ.ಪ್ರ. ಚನ್ನಬಸವ ಸ್ವಾಮಿಗಳು, ಲೋಕ ಕಲ್ಯಾಣಕ್ಕೆಂದು ಸಂಚಾರ ಕೈಗೊಂಡಾಗ ಈ ಗ್ರಾಮದಲ್ಲಿ ಬಂದು ಮಠವನ್ನು ಸ್ಥಾಪಿಸಿದರು. ೨) ಶ್ರೀ ಮ. ನಿ. ಪ್ರ. ಬಸವಲಿಂಗ ಸ್ವಾಮಿಗಳು ಇವರು ಶ್ರೀ ಮಠವನ್ನು ಸರ್ವತೋಮುಖ ಅಭಿವೃದ್ಧಿಗೆ ಕಾರಣರಾದರು. ಸತತ ಕಾಯಕಯೋಗಿಗಳಾಗಿ ದುಡಿದರು. ಬಸವಾನುತತ್ವದಂತೆ ನಡೆದುಕೊಂಡು ಸಮಾಜದಲ್ಲಿ ಒಳ್ಳೆಯ ಕೀರ್ತಿ ಪಡೆದರು. ೩) ಶ್ರೀ ಮ. ನಿ. ಪ್ರ. ಹುಚ್ಚಪ್ಪಾ ಸ್ವಾಮಿಗಳು ಅಧಿಕಾರವನ್ನು ವಹಿಸಿಕೊಂಡು ಧಾರ್ಮಿಕ ಪ್ರಚಾರಕ್ಕೆ ಹೆಚ್ಚು ಒತ್ತು ಕೊಟ್ಟರು.

೪) ಶ್ರೀ ಮ. ನಿ. ಪ್ರ. ಎರಡನೆಯ ಬಸವಲಿಂಗ ಸ್ವಾಮಿಗಳು ಇವರು ಪವಾಡ ಪುರುಷ ಸಿದ್ಧಿಪುರುಷರೆಂದು ಖ್ಯಾತಿ ಪಡೆದವರಾಗಿದ್ದರು. ನೂತನವಾಗಿ ಶ್ರೀ ಮ.ನಿ. ಪ್ರ. ಸಂಗನಬಸವ ಸ್ವಾಮಿಗಳು, ಇವರು ಮಠದ ಅಧಿಕಾರವನ್ನು ವಹಿಸಿಕೊಂಡು ಮಠ ಅಭಿವೃದ್ಧಿ ಪಡಿಸುತ್ತಿದ್ದಾರೆ.

ಹೀಗೆ ಮಠದ ಪರಂಪರೆ ಬೆಳೆದು ಬಂದಿದೆ. ಮಠವನ್ನು ಉನ್ನತ ರೀತಿಯಲ್ಲಿ ಕಾಪಾಡಿಕೊಂಡು ಬರುವ ಸಂಪ್ರದಾಯವಿದೆ. ವೀರಶೈವ ಧರ್ಮದ ತತ್ವಾನುಚರಣೆಗಳಿಗೆ ತಪ್ಪದೆ ನಡೆದುಕೊಂಡು ಬಂದಿದೆ. ಶ್ರೀ ಮಠದಲ್ಲಿ ಪ್ರತಿ ಅಮವಾಸೆಯೆಂದು ವಿಶೇಷ ಪೂಜೆ ಜರಗುತ್ತದೆ. ಅನೇಕ ಧಾರ್ಮಿಕ ಗೋಷ್ಠಿಗಳನ್ನು ಏರ್ಪಡಿಸುತ್ತಾರೆ. ಶ್ರೀ ಮಠದ ವತಿಯಿಂದ ಶ್ರೀ ಹುಚ್ಚೇಶ್ವರ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಿ ಶೈಕ್ಷಣಿಕ ಕ್ಷೇತ್ರದಲ್ಲಿ ಸೇವೆಯನ್ನು ಸಲ್ಲಿಸಿದ್ದಾರೆ.

ಅರಳಹಳ್ಳಿ ಹಿರೇಮಠ, ಆರಾಳು ಗ್ರಾಮದ ದಾಸೋಹ (ಹಿರೇಮಠ) ಸೂಳೆಕಲ್ಲು ಗ್ರಾಮದ ಹಿರೇಮಠ, ......... ಹೀಗೆ ಮುಂತಾದ ವೀರಶೈವ ಮಠಗಳು ಗಂಗಾವತಿ ತಾಲೂಕಿನಲ್ಲಿ ದೊರೆಯುತ್ತವೆ. ತಮ್ಮದೆ ಮಿತಿಯಲ್ಲಿ ಧಾರ್ಮಿಕ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಗಣನೀಯವಾದ ಸೇವೆಯನ್ನು ಸಲ್ಲಿಸುತ್ತಿದೆ.

✡✡

# ಅಡಿ ಟಿಪ್ಪಣಿ

೧. ಡಾಃ ಸಂಗಮೇಶ ಸೌದತ್ತಿಮಠ (ಸಂ); ಕಾಶಿನಾ ರೆಡ್ಡಿ ಎಚ್(ಲೆ); ಚನ್ನವೀರ, ಪುಟ ೪೬, ೧೯೯೬.

೨. ಡಾಃ ಬಸವರಾಜ ಸಬರದ; ಹೈದ್ರಾಬಾದ ಕರ್ನಾಟಕ ತತ್ವಪದಗಳು; ಪುಟ ೧೯೧, ೨೦೦೦.

೩. ಡಾಃ ಬಸವರಾಜ ಸಬರದ; ಹೈದ್ರಾಬಾದ ಕರ್ನಾಟಕ ತತ್ವಪದಗಳು, ಪುಟ ೧೨೦, ೨೦೦೦.

೪. ಸ.ಸ. ಮಾಳವಾಡ (ಸಂ); ಶ್ರೀ ಬಸವಣ್ಣನವರ ವಚನ ಸಂಗ್ರಹ, ವಚನ ೨೪೮, ಪುಟ ೯೬, ೧೯೮೯.

೫. ಸ.ಸ. ಮಾಳವಾಡ (ಸಂ); ಶ್ರೀ ಬಸವಣ್ಣನವರ ವಚನ ಸಂಗ್ರಹ, ವಚನ ೨೪೬, ಪುಟ ೮೮, ೧೯೮೯.

೬. ಡಾಃ ಎಲ್.ಬಸವರಾಜು; ಅಲ್ಲಮನ ವಚನಗಳು, ವಚನ ೩೯, ಪುಟ ೭೭, ೧೯೯೫.

೭. ಡಾಃ ಎಲ್.ಬಸವರಾಜು; ಚನ್ನಬಸವಣ್ಣನವರ ವಚನಗಳು , ವಚನ ೪೯, ೧೯೯೫.

೮. ಡಾಃ ಎಂ.ಎಂ.ಕಲಬುರ್ಗಿ (ಸಂ); ಸಕಲಪುರಾತನರ ವಚನಗಳು, ಪುಟ ೧೩೮, ೧೯೯೬

೯. ಡಾ. ವ್ಹಿ.ಜಿ.ಪೂಜಾರ; ಕಲಬುಗಿತ ಜಿಲ್ಲೆಯ ತತ್ವಪದಕಾರರು, ಪುಟ ೩೨ ಮತ್ತು ೩೫, ೧೯೯೯.

೧೦. ಡಾ. ಸ.ಸ. ಮಾಳವಾಡ (ಸಂ); ಶ್ರೀ ಬಸವಣ್ಣನವರ ವಚನ ಸಂಗ್ರಹ, ವಚನ ೪೫೨, ಪುಟ ೧೬೬, ೧೯೮೯.

೧೧. ಡಾ. ಸ.ಸ. ಮಾಳವಾಡ (ಸಂ); ಶ್ರೀ ಬಸವಣ್ಣನವರ ವಚನ ಸಂಗ್ರಹ, ವಚನ ೫, ಪುಟ ೬, ೧೯೮೯.

೧೨. ಡಾಃ ಎಲ್.ಬಸವರಾಜು (ಸಂ); ಅಲ್ಲಮ ವಚನಗಳು , ವಚನ ೨೪೦, ಪುಟ ೧೩೨, ೧೯೯೫

೧೩. ಕೆ.ಬಿ.ಬ್ಯಾಳಿ ಮತ್ತು ಎಚ್.ಎಸ್.ಪಾಟೀಲ (ಸಂ); ಶಂಕ್ರೆಪ್ಪಾ ಬಂಗಾರಶೆಟ್ರ (ಲೆ), ಶಾಂತಾಪ್ರಭೆ, ಪು ೬೭, ೧೯೯೩.

೧೪. ಡಾಃ ಎಲ್.ಬಸವರಾಜು (ಸಂ); ಅಲ್ಲಮ ವಚನಗಳು , ವಚನ ೩೯, ಪುಟ ೭೭, ೧೯೯೫.

# ಅಧ್ಯಾಯ : ಐದು

## ಹೈದ್ರಾಬಾದ - ಕರ್ನಾಟಕ ವೀರಶೈವ ಮಠಗಳ ಕೊಡುಗೆ

೧. ಧಾರ್ಮಿಕ ಕೊಡುಗೆ

೨. ಸಾಮಾಜಿಕ ಕೊಡುಗೆ

೩. ಶೈಕ್ಷಣಿಕ ಕೊಡುಗೆ

೪. ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕೊಡುಗೆ

ವೀರಶೈವ ಮಠಗಳು ಆರೋಗ್ಯ ಪೂರ್ಣ ವಾತಾವರಣ ನಿರ್ಮಾಣ ವಾಗುವಂತೆ ಸಮಾಜದ ಜನರಿಗೆ ಮಾರ್ಗದರ್ಶನ ತೋರುತ್ತ ಬಂದಿವೆ. ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ತನ್ನದೆಯಾದ ಕೊಡುಗೆಗಳನ್ನು ಸಲ್ಲಿಸುತ್ತಿವೆ. ಇತ್ತೀಚಿನ ದಿನಗಳಲ್ಲಿ ಕೆಲವೊಂದು ವೀರಶೈವ ಮಠಗಳು ರಾಜಕೀಯದಲ್ಲಿ ಮುಳುಗಿರುವುದು ಎದ್ದು ಕಾಣುತ್ತದೆ. ಹೈದ್ರಾಬಾದ – ಕರ್ನಾಟಕ ವೀರಶೈವ ಮಠಗಳ ಕೊಡುಗೆ ಇಲ್ಲಿ ಅಪಾರವಾಗಿದೆ. ಅವುಗಳು ಒಂದೊಂದಾಗಿ ಕೆಳಗಿನಂತೆ ಪ್ರಸ್ತಾಪಿಸಲಾಗಿದೆ.

೧. ಧಾರ್ಮಿಕ ಕೊಡುಗೆ

ಪ್ರಾಚೀನ ಕಾಲದಲ್ಲಿ ಯಾವುದೇ ವರ್ಗದ ವೀರಶೈವ ಮಠಗಳಿದ್ದರೂ, ಅವು ಧಾರ್ಮಿಕ ಸಂಸ್ಥೆಗಳೆಂದೆ ಪ್ರಖ್ಯಾತಿ ಪಡೆಯುತ್ತಿದ್ದವು. ಧಾರ್ಮಿಕ ಕಾರ್ಯಚಟುವಟಿಕೆಗಳು ಸದಾ ಅಲ್ಲಿ ಒಂದಿಲ್ಲೊಂದು ರೀತಿಯಲ್ಲಿ ನಡೆಯುತ್ತಿದ್ದವು. ಕನ್ನಡದಲ್ಲಿ ಶಿವಶರಣರು ಬರೆದ ವಚನಗಳು ಸಾಂಸ್ಕೃತದ ಉಪನಿಷತ್ತುಗಳಿದ್ದಂತೆ ಧಾರ್ಮಿಕ ಗೀತೆಗಳು ಆಗಿದ್ದವು. ''ವೀರಶೈವ ಸಿದ್ಧಾಂತ ಶಿಖಾಮಣಿ ಯ ಮೂಲ ಗ್ರಂಥದಲ್ಲಿ ''ಧರ್ಮದೆವೆ ಸಮಸ್ತಾನಾಂ ದುಃಖವಾಃ ಶಮ ಸಾದಮ ನಿತ್ಯಂ ಧರ್ಮಮೃತು ಪತ್ಯ ಸುಖಿನೋ ಸಂತು ಮಾನವಾ'' ಎಂಬ

ಧರ್ಮದ ವಾಣಿಯನ್ನು ಸಮಸ್ತ ಮಾನವರಿಗೆ ದುಃಖವನ್ನು ದೂರಮಾಡಿ ಸುಖವನುಂಟು ಮಾಡುತ್ತದೆ. ನಿತ್ಯ ಧರ್ಮ ಪಾಲನೆಯೂ ಅಮೃತ ಕುಡಿಯನ್ನು ಪಡೆದುಕೊಂಡು ಸೇವಿಸಿದಂತೆ ಪರಮ ಸುಖವನ್ನು ಪಡೆಯುತ್ತಾನೆ''.[೧] ಎಂದು ವೀರಶೈವ ಸಂಸ್ಕೃತಿಯ ಧರ್ಮದ ಅಧ್ಯಾತ್ಮಿಕ ತತ್ವದ ಮಹತ್ವವನ್ನು ತಿಳಿಸಿಕೊಡುತ್ತದೆ. ''ಧರ್ಮದ ಉಪಕರಣವಾದ ಮಠಗಳು ಹೊಸ ಪರಿಸ್ಥಿತಿಗೆ ಅನುಗುಣವಾಗಿ, ನವೀನ ಹಕ್ಕು – ಹೊಣೆಗಳನ್ನು ಪಡೆದವು. ವೈರುಧ್ಯವೆಂಬತೆ ಅತ್ಯಂತ ಸೋಜಿಗವೆಂಬಂತೆ ಲೌಕಿಕ ಮತ್ತು ವೈಜ್ಞಾನಿಕ ಶಕ್ತ್ಯಾಂಶಗಳ ಪ್ರಭಾವದ ಹೆಚ್ಚಳವನ್ನು ಕಂಡುಂಡ ಆಧುನಿಕ ವಾತಾವರಣದಲ್ಲಿ ಮಠಗಳ ಮತ್ತು ಮಠಾಧೀಶರ, ದೇವಸ್ಥಾನಗಳ ಮತ್ತು ಪೂಜಾರಿಗಳ, ಧಾರ್ಮಿಕ ಕ್ರಿಯಾ ವಿಧಿಗಳ ಆಚರಣೆ ಮತ್ತು ಭಕ್ತಿ ವೃಂದಗಳ ಸಂಖ್ಯೆಯೂ ಏರುತ್ತಾ ನಡೆಯುತ್ತಿದೆ. ಅದು ಅಧಾರ್ಮಿಕ ವೆಂದು ಹೇಳುವುದು, ಕಠಿಣವಾದರೂ, ಧಾರ್ಮಿಕ ಚಿಂತನಾಚರಣೆಗಳಿಗೆ, ಸಾಪೇಕ್ಷವಾಗಿದ್ದರೂ, ಅತಿವವಾದ ಚಟುವಟಿಕೆಗಳನ್ನು ಮಠಗಳು ಕೈಗೊಳ್ಳುತ್ತಿರುವುದು ನಾವು ಕಾಣುತ್ತೇವೆ.[೨] ಧಾರ್ಮಿಕ ಕ್ಷೇತ್ರಗಳಲ್ಲಿ ಕಾರ್ಯವೈಖರಿಯನ್ನು ಬೆಳೆಸಲು ಮಠಗಳು ಪೂರ್ವದಿಂದಲೇ ಜನ್ಮತಾಳಿ ಬಂದವುಗಳಾಗಿವೆ. ಅವು ಧಾರ್ಮಿಕತೆಯೊಂದಿಗೆ ಬೆರೆತುಕೊಂಡಿರುವುದು ನಾವು ಕಾಣಬೇಕಾಗುತ್ತದೆ.

ಧಾರ್ಮಿಕ ಭಾವನೆ ಹಾಗೂ ಶರಣರ ತತ್ವಗಳನ್ನು ಪರಿಪಾಲಿಸಿಕೊಂಡು, ಸಂರಕ್ಷಿಸಿಕೊಂಡು ಬರುವುದು ವೀರಶೈವ ಮಠಗಳ ಹೊಣೆಯಾಗಿದೆ. ಧಾರ್ಮಿಕ ಸಂಸ್ಥೆಗಳಾಗಿ ವೀರಶೈವ ಮಠಗಳು ಭಾರತೀಯ ನಾಗರಿಕತೆಯ ಆರಂಭದಿಂದಲೂ ಅಸ್ತಿತ್ವದಲ್ಲಿವೆ. ''ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ'' ಎನ್ನುವ ಸಂಸ್ಕೃತ ಶ್ಲೋಕದ ತಾತ್ಪರ್ಯವು ಯಾವ ಕಾಲದಲ್ಲಿ ಧರ್ಮ ನಶಿಸಿ ಅನ್ಯಾಯ ಅಧರ್ಮ ಅತ್ಯಾಚಾರಗಳು ತಾಂಡವಾಡುತ್ತವೆಯೋ ಆ ಸಂಧರ್ಬದಲ್ಲಿ ಧರ್ಮವನ್ನು ಸ್ಥಾಪಿಸಲು ಶಿಷ್ಟ ಸಾಧು ಸಜ್ಜನರನ್ನು ರಕ್ಷಿಸಲು ದುರ್ಜನರನ್ನು ಸಂಹರಿಸಲು ಅವತಾರ ತೆಗೆದುಕೊಳ್ಳುತ್ತಾನೆ, ಎಂಬುದಾಗಿ ಕೃಷ್ಣ ಪರಮಾತ್ಮ ಹೇಳಿದ್ದು ನಿಜವಿರುತ್ತದೆ. ಆಗಾಗ ಇಂತಹ ಮಹಾಪುರುಷರ ಜನನ ವಾಗುತ್ತಿರುವುದರಿಂದ ಸಮಾಜ ಸೇವೆ ಗೈಯುತ್ತಿರುವುದರಿಂದ ಇನ್ನೂ ಆರೋಗ್ಯಕರವಾದ ಸಮಾಜ ಉಳಿದಿದೆ''.[೩] ವೀರಶೈವ ಧರ್ಮ ಸಂಸ್ಕೃತಿಯನ್ನು ಉಳಿಸಿ ಬೆಳೆಸಿದ ಕೀರ್ತಿ ಮಠಗಳದ್ದಾಗಿದೆ. ಸಮಾಜದಲ್ಲಿ ಜನ ಜೀವನದ ಮೌಲ್ಯಾಧಾರಿತ ತತ್ವಗಳನ್ನು ಕಾಪಾಡಿಕೊಂಡು ಬರುವಲ್ಲಿ ಮಹತ್ವಪೂರ್ಣ ಪಾತ್ರ ವಹಿಸಿವೆ.

"ಸಮಾಜದ ಸರ್ವತೋಮುಖ ಬೆಳವಣಿಗೆಗೆ ಶಿಕ್ಷಣ ಮತ್ತು ಧರ್ಮ ಎಂಬ ಎರಡು ಕಣ್ಣು ನೀಡಿ ಬೆಳೆಸಿದವರು ವೀರಶೈವ ಮಠಾಧೀಶರು-ಅಜ್ಞಾನದ ಮೂಢ ನಂಬಿಕೆಯನ್ನು ಕಳೆದು ಧರ್ಮ ತತ್ವಾಚಾರಣೆಯ ಮೂಲಕ ಮಾನಸಿಕ ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡಿಕೊಂಡು ಬರುವಲ್ಲಿ ವೀರಶೈವ ಮಠಗಳು ಇಂದಿಗೂ ತಮ್ಮ ವಿಶಿಷ್ಟ ಪಾತ್ರವನ್ನು ಮುಂದುವರೆಸಿಕೊಂಡಿವೆ".[೪] ವೀರಶೈವ ಮಠಗಳಲ್ಲಿ ನಾವು ಶರಣ ತತ್ವ ಸಂಪ್ರದಾಯಗಳನ್ನು ಕಾಣುತ್ತೇವೆ. ಭಕ್ತರ ಲೌಕಿಕ ಜೀವನದ ಮೇಲೆ ಒಂದು ರೀತಿಯ ಸಾಮಾಜಿಕ ನಿಯಂತ್ರಣವನ್ನು ಇಟ್ಟುಕೊಂಡಿವೆ. ಸಮಸ್ತ ಜನಜೀವನದ ಮೇಲೆ ಮಠಗಳ ಪ್ರಭಾವ ಒಂದಿಲ್ಲೊಂದು ರೀತಿಯಲ್ಲಿ ಇದ್ದೆ ಇರುತ್ತದೆ. ವೀರಶೈವ ಧರ್ವ ಗ್ರಂಥಗಳನ್ನು ಪ್ರಕಟಿಸುವುದಲ್ಲದೆ, ಅವುಗಳನ್ನು ಸುರಕ್ಷಿತವಾಗಿ ಇರಿಸುತ್ತಿದ್ದರು. ಮತ್ತು ಚಲಿಸುತ್ತಿದ್ದ ಸಂಗತಿಗಳು ಹೇರಳವಾಗಿ ಸಿಗುತ್ತವೆ.

ವೀರಶೈವ ಧರ್ಮವ ಪ್ರಗತಿಗೆ ಮಠಗಳು ಮಹತ್ವದ ಪಾತ್ರವಹಿಸಿವೆ. ಲಿಂಗಚಾರ ,ಸದಾಚಾರ , ಶಿವಾಚಾರ, ಗಣಚಾರ, ಬೃತ್ಯಾಚಾರ – ಇವು ಪಂಚಚಾರ್ಯಗಳ ಜತೆಗೆ ಗುರು ಲಿಂಗ ಜಂಗಮ – ವಿಭೂತಿ ರುದ್ರಾಕ್ಷಿ – ಮಂತ್ರ – ಪಾದೋದಕ – ಪ್ರಸಾದ – ಗಳೆಂಬ ಅಷ್ಟಾವರಣಗಳೇ, ಷಟಸ್ಥಳಗಳೇ, ವೀರಶೈವ ಧರ್ಮದ ತಳಪಾಯಗಳಾಗಿವೆ. ಧರ್ಮದ ಸಾಂಸ್ಕೃತಿಯ ನೆಲೆಯನ್ನು ಬಿಂಬಿಸುತ್ತವೆ. ಮಾರ್ಗದರ್ಶನವನ್ನು ಸೂಚಿಸುತ್ತವೆ.

"ವಿರಕ್ತ ಜಂಗಮ ಮಠಗಳಿಗೆಲ್ಲ ಬಸವಣ್ಣನೇ ಧರ್ಮಗುರು , ಆತನೆ ಧರ್ಮದ ಅಗ್ರಪಿತ ಅವರ ಹೇಳಿದ ವಚನಗಳೇ ಧರ್ಮಶಾಸ್ತ್ರ".[೫] ವೀರಶೈವ ಧರ್ಮದ ಕುರುಗಳಾಗಿವೆಯೆಂಬುದು ಯಾರು ಅಲ್ಲಗಳೆಯುವಂತಿಲ್ಲ. ಹನ್ನೆರಡನೆ ಶತಮಾನದ ಶರಣ – ಶರಣೆಯರಿಂದ ವೀರಶೈವ ಧರ್ಮಕ್ಕೆ ಹೆಚ್ಚಿನ ಶಕ್ತಿ ಬಂದಿದೆ. ಹುಲುಸಾಗಿ ಬೆಳೆಯಲು ಕಾರಣವಾದ ಸಂಗತಿಗಳು ಹೆಚ್ಚು.

ಹೈದ್ರಾಬಾದ – ಕರ್ನಾಟಕ ಭಾಗದ ವೀರಶೈವ ಮಠಗಳು ಧಾರ್ಮಿಕ ತತ್ವಾಚರಣೆಯನ್ನು ಪರಿಪಾಲಿಸಿಕೊಂಡು ಬರುತ್ತದೆ. ಜಾತಿ – ಮತ ಕುಲ – ಗೋತ್ರಗಳು ಯಾವುದೇ ರೀತಿಯ ಅಸಮಾನತೆಯ ನೆಲೆಗಳು ಕಾಣುವುದಿಲ್ಲ. ಧರ್ಮೋಪದೇಶವನ್ನು ನೀಡಿ ಸಕಲರಿಗೆ ಲೇಸನ್ನೆ ಬಯಸುತ್ತ ಬಂದಿದೆ. ಧರ್ಮ ಸಂಘಟನೆ ಹಾಗೂ ರಕ್ಷಣೆಯಲ್ಲಿ ತೊಡಗಿವೆ. ಈ ರೀತಿ ಮಾರ್ಗದರ್ಶನವನ್ನು ನೀಡುವ ಮೂಲಕ ವೀರಶೈವ ಮಠಗಳು ಸಮಾಜದೊಳಗಡೆ ಮಹತ್ವದ ಪಾತ್ರವಹಿಸುತ್ತಿವೆ. ಹಾಗೆ ಧಾರ್ಮಿಕ ಕೊಡುಗೆಗಳನ್ನು ವಿಭಿನ್ನ ರೀತಿಯಲ್ಲಿನೀಡಿರುವುದು ಕೆಳಗಿನಂತೆ ಕಾಣುತ್ತೇವೆ.

೧) ಧರ್ಮ ತತ್ವಗಳ ಪ್ರಚಾರ
೨) ಧರ್ಮ ರಕ್ಷಣೆ
೩) ಲಿಂಗಧಾರಣೆ
೪) ಲಿಂಗದೀಕ್ಷೆ
೫) ಗದ್ದುಗೆ ಪೂಜೆ

೧.೧. ಧರ್ಮ ತತ್ವಗಳ ಪ್ರಚಾರ

''ದಯವಿಲ್ಲದ ಧರ್ಮವಾವುದಯ್ಯಾ
ದಯ ಬೇಕು ಸಕಲ ಪ್ರಾಣಿಗಳಲ್ಲಿ
ದಯವೇ ಧರ್ಮದ ಮೂಲವಯ್ಯಾ''.[೬]

ಭಾರತೀಯ ಸಂಸ್ಕೃತಿಯಲ್ಲಿ ಧರ್ಮಕ್ಕೆ ಮಹತ್ವವಾದ ಸ್ಥಾನವಿದೆ. ಮಾನವ ಸುಸಂಸ್ಕೃತವಾದ ರೀತಿ ನಿಯಮಗಳು ನಿತ್ಯ ಪರಿ ಪಾಲಿಸಿಕೊಂಡು ಬರಬೇಕಾದರೆ ಧರ್ಮ ಅವಶ್ಯಕವಾಗಿರುತ್ತದೆ. ಧರ್ಮವು ದಯಕ್ಕೆ ಅಂಟಿಕೊಂಡಿರುತ್ತದೆ. ದಯವನ್ನು ಆಧರಿಸುವ ಧರ್ಮವನ್ನು ಬೋಧಿಸುವ ಈ ವೇದ ವಾಖ್ಯವಾಗಿದೆ. ಅಂತೆಯೇ ವೀರಶೈವ ಮಠಗಳು ಧರ್ಮ ತತ್ವಗಳ ಪ್ರಚಾರದಲ್ಲಿ ತೊಡಗಿವೆ. ತತ್ವಗಳಿಗೆ ಯಾವುದೇರೀತಿಯ ದಕ್ಕೆ ಬರದಂತೆ ನೋಡಿಕೊಳ್ಳುತ್ತಾರೆ. ವೀರಶೈವ ಧರ್ಮ ಉಳಿಸಿ, ಬೆಳೆಸಿ, ಸಂಘಟಿಸಿದ ಕೀರ್ತಿ ಭಾಲ್ಕಿ ಹಿರೇಮಠಕ್ಕೆ ಸಲ್ಲುತ್ತದೆ. ಹಾನಗಲ ಕುಮಾರ ಸ್ವಾಮಿಗಳು ಸ್ಥಾಪಿಸಿದ ಶಿವಯೋಗ ಮಂದಿರದಲ್ಲಿ ಧಾರ್ಮಿಕ ಅಭ್ಯಾಸ ಮಾಡಿದ ಪೂಜ್ಯ ಗುರುಗಳಾದ ಲಿಂಗೈಕ್ಯ ಶ್ರೀ ಡಾಃ ಚನ್ನಬಸವ ಪಟ್ಟದ್ದೇವರು ಸಲ್ಲಿಸಿರುವ ಧಾರ್ಮಿಕ ಸೇವೆ ಶ್ಲಾಘನೀಯವಾದುದು.

ಭಾಲ್ಕಿ ಶ್ರೀಗಳು ಮಠದ ಜೀರ್ಣೋದ್ಧಾರದ ಜತೆಗೆ ಬಸವ ತತ್ವ ಶರಣರ ತತ್ವ ಪ್ರಚಾರ ಮಾಡಿದರು. ಹಳ್ಳಿ – ಪಟ್ಟಣಗಳಿಗೆ ಪಾದಯಾತ್ರೆ ಮುಖಾಂತರ ಧಾರ್ಮಿಕ ತತ್ವಗಳ ಪ್ರಚಾರ ಕೈಗೊಂಡು ಶ್ರೀ ಬಸವಣ್ಣನವರ ಪ್ರತಿಮೆಯ ಸ್ಥಾಪನೆ ಕಾರ್ಯಮಾಡಿದರು. ''ವಜ್ರ ಮಹೋತ್ಸವದ ಅಂಗವಾಗಿ ಶ್ರೀ ಮಹಾದೇವಪ್ಪಾ ಮೀಸೆ, ಉದಗೀರ, ಬಸವರಾಜ ಸಂಗಮ, ಬಾಬುರಾವ ವಡ್ಡೆ ಕರಕ್ಯಾಳ, ಹಣಮಂತಪ್ಪಾ ಖಡ್ಕೆ'' ..... ಇವರು ದಿನಾಂಕಃ ೫.೬.೧೯೭೨ ರಿಂದ ಸತತ ಏಳು ದಿವಸಗಳವರೆಗೆ ಡೋಣಗಾಪೂರ, ಸಂಗಮ, ಬಳತ, ಹೆಡಗಾಪೂರ, ಔರಾದ, ಬೀದರ, ಚಳಕಾಪೂರ, ಧನ್ನೂರ, ದುಬಲಗುಂಡಿ, ಹುಮನಾಬಾದ, ಹುಣಸ್ಯಾಳ, ಬಸವಕಲ್ಯಾಣ, ಭಾತಂಬ್ರಾ – ಮುಂತಾದ ಗ್ರಾಮಗಳಲ್ಲಿ

ಪಾದಯಾತ್ರೆ ಮಾಡಿ ಧರ್ಮ ಪ್ರಸಾರ ಮಾಡಿದರು''.[೭] ಜಿಲ್ಲೆಯಲ್ಲಿ ಬಸವ ತತ್ವಪ್ರಚಾರಕ್ಕೆ ಪ್ರಪ್ರಥಮವಾಗಿ ನಾಂದಿ ಹಾಡಿದವರೇ ಭಾಲ್ಕಿ ಶ್ರೀಗಳು ಶ್ರೀ ಮಠದಲ್ಲಿ ಧಾರ್ಮಿಕ ಕಾರ್ಯ ಚಟುವಟಿಕೆಗಳನ್ನು ಸದಾ ಶಿವಾನುಭವ ಗೋಷ್ಠಿಗಳನ್ನು ಏರ್ಪಡಿಸಿ, ಅದರ ಮುಖಾಂತರ ಧರ್ಮ ತತ್ವಗಳ ಪ್ರಚಾರದ ಕಾರ್ಯ ಕೈಕೊಳ್ಳುವವರು.

" ನೂರು ವರುಷದಿ ಬಾಳಿ,ಸಾರ ಬಸವನ ತತ್ವ ಬೀರಿಹರು,ಭಾಲ್ಕಿ ಚೆನ್ನ ಬಸವ ಇವರೇ ಧೀರ ಧರ್ಮಿಗಳು''.[೮] ಶ್ರೀ ಮಠದ ಅಧಿಕಾರ ವಹಿಸಿಕೊಂಡಿದಿಂದಲೇ ಧಾರ್ಮಿಕ ತತ್ವಗಳ ಪ್ರಚಾರ ಹಾಗೂ ಪ್ರಸಾರಕ್ಕಾಗಿ ದುಡಿದರು. ಅವರ ಇಡೀ ಆಯುಷ್ಯವು ಬಸವ ತತ್ವ ಬಸವಧರ್ಮ, ಪ್ರಚಾರಕ್ಕೆ ಮೀಸಲಾಗಿಟ್ಟು ಕರ್ನಾಟಕದಾದ್ಯಂತ ಅಲ್ಲದೇ ನೆರೆ ರಾಜ್ಯಗಳಾದ ಆಂದ್ರಪ್ರದೇಶ ಹಾಗೂ ಮಹಾರಾಷ್ಟ್ರಗಳಲ್ಲಿಯೂ ಧಾರ್ಮಿಕ ಪ್ರಚಾರ ಮಾಡಿದರು. ಪ್ರಾಚೀನ ಕಾಲದಿಂದ ಬೆಳೆದು ಬಂದ ಮಠವು ಶ್ರೀ ಚೆನ್ನಬಸವ ಪಟ್ಟದ್ದೇವರ ಕಾಲದಲ್ಲಿ ಧಾರ್ಮಿಕ ಕ್ಷೇತ್ರದಲ್ಲಿ ಗಣನೀಯವಾದ ಸೇವೆ ಸಲ್ಲಿಸಿತ್ತು. ಪ್ರತಿಯೊಂದು ಹಳ್ಳಿ – ಪಟ್ಟಣಗಳಲ್ಲಿ ಧಾರ್ಮಿಕ ಕಾರ್ಯಕ್ರಮಗಳನ್ನು ಏರ್ಪಡಿಸಿ, ಅದರ ಮುಖಾಂತರ ಜನರಲ್ಲಿ ಅರಿವಿನ ಬೀಜವನ್ನು ಬಿತ್ತುತ್ತಿದ್ದರು. ಶರಣರ ನಡೆ ನುಡಿ ತತ್ವಗಳನ್ನು ಜನರಿಗೆ ಬೋಧಿಸಿ, ಸನ್ಮಾರ್ಗಕ್ಕೆಳಸುತ್ತಿದ್ದರು.

ಡಾ. ವ್ಹಿ.ಎಸ್. ಚರಂತಿಮಠ ಅವರು ಹೇಳಿರುವಂತೆ. ''ಶರಣರ ಸಂದೇಶಗುಣವಾಗಿ ಬದುಕಿಗೊಂಡದು ವಿಶಿಷ್ಟ ಘನತೆ ಗೌರವಗಳನ್ನು ನೀಡಿ ತಾವು ಅವುಗಳು ಎತ್ತರಕ್ಕೆ ಏರಿ ಬಸವ ತತ್ವ ಪರಿಮಳವನ್ನು ಜಗತ್ತಿಗೆ ಬೀರುತ್ತಿದ್ದಾರೆ. ಶ್ರಿ ಮ.ಘ.ಚ. ಚನ್ನಬಸವ ಪಟ್ಟದ್ದೇವರು. ನಾನು – ತಾನು ಎಂಬ ಅಹಂಭಾವ ತೊರೆದು ದಾಸೋಹದ ನೀತಿಯನ್ನು ಪರಿಪಾಲಿಸುತ್ತಾ ಶರಣರಂತೆ ನಿಸ್ವಾರ್ಥದ ಹಾದಿಯಲ್ಲಿ ನಡೆದಿದ್ದಾರೆ. ಬಾಳಿನ ಭವಣೆಯಲ್ಲಿ ಬೆಂದವರನ್ನು ಬಸವಳಿದವರನ್ನು ವರ್ಣಾಶ್ರಮಗಳ ದರ್ಪಕ್ಕೆ ಸಿಕ್ಕಿ ನುಚ್ಚು ನೂರಾದ ದಲಿತರನ್ನು ಬಡ ಜನತೆಯನ್ನು ಕಾಯಕ ಮಾಡಿದರೂ, ಅದರ ಲಾಭವನ್ನು ಮತ್ತೊಬ್ಬರಿಗೆ ಗಳಿಸಿಕೊಡುವ ದುರಾದೃಷ್ಟವಂತರನ್ನು,ತಮ್ಮ ಬಳಿಗೆ ಕರೆದುಕೊಂಡು ಅವರಿಗೆ ಸಾಂತ್ವನ ನೀಡುತ್ತಿದ್ದಾರೆ. ಅಧರ್ಮವಂತರನ್ನು,ನಾಸ್ತಿಕರನ್ನು,ಧರ್ಮದ ಹಾದಿಗೆ ತರಲು ಸತತ ಪ್ರಯತ್ನ ನಡೆಸುತ್ತಿದ್ದಾರೆ''.[೯] ಸತ್ಯ ಶುದ್ಧ ನಡೆತೆಯುಳ್ಳ ಶ್ರೀಗಳು ತಮ್ಮ ಜೀವನದಲ್ಲಿ ಆಡಂಬರಕ್ಕೆ ಎಂದು ಮಹತ್ವಕೊಟ್ಟವರಲ್ಲ,ಹಗಲಿರಳು ಕಾಯಕದಲ್ಲಿ ತಲ್ಲೀನರಾಗಿರುತ್ತಿದ್ದರು. ಧರ್ಮೋಪದೇಶಗಳನ್ನು ಜನರಿಗೆ ಸಾರುತ್ತಿದ್ದರು.

ಹುಲಸೂರು ಶ್ರೀ ಗುರು ಬಸವೇಶ್ವರ ಸಂಸ್ಥಾನ ವಿರಕ್ತ ಮಠವು ಧಾರ್ಮಿಕ ತತ್ವಗಳ ಪ್ರಚಾರಕ್ಕೆ ಮೀಸಲಾಗಿದೆ. ಹಳ್ಳಿ –ಪಟ್ಟಣಗಳಲ್ಲಿ ಸಂಚರಿಸಿ, ಧಾರ್ಮಿಕ ಕಾರ್ಯ ಚಟುವಟಿಕೆಗಳನ್ನು ನಡೆಸಿಕೊಂಡು ಹೋಗುತ್ತಿದ್ದಾರೆ. ಪ್ರತಿ ತಿಂಗಳಿಗೊಮ್ಮೆ ಬಸವ ಜ್ಯೋತಿ ಎಂಬ ಕಾರ್ಯಕ್ರಮವನಿಟ್ಟುಕೊಂಡು, ಅದರ ಮುಖಾಂತರ ವೀರಶೈವ ಧರ್ಮ ಹಾಗೂ ಶರಣರ ತತ್ವಗಳ ಪ್ರಚಾರ ಮಾಡುತ್ತಾರೆ. ಪ್ರತಿ ಸೋಮುವಾರ ಭಕ್ತರ ಮನೆಯಲ್ಲಿ '' ಮಹಾ ಮನೆ'' ಕಾರ್ಯಕ್ರಮವನ್ನು ಹಮ್ಮಿಕೊಂಡು ಧಾರ್ಮಿಕ ವಿಧಿ ವಿಧಾನ ನಿಯಮ ತತ್ವಗಳನ್ನು ಬೋಧಿಸುತ್ತಾರೆ. ಪ್ರತಿ ವರ್ಷಕೊಮ್ಮೆ ಜಗದ್ಗುರು ಬಸವ ಕುಮಾರ ಶಿವಯೋಗಿಗಳ ಸ್ಮರಣೋತ್ಸವದ ಸವಿ ನೆನೆಪಿಗಾಗಿ ಮೂರು ದಿವಸಗಳ ಕಾಲ ಧಾರ್ಮಿಕ ವಿವಿಧ ಗೋಷ್ಠಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ವಿವಿಧ ವಿದ್ವಾಂಸರನ್ನು ಕರೆಯಿಸಿ, ಮುಂತಾದ ತತ್ವಗಳ ಬಗ್ಗೆ ವಿಚಾರ ವಿಮರ್ಶೆ ಪ್ರಸಾರ ಮಾಡುವುದು ರೂಢಿಯಲ್ಲಿದೆ. ''ಊರು ಕೇರಿಗೊಂದು ಮಠಗಳಾದರೇನು? ಎಲ್ಲರೂ ಧರ್ಮ ಸುಧಾರಕರೆ?'' – ಎಂದು ವಚನವೊಂದಲ್ಲಿ ಹೇಳಿರುವ ನೂತನ ಶ್ರೀಗಳಾದ ಮ.ನಿ.ಪ್ರ. ಶಿವಾನಂದ ಮಹಾಸ್ವಾಮಿಗಳು ಧಾರ್ಮಿಕ ಉನ್ನತಿಗಾಗಿ ಹಗಲಿರುಳು ಪರಿಶ್ರಮಿಸುತ್ತಿರುವುದು ಮನವರಿಕೆಯಾಗುತ್ತದೆ.

ಬಸವಕಲ್ಯಾಣ ತಾಲೂಕಿನಲ್ಲಿರುವ ಹಾರಕೂಡ ಬೃಹನ್ಮಠವು ಧರ್ಮ ಪ್ರಚಾರದ ಮಠಗಳಲ್ಲಿ ಒಂದಾಗಿದೆ. ಧರ್ಮವನ್ನೇ ಎತ್ತಿ ಹಿಡಿದು ಕಲ್ಯಾಣ ನಾಡಿಗೆ ಕೀರ್ತಿ ತಂದಿದೆ. ಶ್ರೀ ಮಠದಲ್ಲಿ ಶಿವಾನುಭವ ಗೋಷ್ಠಿಗಳನ್ನು ಏರ್ಪಡಿಸಿ ಧರ್ಮೋಪದೇಶ ತತ್ವಗಳ ಪಾಲನೆಗೆ ಕರೆ ನೀಡುತ್ತಾರೆ. ನೂರಾರು ಹಳ್ಳಿ – ಪಟ್ಟಣಗಳಿಗೆ ಸಂಚರಿಸಿ ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸಿ ಬಸವ ಧರ್ಮ ತತ್ವಗಳನ್ನು ಪಾಲಿಸಿಕೊಂಡು ಬರುತ್ತಿದ್ದಾರೆ. ಈ ಮಠದ ಶ್ರೀಗಳು ''ತಮ್ಮ ನಿರಂತರ ಧರ್ಮ ಪ್ರಚಾರದ ಸಂದರ್ಭದಲ್ಲಿ ಅನೇಕ ಪವಾಡಗಳನ್ನು ಜನ ಕಲ್ಯಾಣವನ್ನು ಮಾಡಿದ್ದಾರೆ. ಅದಕ್ಕಾಗಿಯೇ ಜನತೆ ಇವರನ್ನು ಕಲ್ಯಾಣ ನಾಡಿನ ಕಾರಣಿಕ ಪುರುಷರೆಂದು ನೆನೆಯುತ್ತಾರೆ''.[೧೦] ಧರ್ಮ ಪ್ರಚಾರಕ್ಕಾಗಿ ಶ್ರೀಮಠದ ಆವರಣದಲ್ಲಿ ಶಿವಾನುಭವ ಮಂಟಪ ಸ್ಥಾಪಿಸಿ ಧರ್ಮಗೋಷ್ಠಿಗಳನ್ನು ನಡೆಸಿಕೊಂಡುಬರುತ್ತಾರೆ. ನಾಡಿನ ವಿದ್ವಾಂಸರನ್ನು ಮಠಾಧೀಶರನ್ನು, ಸಾಹಿತಿಗಳನ್ನು ಪಂಡಿತರನ್ನು ಕರೆಯಿಸಿ, ಧಾರ್ಮಿಕ ಗೋಷ್ಠಿಗಳನ್ನು ವಿವಿಧ ಭಾಗಗಳಲ್ಲಿ ಏರ್ಪಡಿಸಿ ಅವರಿಂದ ಉಪನ್ಯಾಸ ಉಪದೇಶ ಹೇಳಿಸುತ್ತಾರೆ. ನೂತನ ಶ್ರೀಗಳಾದ ಷ. ಬ್ರ. ಚನ್ನವೀರ ಶಿವಾಚಾರ್ಯ ಮಹಾಸ್ವಾಮಿಗಳು ಧರ್ಮ ಪ್ರಚಾರಕ್ಕೆ ಹೆಚ್ಚಿನ ಸಮಯವನ್ನು ಮುಡುಪಾಗಿಟ್ಟಿದ್ದಾರೆ. ಅಲ್ಲದೇ ಧರ್ಮ

ಪ್ರಚಾರಕ್ಕೆಂದು ಹೊರ ರಾಜ್ಯಗಳಲ್ಲಿ ಪ್ರವಾಸ ಕೈಗೊಂಡು ಧಾರ್ಮಿಕ ತತ್ವಗಳು ಹಾಗೂ ಶರಣರ ನಡೆ ನುಡಿಗಳನ್ನು ಪ್ರಸಾರ ಮಾಡಿದ್ದಾರೆ. ಮಾಡುತ್ತಿದ್ದಾರೆ.

ಬೀದರ ನಗರದಲ್ಲಿರುವ ಶ್ರೀ ಸಿದ್ಧರೂಢ ಮಠದ ಶ್ರೀಗಳಾದ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಹತ್ತು ಹಲವಾರು ಕಡೆ ಅಲೆದಾಡಿ, ಧರ್ಮ ಪ್ರಚಾರವನ್ನು ಮಾಡಿದ್ದಾರೆ. ಜತೆಗೆ ಧಾರ್ಮಿಕ ಕೇಂದ್ರಗಳನ್ನು ನಿರ್ಮಿಸಿ, ಅಲ್ಲಿ ತಿಂಗಳಿಗೊಮ್ಮೆ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾರೆ. ಶ್ರೀಗಳು ಸಂಚರಿಸಿ, ಸ್ಥಾಪಿಸಿದ ಪ್ರಮುಖ ಧಾರ್ಮಿಕ ಕ್ಷೇತ್ರಗಳೆಂದರೆ,

| | ಗ್ರಾಮ | ಮಠ | ಸ್ಥಾಪನೆ | ತಾಲೂಕ | ಜಿಲ್ಲೆ |
|---|---|---|---|---|---|
| ೧. | ಆಲೂರು | ಶ್ರೀ ಶಿವಯೋಗಾಶ್ರಮ | ೧೯೭೦ | ಇಂಡಿ | ವಿಜಾಪೂರ |
| ೨. | ಚಳಕಾಪೂರ | ಬ್ರಹ್ಮಾವಿದ್ಯಾಶ್ರಮ | ೧೯೭೩ | ಭಾಲ್ಕಿ | ಬೀದರ |
| ೩. | ಹೊಸಳ್ಳಿ | ಸಿದ್ಧಾರೂಢ ಮಠ | ೧೯೭೬ | ಧಾರವಾಡ | ಧಾರವಾಡ |
| ೪. | ಬೀದರ | ಸಿದ್ಧಾರೂಢ ಮಠ | ೧೯೭೮ | ಬೀದರ | ಬೀದರ |
| ೫. | ಮಹಾಲಿಂಗಪೂರ | ಬಸವಾನಂದಾಶ್ರಮ | ೧೯೮೨ | ವಿಜಾಪೂರ | ವಿಜಾಪೂರ |
| ೬. | ಯಳವಂತಗಿ | ಶ್ರೀ ಸಿದ್ಧಾರೂಢ ಮಠ | ೧೯೮೩ | ವಿಜಾಪೂರ | ವಿಜಾಪೂರ |
| ೭. | ನಾಗಪೂರ | ಸಿದ್ಧಾರೂಢ ಮಠ | ೧೯೮೫ | ನಾಗಪೂರ | ನಾಗಪೂರ |

ಹೀಗೆ ಹಲವಾರು ಕಡೆ, ಧಾರ್ಮಿಕ ಕೇಂದ್ರಗಳನ್ನು ಸ್ಥಾಪಿಸಿ, ಅದರ ಮುಖಾಂತರ ಧರ್ಮದ ತತ್ವಗಳು ಪ್ರಚಾರ ಮಾಡಿದರು. ಧರ್ಮವನ್ನು ಉಳಿಸಿ , ಧರ್ಮದ ತತ್ವಗಳನ್ನು ಬೋಧಿಸಿ, ಧರ್ಮದ ಮಾರ್ಗದಲ್ಲಿ ಸಮಾಜ ನಡೆಯುತ್ತದೆಂಬ ಉದ್ದೇಶದಿಂದ ೧೯೮೧ ರಲ್ಲಿ ಸುಮಾರು ಒಂದು ಸಾವಿರಕ್ಕೂ ಹೆಚ್ಚು ಭಕ್ತರನ್ನು ಕರೆದುಕೊಂಡು ಉತ್ತರ ಭಾರತದ ಯಾತ್ರೆಯನ್ನು ಕೈಗೊಂಡರು. ಸಂಚಾರದ ಸಂಧರ್ಭದಲ್ಲಿ ಆಯಾಯ ಗ್ರಾಮಗಳಲ್ಲಿ ತಂಗಿ, ಪಾಠ – ಪ್ರವಚನಗಳ ಮುಖಾಂತರ ಧಾರ್ಮಿಕ ತತ್ವಪ್ರಚಾರ ಮಾಡಿದರು.

ಭಾತಂಬ್ರಾ ವಿರಕ್ತ ಪೂಜ್ಯರಾದ ಶ್ರೀ ಶಿವಯೋಗಿಶ್ವರ ಮಹಾಸ್ವಾಮಿಗಳವರು ೧೦೧ ಹಳ್ಳಿಗಳಿಗೆ ಪಾದಯಾತ್ರೆ ಕೈಗೊಂಡು ಧರ್ಮ ಪ್ರಚಾರ ಮಾಡಿದರು. ಧರ್ಮವನ್ನು ಉಳಿಸಿ, ರಕ್ಷಿಸಲು ಸಾರಿ ಹೇಳಿದರು. ಬೇಮಳಖೆಡಾ ಹಿರೇಮಠವು ಅಬ್ಬರ ಪ್ರಚಾರವಿಲ್ಲದೆ ಧರ್ಮ ಪ್ರಸಾರದ ಕಾರ್ಯ ಕೈಗೊಳ್ಳುತ್ತಿದೆ. ನಿಡವಂಚಾ ಚೌಕಿ ಮಠವು ಧಾರ್ಮಿಕ ತತ್ವಾತ್ವಿತೆ ನಿಯಮಗಳನ್ನು ಜನರಿಗೆ ತಿಳಿಸಲು ಸದಾ ಪ್ರಯತ್ನಿಸುತ್ತಿದೆ. ಲಿಂಗೈಕ್ಯ ಶ್ರೀ ಮಡಿವಾಳೇಶ್ವರ ಸ್ವಾಮಿಗಳು ಹಾಗೂ ನೂತನ ಶ್ರೀಗಳಾದ ಮಾತೆ ಮೈತ್ರಾದೇವಿಯವರು

ಒಟ್ಟುಗೂಡಿ ಜಿಲ್ಲೆಯಲ್ಲಿ ಹಲವಾರು ಸ್ಥಳಗಳಿಗೆ ಸಂಚರಿಸಿ, ಸಂದರ್ಶಿಸಿ, ಬಸವ ಧರ್ಮ ಹಾಗೂ ತತ್ವಗಳನ್ನು ತಿಳಿಸಿದ್ದಾರೆ. ನಿಡವಂಚಾ ಚೌಕಿ ಮಠದ ವೈಶಿಷ್ಟ್ಯವೆನೆಂದರೆ, ಶ್ರೀಮಠಕ್ಕೆ ಮಠಾಧೀಶರಾಗಬೇಕಾದರೆ ಯಾವುದೇ ಜಾತಿ – ಮತ ಪಂಥ – ಲಿಂಗ – ಪುರುಷರೆಂದು ಭೇದವ ಗಳಿಲ್ಲದೆ ಅಧಿಪತಿಯಾಗುತ್ತಾರೆ. ಶ್ರೀ ಗುರು ಭದ್ರೇಶ್ವರ ವರಿಂದ ಸ್ಥಾಪನೆಗೊಂಡ ಈ ಮಠವು ಹಲವಾರು ಶ್ರೀಗಳ ನೇತ್ರತ್ವದಲ್ಲಿ ತನ್ನ ಕಾರ್ಯವನ್ನು ಬಿತ್ತರಿಸಿದೆ. ವಿಶೇಷವೆನೆಂದರೆ ಮುಸ್ಲಿಮನಾದ ಸುಲ್ತಾನಸಾಬ ಕೊಸಮ್ಮ ಶ್ರೀ ಮಠದ ಅಧಿಕಾರ ವಹಿಸಿಕೊಂಡು ಬಂದಿದ್ದು ಕಾಣುತ್ತೇವೆ. ಅಲ್ಲದೆ ಸ್ತ್ರೀಯರಿಗೂ ಇಲ್ಲಿ ಯಾವುದೇ ರೀತಿಯ ಭೇದ – ಭಾವಗಳಿಲ್ಲದೆ ಈ ಮಠದ ಪೀಠಾಧಿಪತಿಯಾಗಲು ಅವಕಾಶಗಳಿವೆ. ಮಠದ ಅಧಿಕಾರವನ್ನು ವಹಿಸಿಕೊಂಡ ನಂತರ, ಅವರು ವೀರಶೈವ ಧರ್ಮದ ತತ್ವಗಳನ್ನು ಪ್ರಚಾರ ಮಾಡುತ್ತಾರೆ. ಧರ್ಮ ಗ್ರಂಥಗಳನ್ನು ಸಂರಕ್ಷಿಸಿಕೊಂಡು ಬರುತ್ತಿದ್ದಾರೆ.

ಗಡಿ ಗೌಡಗಾಂವ ಹಿರೇಮಠ ನೂತನ ಶ್ರೀಗಳಾದ ಮ. ಘ. ಚ. ಶಾಂತವೀರ ಶಿವಾಚಾರ್ಯರು ಇತ್ತೀಚಿ ಗೆ ಧಾರ್ಮಿಕ ಕ್ಷೇತ್ರದಲ್ಲಿ ಗಣನೀಯವಾದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಶಿವಾನುಭವ ಗೋಷ್ಠಿಗಳನ್ನು ಏರ್ಪಡಿಸಿ ಅದರ ಮುಖಾಂತರ ಧಾರ್ಮಿಕ ಸೇವೆಗೈಯುತ್ತಿದ್ದಾರೆ. ನೂರಾರು ಗ್ರಾಮಗಳಿಗೆ ಅಲೆದಾಡಿ ಪಾಠ – ಪ್ರವಚನಗಳ ಮುಖಾಂತರ ಧಾರ್ಮಿಕ ಪ್ರಚಾರ ಮಾಡುತ್ತಿದ್ದಾರೆ. ಧಾರ್ಮಿಕತೆಯ ಯಾವುದೇ ಪೂರಾಣ ಪ್ರವಚನಗಳಲ್ಲಿ ಪ್ರವೀಣರಾಗಿದ್ದಾರೆ. ಶ್ರೀಗಳ ಮೂರ್ತಿ ಚಿಕ್ಕದಾಗಿದ್ದರೂ, ಇವರ ಕೀರ್ತಿ ನೆರೆ ರಾಷ್ಟ್ರಗಳಲ್ಲಿ ಹರಡಿದೆ. ತಾಣಾಕೂಸನೂರು ವಿರಕ್ತ ಮಠವು ಬಸವ ಧರ್ಮದ ತತ್ವಾನುಚರಣೆಯ ಸಂಸ್ಕೃತಿಯನ್ನು ಕಾಪಾಡಿಕೊಂಡು ಬರಲು ಪ್ರಯತ್ನಿಸುತ್ತಿದೆ.

ಹೆಡಗಾಪೂರ ಹಿರೇಮಠದ ಪೀಠಾಧಿಪತಿಯಾದ ಶ್ರೀ ಷ. ಬ್ರ. ಶಿವಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು, ಶ್ರೀ ಮಠದಲ್ಲಿ ಧಾರ್ಮಿಕ ಗೋಷ್ಠಿಗಳನ್ನೇರ್ಪಡಿಸಿ, ಅದರ ಮುಖಾಂತರ ಧರ್ಮ ಪ್ರಚಾರ ಮಾಡುತ್ತಿದ್ದಾರೆ. ಧರ್ಮ ತತ್ವಗಳ ಬಿತ್ತರಿಸಲು ಹಳ್ಳಿ – ಪಟ್ಟಣಗಳಿಗೆ ಸಂಚರಿಸಿ ಪಾಠ – ಪ್ರವಚನ ಕಾರ್ಯಕ್ರಮಗಳನ್ನಿಟ್ಟುಕೊಳ್ಳುತ್ತಿದ್ದಾರೆ.

ಗುಲಬರ್ಗಾ ಜಿಲ್ಲೆಯ ಚಿತಾಪೂರ ತಾಲೂಕಿನಲ್ಲಿ ಬರುವ ನಾಲವಾರ ಶ್ರೀ ಕೋರಿಸಿದ್ದೇಶ್ವರ ಮಠವು ಧಾರ್ಮಿಕ ಪ್ರಚಾರದಲ್ಲಿ ಮುಂದಾಳತ್ವ ವಹಿಸಿದೆ. ನೂತನ ಶ್ರೀಗಳಾದ ಷ. ಬ್ರ. ತೋಟೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು ಮಠದ ಅಧಿಕಾರ ವಹಿಸಿಕೊಂಡ ಮೇಲೆ ನೂರಾರು ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸಿದ್ದರು. ಗುಲಬರ್ಗಾ ಶಾಖಾ ಮಠದಲ್ಲಿ ಪ್ರತಿ ಹುಣ್ಣಿಮೆಯಿಂದು ಶಿವಾನುಭವ

ಚಿಂತನ ಕಾರ್ಯಕ್ರಮ ನಡೆಸುತ್ತಾರೆ. ಕೋರಣೇಶ್ವರ ನಗರವೆಂದು ಪ್ರಸಿದ್ಧಿ ಪಡೆದಿದೆ. ಧಾರ್ಮಿಕ ಪುರಾಣ,ಪ್ರವಚನಗಳನ್ನು ಹಾಗೂ ಶರಣರ ನಡೆ ನುಡಿ ಸಂಸ್ಕೃತಿಯನ್ನು ಸುರಕ್ಷಿತವಾಗಿ ಕಾಪಾಡಿಕೊಂಡು ಬರುತ್ತಾರೆ.

ಭರತನೂರಿನ ವಿರಕ್ತಮಠವು ಧರ್ಮ ತತ್ವಗಳ ಪ್ರಚಾರದ ಕಾಯಕದಲ್ಲಿಯೇ ನಿರತವಾಗಿದೆ. ಮಠದ ಮೂಲ ಪುರುಷರಾದ ಶ್ರೀ ಗುರುನಂಜೇಶ್ವರರು ಮಂಗಳಾಪೂರ ಗ್ರಾಮದಿಂದ ಧರ್ಮ ಪ್ರಚಾರ ಮಾಡುತ್ತ ಸಾವಿರಾರು ಹಳ್ಳಿ – ಪಟ್ಟಣಗಳನ್ನು ಸಂಚರಿಸಿ ಕೊನೆಗೆ ಈ ಗ್ರಾಮದಲ್ಲಿ ಸ್ಥಳವಕಾಶ ಮಾಡಿತಂಗಿದ್ದರು. ಅಂದಿನಿಂದ ಶ್ರೀ ಮಠವು ಧಾರ್ಮಿಕ ಪ್ರಗತಿಯತ್ತ ತನ್ನದೆಯಾದ ಕಾರ್ಯವೈಖರಿಯನ್ನು ಮಾಡುತ್ತಿದೆ. ನೂತನ ಶ್ರೀಗಳಾದ ಮ. ನಿ. ಪ್ರ. ಗುರು ನಂಜೇಶ್ವರ ಮಹಾಸ್ವಾಮಿಗಳವರು ಕೂಡಾ, ಹಳ್ಳಿಗಳಿಗೆ ಅಲೆದಾಡಿ ಧಾರ್ಮಿಕ ಪ್ರಗತಿ ಸಾಧಿಸಿದ್ದಾರೆ. ಶ್ರೀ ಮಠದಲ್ಲಿ "ಅನುಭಾವ ಗೋಷ್ಠಿ" ಶರಣರ ಗೋಷ್ಠಿಗಳನ್ನು ಏರ್ಪಡಿಸಿಕೊಂಡು ಬರುತಿದ್ದಾರೆ.

" ಧರ್ಮದ ತಳಹದಿಯ ಮೇಲೆ ಶರಣರ ತತ್ವ ನಡೆ –ನುಡಿಗಳನ್ನು ಪಾಲಿಸಿಕೊಂಡು ಬರುತ್ತಿರುವ ಸಲೆ ಪೇಟೆಯ ವಿರಕ್ತ ಮಠ. ಶ್ರೀ ಮಠಕ್ಕೆ ಕಲಬುರ್ಗಿ ಶರಣಬಸಪ್ಪನವರ ಮಾರ್ಗದರ್ಶವಿತ್ತು. ಮಧ್ಯದಲ್ಲಿದ್ದ ಶ್ರೀ ಸಿದ್ದಲಿಂಗ ಮಹಾಸ್ವಾಮಿಗಳವರು ಮೂರನೆಯ ಪೀಠಾಧಿಪತಿಯಾಗಿದ್ದಾಗ ಕಲಬುರ್ಗಿ ಶರಣಬಸವೇಶ್ವರರ ಸಂಪರ್ಕ ಗಾಢವಾಗಿ ಹೊಂದಿದ್ದರು. ಈ ಎರಡು ಮಠಗಳು ತುಂಬಾ ಹತ್ತಿರದ ಸಂಬಂಧ ಹೊಂದಿತ್ತೆಂದು ತಿಳಿದು ಬಂದಿದೆ. "ಕಲಬುರ್ಗಿ ಶರಣ ಬಸವೇಶ್ವರರು ತಮ್ಮ ಕಾಲಮಾನದಲ್ಲಿ ಬಸವ ಪುರಾಣ ಮಂಗಲ ಕಾರ್ಯಕ್ರಮಕ್ಕೆ ಅಂದಿನ ಪೀಠಾಧಿಪತಿಯಾದ ಶ್ರೀ ಸಿದ್ದಲಿಂಗ ಸ್ವಾಮಿಗಳು ಬಿನ್ನಹದ ಮೇರೆಗೆ ಖಟ್ವಾಂಗೇಶ್ವರ ಮಠಕ್ಕೆ ಭೇಟಿ ನೀಡಿದರು".[೧೧] ಧಾರ್ಮಿಕ ಕಾರ್ಯಕ್ರಮಗಳು ಸದಾ ನಡೆಯುತ್ತಿದ್ದವೆಂದು ತಿಳಿದುಬಂದಿದೆ. ಇತ್ತೀಚಿಗೆ ಖಜೂರಿ ವಿರಕ್ತ ಮಠವು ಧಾರ್ಮಿಕ ಪ್ರಚಾರದಲ್ಲಿ ಗಮನ ಹರಿಸಿದೆ. ಆದರೆ ಸಣ್ಣ ಪುಟ್ಟ ಧಾರ್ಮಿಕ ಕಾರ್ಯಕ್ರಮಗಳನ್ನು ಮಠದಲ್ಲಿ ಹಮ್ಮಿಕೊಳ್ಳುತ್ತಾರೆ. ಸುಮಾರು ತಿಂಗಳಿಗೊಂದು ಧಾರ್ಮಿಕ ಕಾರ್ಯಕ್ರಮ ಏರ್ಪಡಿಸಿಕೊಳ್ಳುತ್ತಿದ್ದಾರೆ. ನೂತನ ಶ್ರೀಗಳಾದ ಮುರುಘೇಂದ್ರ ಮಹಾಸ್ವಾಮಿಗಳು, ಬಸವ ಧರ್ಮದ ತತ್ವಗಳ ಬೋಧನೆಗಾಗಿ ಪ್ರವಚನವನ್ನು ಮಾಡುತ್ತಾರೆ. ಶರಣರ ನಡೆ – ನುಡಿ ತತ್ವಗಳನ್ನು ಜನರಿಗೆ ಬಿರುತಿದ್ದಾರೆ. ಧಾರ್ಮಿಕ ಜಾಗೃತಿಯನ್ನುಂಟು ಮಾಡುತ್ತಿದ್ದಾರೆ. ನೂತನ ಶ್ರೀಗಳ ವೈಶಿಷ್ಟ್ಯವೇನೆಂದರೆ ವೀರಶೈವೇತ್ತರ ಮನೆ – ಮನೆಗಳಿಗೂ, ಭೇಟಿಕೊಟ್ಟು ಧಾರ್ಮಿಕ ಸುವ್ಯವಸ್ಥೆ ಕಾಪಾಡಿಕೊಂಡು

ಬರಲು ಕರೆ ಕೊಡುತ್ತಾರೆ. ಧರ್ಮದ ಬಗ್ಗೆ ತುಂಬಾ ಅಭಿಮಾನವಿರುವ ಶ್ರೀಗಳಿವರು ತತ್ವಗಳನ್ನು ಪರಿಪಾಲಿಸಲು ಪರಿಶ್ರಮಿಸುತ್ತಾರೆ.

ರುದ್ದನೂರಿನ ವಿರಕ್ತ ಹಾಗೂ ಮಾದನ ಹಿಪ್ಪರಗಿಯ ವಿರಕ್ತ ಮಠಗಳು ಧಾರ್ಮಿಕವಾಗಿ ಸಣ್ಣ – ಪುಟ್ಟ ಗೋಷ್ಠಿಗಳನ್ನು ಏರ್ಪಡಿಸಿಕೊಳ್ಳುತ್ತಾರೆ. ಬೇರೆ ಮಠಗಳಿಗೆ ಹೋಲಿಸಿದರೆ ಈ ಮಠಗಳು ಅಷ್ಟು ಧಾರ್ಮಿಕ ಪ್ರಗತಿಯನ್ನು ಸಾಧಿಸಿಲ್ಲವೆಂದು ಗೊತ್ತಾಗುತ್ತದೆ. ಅಫಜಲಪೂರ ತಾಲೂಕಿನಲ್ಲಿ ಬರುವ ಚಿಣಮಗೇರಿ ಹಿರೇಮಠವು ಧಾರ್ಮಿಕ ಕ್ಷೇತ್ರಕ್ಕೆ ಹೆಸರುವಾಸಿಯಾಗಿದೆ. ನೂತನ ಶ್ರೀ ಗಳಾದ ಷ. ಬ್ರ. ಸಿದ್ದರಾಮ ಶಿವಾಚಾರ್ಯ ಸ್ವಾಮಿಗಳು ನೂರಾರು ಹಳ್ಳಿ – ಪಟ್ಟಣಗಳಿಗೆ ಸಂಚರಿಸಿ ಧಾರ್ಮಿಕ ತತ್ವ ಬೋಧನೆಯನ್ನು ಮಾಡಿದ್ದಾರೆ. ಕಾಯಕಕ್ಕೆ ಹೆಚ್ಚಿನ ಮಹತ್ವಕೊಟ ಶ್ರೀಗಳಿವರು. ಮಠದಲ್ಲಿ ಚಿಂತನ, ಮಂಥನ, ಧರ್ಮರಕ್ಷಣೆ ಎಂಬ ಕಾರ್ಯಕ್ರಮವನ್ನು ನಡೆಸುತ್ತಾ ಬಂದಿರುತ್ತಾರೆ. ಸೊನ್ನದ ಶ್ರೀ ವಿರಕ್ತ ಮಠವು ಇತ್ತೀಚಿಗೆ ಧಾರ್ಮಿಕ ಪ್ರಚಾರದಲ್ಲಿ ಗಮನ ಹರಿಸಿದೆ. ಧಾರ್ಮಿಕ ಪ್ರಚಾರದ ಕಾರ್ಯಕ್ರಮಗಳಿಂದಲೇ ನೂತನ ಶ್ರೀಗಳು ಮಠದ ಕೀರ್ತಿಯನ್ನು ಪಸರಿಸಿದ್ದಾರೆ. ವಿಶ್ವಗುರು ಬಸವೇಶ್ವರನವರ ಸಮಕಾಲಿನವರ ಕುರಿತು ಪ್ರವಚನ ಹಮ್ಮಿಕೊಳ್ಳುತ್ತಾರೆ ಅದರ ಮುಖಾಂತರ ಧಾರ್ಮಿಕ ಸಂರಕ್ಷಣೆ ಪ್ರಸಾರ ಸತತವಾಗಿ ನಡೆಸಿಕೊಂಡು ಬರುತ್ತಾರೆ.

ಜೇವರಗಿಯ ವಿರಕ್ತಮಠವು ಎರಡನೇ ಪೀಠಾಧಿಪತಿಯಾದ ಶ್ರೀ ಷಣ್ಮುಖ ಶಿವಯೋಗಿಗಳವರ ಕಾಲದಲ್ಲಿ ಧಾರ್ಮಿಕ ಪ್ರಚಾರ ಹೆಚ್ಚಾಗಿ ಬೆಳೆದಿತ್ತು. ಧರ್ಮದ ಜ್ಯೋತಿಯನ್ನು ಮನೆ – ಮನೆಗಳಿಗೆ ಬೆಳಗಿದವರು. ನೂತನ ಶ್ರೀಗಳಾದ ಮ. ನಿ. ಪ್ರ ಶಾಂತಲಿಂಗ ಮಹಾಸ್ವಾಮಿಗಳು ಧರ್ಮದ ಕಾರ್ಯಗಳನ್ನು ಇತ್ತೀಚಿಗೆ ಕೈಗೊಳ್ಳುತ್ತಿದ್ದಾರೆ. ಪಾಠ – ಪ್ರವಚನಗಳ ಮೂಲಕ ಜನರಲ್ಲಿರುವ ಅಂಧಕಾರದ ಬೀಜವನ್ನು ಕಿತ್ತೊಗೆದು ತನ್ನದೆಯಾದ ಮಿತಿಯಲ್ಲಿ ಧಾರ್ಮಿಕ ಪ್ರಚಾರ ನಡೆಸುತ್ತಿದ್ದಾರೆ. ಪಾಳಾದ ಹಿರೇಮಠವು ಆರಂಭದಿಂದಲೇ ಅಂದರೆ ಮಠ ಉತ್ಪತ್ತಿಯಾದ ಸ್ವಾಮಿಗಳಿಂದ ಹಲವಾರು ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬಂದಿವೆ. ನೂತನ ಶ್ರೀಗಳು ಕೂಡಾ, ಪಾಠ – ಪ್ರವಚನಗಳನ್ನು ಹೇಳುತ್ತ, ಹಳ್ಳಿ – ಹಳ್ಳಿಗೆ ಸಂಚರಿಸಿ ಧರ್ಮೋಪದೇಶವನ್ನು ನೀಡುತ್ತಿದ್ದಾರೆ. ಬೆಳಗುಂಡಿಯ ಹಿರೇಮಠವು ಮೂಲ ಹಾಗೂ ಎರಡನೇ ಮಠಾಧೀಶರ ಕಾಲದಲ್ಲಿ ಹಳ್ಳಿ – ಹಳ್ಳಿಗಳಿಗೆ ಸಂಚರಿಸಿ ಧಾರ್ಮಿಕ ತತ್ವ ನಡೆ ನುಡಿ ಬಸವ ಧರ್ಮದ ಪ್ರಸಾರ ಮಾಡಿದೆ. ಆದರೆ ಇಂದು ಈ ಮಠವು ಪೀಠಾಧಿಪತಿಯಿಲ್ಲದೆ ಕಂಗೊಳಿಸುತ್ತಿದೆ.

ಕಲಬುರ್ಗಿಯ ಶ್ರೀ ಶರಣ ಬಸವೇಶ್ವರ ಮಠವು ಕಲ್ಯಾಣ ನಾಡಿನ ಪರಿಸರದಲ್ಲಿ ಧಾರ್ಮಿಕ ಪ್ರಚಾರದ ಪ್ರಗತಿಯನ್ನು ಸಾಧಿಸಿದ ಬಹುದೊಡ್ಡ ಮಠಗಳಲ್ಲಿ ಒಂದಾಗಿದೆ. ಬಸವಾದಿ ಶರಣರ ತತ್ವಗಳನ್ನೆ ನೂತನ ಶತಮಾನದಲ್ಲಿ ಜನರಿಗೆ ಮುಟ್ಟಿಸಬೇಕೆಂದು ಜನ ಮನಗಳಿಗೆ ಹಗಲಿರುಳು ಅಲೆದಾಡಿ ಅರಿವಿನ ಬೀಜವನ್ನು ಬಿತ್ತಿದ್ದಾರೆ. ತನ್ನ ಶಕ್ತಿಮೀರಿ ಕಾಯಕವನ್ನು ಶ್ರೀಮಠ ಮಾಡುತಿದೆ. ನೂತನ ಶ್ರೀಗಳಾದ ಪೂಜ್ಯ ಶ್ರೀ ಶರಣಬಸಪ್ಪ ಅಪ್ಪನವರು ಇತ್ತೀಚಿಗೆ ಧಾರ್ಮಿಕ ಕಾರ್ಯವನ್ನು ಮಠದಲ್ಲಿಯೇ ನಡೆಸಿಕೊಂಡು ಬರುತ್ತಿದ್ದಾರೆ. ಭಕ್ತರಲ್ಲಿ ಭಕ್ತಿ ಕಡಿಮೆಯಾದಂತಿದೆ. ಧಾರ್ಮಿಕ ಕಾರ್ಯವನ್ನು ಕಡಿಮೆಮಾಡಿ ಶೈಕ್ಷಣಿಕ ಕ್ಷೇತ್ರದಲ್ಲಿ ಗಣನೀಯವಾದ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ನಗರದ ಚವದಾಪೂರಿ ಹಿರೇಮಠ ನೂತನ ಶ್ರೀಗಳಾದ ಷ. ಬ್ರ. ರೇವಣಸಿದ್ದ ಸ್ವಾಮಿಗಳು ಧಾರ್ಮಿಕ ಕಾರ್ಯವನ್ನು ಸತತವಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಗುರುಬಸವನ ಮಠ ಆಧ್ಯಾತ್ಮಿಕ ಹಾಗೂ ಧಾರ್ಮಿಕ ಕ್ಷೇತ್ರಕ್ಕೆ ಸಂಪೂರ್ಣವಾಗಿ ಮುಡುಪಾಗಿಟ್ಟಿದೆ. ವಿರಕ್ತ ಮಠವೆಂದೆ ಪ್ರಖಾತಿ ಪಡೆದ ಈ ಮಠದ ಸ್ವಾಮಿಗಳು ಪಾಠ – ಪ್ರವಚನಗಳಲ್ಲಿ ಪ್ರಖಾತಿಪಡೆದವರಾಗಿದ್ದಾರೆ. ಜನರನ್ನು ಸಂದರ್ಶಿಸಿ, ಧಾರ್ಮಿಕ ತತ್ವ ಉಪದೇಶಗಳನ್ನು ನೀಡಿ, ಸದ್ಭಾವನಾ ಮಾರ್ಗದಲ್ಲಿ ನಡೆಯಬೇಕೆಂದು ಒತ್ತಿ ಹೇಳುತ್ತಿರುತ್ತಾರೆ. ರುದ್ರಾಕ್ಷಿ ಮಠದಲ್ಲಿ ಧಾರ್ಮಿಕ ಕಾರ್ಯಕಡಿಮೆ ನಡೆಯುತ್ತದೆ. ಭಕ್ತರೊಡನೆ ನಿಕಟವಾದ ಸಂಬಂಧವನ್ನು ಹೊಂದಿದ್ದರೂ, ಅತಿ ಕಡಿಮೆ ರೀತಿಯಲ್ಲಿ ಧಾರ್ಮಿಕ ಪ್ರಚಾರದ ಕಾರ್ಯ ನಡೆಯುತ್ತದೆ. ಸುಲಫಲ ಮಠವು ಇತ್ತೀಚಿಗೆ ಧಾರ್ಮಿಕ ಪ್ರಗತಿಯತ್ತ ತಮ್ಮ ಗಮನ ಹರಿಸಿ ಪಾಠ ಪ್ರವಚನಗಳನ್ನು ಶಿವಾನುಭವ ಗೋಷ್ಠಿಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ.

ರಾಯಚೂರ ಜಿಲ್ಲೆಯ ಸಿಂಧನೂರ ಶ್ರೀ ಕಲ್ಮಠವು ಪಾಠ ಪ್ರವಚನಗಳನ್ನು ಹಮ್ಮಿಕೊಳ್ಳುತ್ತಾರೆ. ಹಳ್ಳಿ – ಪಟ್ಟಣಗಳಿಗೆ ಸಂಚರಿಸಿ ಬಸವ ತತ್ವ ನಡೆ – ನುಡಿಗಳನ್ನು ಬೋಧಿಸುತ್ತಾರೆ. ಧಾರ್ಮಿಕ ಸಭೆ ಸಮಾರಂಭಗಳನ್ನು ಆಚರಿಸಿ, ನಾಡಿನ ವಿದ್ವಾಂಸರನ್ನು ಕರೆಯಿಸಿ, ಧಾರ್ಮಿಕ ಉಪದೇಶಗಳನ್ನು ನೀಡಿಸುತ್ತಾರೆ. ಮಸ್ಕಿಯ ಗಚ್ಚಿನ ಮಠವು ದಿನ ನಿತ್ಯ ಪಾಠ – ಪ್ರವಚನಗಳನ್ನು ಮಾಡಿ ಭಕ್ತರಲ್ಲಿ ಬಸವ ತತ್ವದ ಬೀಜವನ್ನು ಬಿತ್ತುತ್ತಿದ್ದಾರೆ. ಪ್ರತಿ ಅಮವಾಸೆಯೆಂದು ಶಿವಾನುಭವ ಗೋಷ್ಠಿಗಳನ್ನು ಏರ್ಪಡಿಸಿಕೊಂಡು ಬರುತ್ತಾರೆ. ಲಿಂಗಸೂರು ತಾಲೂಕಿನ ದೇವಭೂಷಣ ಹಿರೇಮಠವು ಧಾರ್ಮಿಕ ಪ್ರಚಾರದತ್ತ ಹೆಚ್ಚಿನ ವಲವು ತೋರುತ್ತಾರೆ. ಪ್ರತಿ ವಾರಕೊಮ್ಮೆ ಭಕ್ತರ ಮನೆಯಲ್ಲಿ ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಾರೆ.

ದೇವದುರ್ಗದ ಶ್ರೀ ಸಿದ್ದರಾಮೇಶ್ವರ ಸಿಖರ ಮಠವು ತನ್ನದೆಯಾದ ಧಾರ್ಮಿಕ ಉಪನ್ಯಾಸಗಳನ್ನು ಪ್ರತಿ ಹಳ್ಳಿ – ಪಟ್ಟಣಗಳಲ್ಲಿ ಹಮ್ಮಿಕೊಳ್ಳುತ್ತಾರೆ. ಈ ಭಾಗದ ನಾನಾ ಕಡೆ ಸಂಚರಿಸಿ ಧರ್ಮೋಪದೇಶ ನೀಡ್ರಿ ಅನುಷ್ಠಾನವನ್ನು ಕೈಗೊಂಡು,ಅಲ್ಲದೆ ಅನೇಕ ಧಾರ್ಮಿಕ ಕೇಂದ್ರಗಳನ್ನು ಸ್ಥಾಪನೆ ಮಾಡಿದ್ದಾರೆ. ಅವುಗಳ ಮುಖಾಂತರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತಾರೆ. ಗೊಬ್ಬೂರ ಬೂದಿ ಬಸವೇಶ್ವರ ಮಠ ವೀರಶೈವ ಧರ್ಮತತ್ವ ಪ್ರಚಾರಗೊಳ್ಳಲು ಪ್ರಯತ್ನಿಸುತ್ತಿದೆ. ಪ್ರತಿ ಅಮವಾಸೆಯೆಂದು ಶಿವಾನುಭವ ಗೋಷ್ಠಿ ಏರ್ಪಡಿಸುತ್ತಾರೆ. ಅಲ್ಲದೆ ಭಜನಾಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ಅದೇ ರೀತಿ ಹುಣ್ಣಿಮೆಯ ದಿವಸ ಅವರ ಶಾಖ ಮಠವಾದ ದೇವದುರ್ಗದಲ್ಲಿ ಶಿವಕೀರ್ತನೆಯ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾರೆ. ಬಸವ ಧರ್ಮದ ತತ್ವ ಜನ –ಮನಕ್ಕೆ ಮುಟ್ಟುವಂತೆ ಶ್ರಮಿಸುತ್ತಾರೆ, ಪ್ರತಿಯೊಂದು ಹಬ್ಬ–ಹರಿದಿನಗಳಲ್ಲಿ ಧಾರ್ಮಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ಸಾವಿರದೇವರ ಮಠವು ವೀರಶೈವ ಧರ್ಮ ಬೆಳೆಯಲು ನೆರವಾಗಿದ್ದಾರೆ. ಪುರಾತನ ಕಾಲದಿಂದಲೂ ವೀರಶೈವ ಧರ್ಮಕ್ಕೆ ಹೆಚ್ಚಿನ ಮನ್ನಣೆಯನ್ನು ಕೊಡುತ್ತಾಬಂದಿವೆ. ಧರ್ಮ ಪ್ರಸಾರವೇ ಮಠದ ಮೂಲ ಉದ್ದೇಶವಾಗಿದೆ. ಶ್ರಾವಣ ಮಾಸದಲ್ಲಿ ಸತತವಾಗಿ ಒಂದು ತಿಂಗಳವರೆಗೆ ಧಾರ್ಮಿಕ ಪ್ರವಚನವನ್ನು ನಡೆಸುತ್ತಾರೆ, ಅಲ್ಲದೆ ಕಾರ್ತಿಕ ಮಾಸದಲ್ಲಿ ವಿಶೇಷ ಪೂಜಾ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ.

ಜಾಲಹಳ್ಳಿಯ ಬೃಹನ್ಮಠದ ಶ್ರೀಗಳು ಹಳ್ಳಿ – ಪಟ್ಟಣಗಳಿಗೆ ಸಂಚರಿಸಿ ಪಾಠ – ಪ್ರವಚನಗಳ ಮುಖಾಂತರ ವೀರಶೈವ ಧರ್ಮ ಪ್ರಚಾರ ಮಾಡಿದರು.ಶ್ರಾಮಣ ಮಾಸದ ನಿಮಿತ್ಯ ಒಂದು ತಿಂಗಳವರೆಗೆ ಶ್ರೀ ಮಠದಲ್ಲಿ ಧಾರ್ಮಿಕ ಪುರಾಣವನ್ನು ಹೇಳುವರು. ಸಾವಿರಾರು ಭಕ್ತರು ಪಾಲ್ಗೊಳ್ಳುವರು. ಪ್ರತಿ ಹುಣ್ಣಿಮೆಯೆಂದು ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುವರು – ಶಿವ ಪುರಾಣ ಹೇಳುವರು. ಸರ್ವ ಧರ್ಮ ಚಿಂತನೆ ಗೋಷ್ಠಿಗಳನ್ನು ನಡೆಸುತ್ತಾರೆ. ಪ್ರಾಚೀನತೆಯನ್ನು ಹೊಂದಿದ ಮಠವು ಧರ್ಮ ಪ್ರಚಾರಕ್ಕೆ ಹೆಸರುವಾಸಿಯಾಗಿದೆ. ಮಾನವಿ ಕಲ್ಮಠವು ಪ್ರತಿ ಅಮವಾಸೆ ಹಾಗೂ ಹುಣ್ಣಿಮೆಯಲ್ಲಿ ವಿಶೇಷ ಪೂಜಾ ವಿಧಾನ ಹಾಗೂ ಚಿಕ್ಕ – ಪುಟ್ಟ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ಊಟಕನೂರು ಅಡವಿಸಿದ್ದೇಶ್ವರ ಮಠ, ರುದ್ರದೇವರ ಮಠ, ಅಡವಿ ಅವರೇಶ್ವರ ಮಠ, ನವಿಲಕಲ್ಲು ಹಿರೇಮಠ, . . . . ಹೀಗೆ ಕೆಲವು ಮಠಗಳು ವಿರಶೈವ ಧರ್ಮ ತತ್ವಗಳ ಪ್ರಚಾರದಲ್ಲಿ ಸಣ್ಣ – ಪುಟ್ಟ ಕಾರ್ಯಕ್ರಮಗಳ ಕೊಡುಗೆಗಳನ್ನು ನೀಡುತ್ತಲಿವೆ.

ಕೊಪ್ಪಳ ಗವಿಮಠವು ವೀರಶೈವ ಧರ್ಮ ಪ್ರಚಾರದ ಜೀವಂತ ಪ್ರವಾಹವಾಗಿದೆ. ವೀರಶೈವ ಧರ್ಮವು ಅಂತರಂಗ, ಬಹಿರಂಗಗಳ ಸಮನ್ವಯವಾಗಿದೆಯೆಂದು ಕೊಪ್ಪಳ ಮಠವು ತಿಳಿಸಿಕೊಡುತ್ತದೆ. ಪುರಾತನ ಕಾಲದಿಂದ ಧರ್ಮವನ್ನು ಎತ್ತಿ ಹಿಡಿದ ಮಠವಾಗಿದೆ. ಹಳ್ಳಿ – ಪಟ್ಟಣಗಳಲ್ಲಿ ಧಾರ್ಮಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಶರಣರ ತತ್ವ ವಚನಗಳನ್ನು ತಿಳಿಸಿ ಹೇಳುತ್ತಾರೆ. ನೂತನ ಶ್ರೀಗಳಾದ ಶಾಂತವೀರ ಮಹಾಸ್ವಾಮಿಗಳು ಮಠಗಳಲ್ಲಿಯೇ ಧಾರ್ಮಿಕ ಗೋಷ್ಠಿಗಳನ್ನು ನಡೆಸುತ್ತಾರೆ. ಸಾವಿರಾರು ಭಕ್ತರೊಡನೆ ಈ ಮಠವು ಸಂಬಂಧ ಬೆಳೆಸಿದೆ. ಮಠದ ಹಿಂಭಾಗದಲ್ಲಿ ಎರಡು ಪವಿತ್ರ ಕೊಳಗಳಿವೆ. ಮಧ್ಯದಲ್ಲಿ ಕೈಲಾಸ ಮಂದಿರ ಹಾಗೂ ಅನುಭವ ಮಂಟಪಗಳನ್ನು ನಿರ್ಮಿಸಿದ್ದಾರೆ. "ತನ್ನ ಪ್ರಾರಂಭಿಕ ಕಾಲದಿಂದ ಇಲ್ಲಿಯವರೆಗೆ ಕೊಪ್ಪಳ ಶ್ರೀ ಗವಿಮಠವು ಧಾರ್ಮಿಕ ಹಾಗೂ ಶೈಕ್ಷಣಿಕ ಪ್ರಚಾರ ಕಾರ್ಯದಲ್ಲಿ ನಿರಂತವಾಗಿದ್ದು, ಕರ್ನಾಟಕದಲ್ಲಿ ಪ್ರಾಚೀನ ಹಾಗೂ ಸಾಂಸ್ಕೃತಿಕ ಹಿರಿಮೆಯನ್ನು ಪಡೆದ ಮಠಗಳಲ್ಲೊಂದಾಗಿದೆ"[೨] ವಿಶೇಷ ಇಂದಿಗೂ ಒಂದಿಲ್ಲೊಂದು ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಾರೆ.

ಗಂಗಾವತಿ ಶ್ರೀ ಕೊಟ್ಟೂರೇಶ್ವರ ಕಲ್ಮಠವು ವೀರಶೈವ ಧರ್ಮ ತತ್ವಗಳ ಪ್ರಚಾರಗೊಳಿಸಿದ ಮಠಗಳಲ್ಲಿ ಒಂದಾಗಿದೆ. ಶ್ರೀಗಳು ಶರಣರ ತತ್ವಚಾರಣೆಯನ್ನು ವ್ಯವಸ್ಥಿತವಾಗಿ ಪ್ರಚಾರಗೊಳಿಸಿದರು. ಶಿವಾನುಭವ ಗೋಷ್ಠಿಗಳನ್ನು ನಡೆಸಿ ಅಚ್ಚ ಶರಣರ ತತ್ವಗಳನ್ನೇ ಜನ – ಮನಗಳಿಗೆ ಮುಟ್ಟುವಂತೆ ಬೋಧಿಸುತಿದ್ದರು. ಭಕ್ತರಲ್ಲಿ ಧಾರ್ಮಿಕ ಭಾವನೆ ಮುಡುವಂತೆ ಪಾಠ – ಪ್ರವಚನಗಳನ್ನು ಹೇಳುತ್ತಾರೆ. ಶ್ರಾವಣ ಮಾಸದಲ್ಲಿ ವಿಶೇಷ ಕಾರ್ಯಕ್ರಮವನ್ನು ಹಮ್ಮಿಕೊಂಡು ನಾಡಿನ ಹೆಸರಾಂತ ವಿದ್ವಾಂಸರನ್ನು ಕರೆಯಿಸುತ್ತಾರೆ. ಅವರ ಮುಖಾಂತರ ಧಾರ್ಮಿಕ ಉಪದೇಶ, ಉಪನ್ಯಾಸಗಳನ್ನು ಏರ್ಪಡಿಸುತ್ತಾರೆ. ಯಲಬರ್ಗಾ ತಾಲೂಕಿನ ಕದುರೆಮೋತಿ ಗ್ರಾಮದ ವೀರಕ್ತಮಠವು ಧಾರ್ಮಿಕ ಕೊಡುಗೆಗಳ ಕೇಂದ್ರ ಬಿಂದುವಿನಂತಿದೆ. ಈ ಮಠದಲ್ಲಿ ಅಧಿಕಾರವನ್ನು ವಹಿಸಿಕೊಂಡ ಎಲ್ಲ ಸ್ವಾಮಿಗಳು ಮಠದ ಧಾರ್ಮಿಕ ಕಾರ್ಯ ಮಾಡಿದವರಿದ್ದಾರೆ. ಇಂದಿನ ಶ್ರೀಗಳಾದ ಮ. ನಿ.ಪ್ರ. ವಿಜಯ ಮಹಾಂತ ಸ್ವಾಮಿಗಳು ಧಾರ್ಮಿಕ ಕಾರ್ಯಕ್ರಮವನ್ನು ನಡೆಸಿಕೊಂಡು ಬರುತ್ತಿದ್ದಾರೆ. ಭಕ್ತರ ಮನೆಯಲ್ಲಿ "ಧಾರ್ಮಿಕ ಜ್ಯೋತಿ" ಎನ್ನುವ ಕಾರ್ಯಕ್ರಮಗಳನ್ನು ಇರಿಸಿ ಅಲ್ಲಿ ಧರ್ಮೋಪದೇಶವನ್ನು ನೀಡುತ್ತಿದ್ದಾರೆ.

ಯಲಬರ್ಗಾ ಹಿರೇಮಠವು ಪ್ರಾಚೀನ ಕಾಲದಿಂದ ಧಾರ್ಮಿಕ ಪರಂಪರೆಯಲ್ಲಿ ಬೆಳೆದು ಬಂದಂತಹದು. ಶ್ರಾವಣ ಮಾಸದಲ್ಲಿ ನಿತ್ಯ ಪ್ರವಚನವನ್ನು ನಡೆಸುತ್ತಾರೆ. ಮಹಾ ಗಣರಾಧನೆಯ ಕೊನೆಯ ದಿವಸ ಅಡ್ಡ ಪಲ್ಲಕ್ಕಿ ಉತ್ಸವವನ್ನು ಏರ್ಪಡಿಸುತ್ತಾರೆ. ಕಾರ್ತಿಕ ಮಾಸದ ವಾರದಲ್ಲಿ ವಿಶೇಷ ಧಾರ್ಮಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ದಸರಾ ಸಮಯದಲ್ಲಿ ಅಂದರೆ ವಿಜಯದಶಮಿಯಲ್ಲಿ ಒಂಬತ್ತು ದಿವಸಗಳವರೆಗೆ ದೇವಿ ಪುರಾಣವನ್ನು ಬಿತ್ತರಿಸಿ ಪಾಠ–ಪ್ರವಚನಗಳನ್ನು ಹಮ್ಮಿಕೊಳ್ಳುತ್ತಾರೆ. ಕುಷ್ಟಗಿ ಮದ್ನಾನೆ ಹಿರೇಮಠ ಚಳಗೇರಿ ಹಿರೇಮಠ ನಿಡಸೋಸಿ ಹಿರೇಮಠ, ಪುರ್ತಗೇರಿ ಹಿರೇಮಠ, ಆಳವಂಡಿ ಸಿದ್ದೇಶ್ವರ ಮಠ, ಎತ್ತಿನಹಟ್ಟಿ ವಿರಕ್ತ ಮಠ . . . . . ಹೀಗೆ ಮುಂತಾದ ಮಠಗಳು ವೀರಶೈವ ಧರ್ಮದ ಚಿಕ್ಕ – ಪುಟ್ಟ ಧಾರ್ಮಿಕ ಕಾರ್ಯಗಳನ್ನು ಮಾಡುತ್ತಲಿವೆ. ತಮ್ಮ ತಮ್ಮ ಮಠಗಳಲ್ಲಿ ತಮಗೆ ಅನುಕೂಲವಾದಂತೆ ಧಾರ್ಮಿಕ ಗೋಷ್ಠಿಗಳನ್ನು ಏರ್ಪಡಿಸಿಕೊಂಡು ಬರುತ್ತಾರೆ.

೧.೨. ಧರ್ಮ ರಕ್ಷಣೆ

ಬಸವಾದಿ ಶರಣರು ಇಟ್ಟುಹೋದ ವಚನ ಸಾಹಿತ್ಯದ ಮೌಲ್ಯವನ್ನು ರಕ್ಷಿಸಿದ ಕೀರ್ತಿ ಮಠಗಳದ್ದು. ಹಳ್ಳಿ – ಪಟ್ಟಣಗಳಿಗೆ ಸಂಚರಿಸಿ ಯುವಕರಲ್ಲಿ ಧರ್ಮ ಜಾಗೃತಿಯ, ಸಂಘಟನೆಯನ್ನು ಮೂಡಿಸಿದರು. ಅಲ್ಲದೆ ಧಾರ್ಮಿಕ ಕೇಂದ್ರಗಳನ್ನು ಸ್ಥಾಪಿಸಿ, ಅದರಲ್ಲಿ ಬಸವ ತತ್ವದ , ಮಹತ್ವವನ್ನು ತಿಳಿಸಿ ಧರ್ಮ ರಕ್ಷಿಸುವರು. ಭಾಲ್ಕಿಯ ಹಿರೇಮಠವು, ವೀರಶೈವ ಧರ್ಮ ಸಂಘಟನೆ ಹಾಗೂ ಧರ್ಮ ರಕ್ಷಣೆಯ ಬೆನ್ನೆಲುಬಾಗಿದ್ದೆ. ಶರಣರ ನಾಡಾದ ಬಸವಕಲ್ಯಾಣದಲ್ಲಿ ಅನುಭವ ಮಂಟಪದ ಕಾರ್ಯ ಮಧ್ಯ ಸ್ಥಗಿತಗೊಂಡಿತ್ತು. ಇದನ್ನು ಕಂಡು ಭಾಲ್ಕಿ ಶ್ರೀಗಳಾದ ಲಿಂಗೈಕ್ಯ ಶ್ರೀ. ಮ. ಘ. ಚ. ಚನ್ನಬಸವ ಪಟ್ಟದ್ದೇವರು ಧರ್ಮದ ಸ್ವಾಭಿಮಾನವೆಂದರಿತು ಅರ್ಧಕ್ಕೆ ನಿಂತ ಅನುಭವ ಮಂಟಪ ಕಟ್ಟಲು ಮುಂದಾದರು, ಅನುಭವ ಮಂಟಪ ಕಟ್ಟಡದ ಕಾರ್ಯ ಮುಗಿಸಿ ಜೀರ್ಣೋದ್ಧಾರ ಮಾಡಿದರು. ಧಾರ್ಮಿಕ ತತ್ವಗಳನ್ನು ಸಂರಕ್ಷಿಸುತಿದ್ದಾರೆ. ಅನೇಕ ಧಾರ್ಮಿಕ ಚಟುವಟಿಕೆಗಳನ್ನು ನಡೆಸಿ ವೀರಶೈವ ಧರ್ಮವನ್ನು ಉಳಿಸಿ ಬೆಳೆಸಿದರು. ಭಾಲ್ಕಿ ಶ್ರೀಗಳು ಮಾಡಿರುವ ಧಾರ್ಮಿಕ ಕಾರ್ಯ ಇದು ಕರ್ನಾಟಕದಲ್ಲಿಯೇ ಅಲ್ಲದೆ ನೆರೆ ರಾಜ್ಯಗಳಾದ ಆಂಧ್ರ ಪ್ರದೇಶ ಹಾಗೂ ಮಹಾರಾಷ್ಟ್ರ ಗಳಲ್ಲಿಯೂ ,ಜನರ ಮೆಚ್ಚುಗೆ ಪಡೆ ಯಿತ್ತು. ''ಅನುಭವ ಮಂಟಪಕ್ಕೆ ಜಯವಾಗಲಿ

ಭಾಲ್ಕಿ ಅಪ್ಪನವರ ಸರ್ವ ಸಂಕಲ್ಪ ನೆರವೇರಲಿ" ಎಂದು ಅಲ್ಲಿಯ ಜನಪದ ಕವಿಯೊಬ್ಬ ಹಾಡಿ ಹೋಗಳಿರುವುದು ಸತ್ಯವಾಗಿದೆ.

"ಅನುಭವ ಮಂಟಪವು" ಒಂದು ಧಾರ್ಮಿಕ ಕೇಂದ್ರವಾಗಿದೆ. ಅಲ್ಲಿ ಎಲ್ಲ ಜನರಿಗೆ ಮುಕ್ತ ಅವಕಾಶವಿತ್ತು. ದಾಸಿ ಪುತ್ರನಾಗಲಿ, ವೇಶ್ಯಾ ಪುತ್ರನಾಗಲಿ, ಶಿವದೀಕ್ಷೆಯಾದ ಬಳಿಕ ಸಾಕ್ಷಾತ್ ಶಿವನೆಂದು ವಂದಿಸಬೇಕೆಂದು ಶರಣರ ತತ್ವವಾಗಿದೆ. ಅಲ್ಲದೆ ಜೀವನ ಮೌಲ್ಯವಾಗಿದೆ. ಡಾ: ದೆ. ಜವರೇಗೌಡ ಹೀಗೆ ಹೇಳುತ್ತಾರೆ, " ಅನುಭವ ಮಂಟಪದ ಗೋಷ್ಠಿಗಳಲ್ಲಿ ವರ್ಗ ಜಾತಿ ಭೇದಗಳಿಲ್ಲದೆ ಸಕಲರು ಸಮಾನ ಸ್ಪಂದರಾಗಿ ಸೇರಿ ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದ ಸಂಗತಿ ಎಲ್ಲ ಕಾಲದ ಎಲ್ಲ ದೇಶಗಳ ಜನ ಗಮನಿಸುವಂಥದು".[೧೩] ಇಲ್ಲಿ ಯಾರು ಮೇಲು ಕೀಳೆಂಬ ಭಾವನೆ ಇದ್ದಿರಲಿಲ್ಲ. ಯಾವುದೇ ಒಂದು ವಿಷಯ ನಿರ್ಣಯ ತೆಗೆದುಕೊಳ್ಳಬೇಕಾದರೆ ಅದಕ್ಕೆ ಒರೆ ಹಚ್ಚಿ ಅಂದರೆ, ಚರ್ಚೆಗಳನ್ನು ಮಾಡಿದ ನಂತರ ಕೊನೆಯ ನಿರ್ಣಯಕ್ಕೆ ಬರುತ್ತಿದ್ದರು. ಈ ಅನುಭವ ಮಂಟಪ ಮಠವೆಂದೆ ಪ್ರಖ್ಯಾತಿ ಪಡೆದು ಅನೇಕ ಧಾರ್ಮಿಕ ಕೊಡುಗೆಗಳನ್ನು ನೀಡಿದೆ.

" ಕಲ್ಯಾಣ ನಾಡಿನ ಬಸವ ಚೇತನ ನೋಡಿರೋ
ಭಾಲ್ಕಿ ಚನ್ನಬಸವ ಪಟ್ಟದ್ದೇವರ
ಹನ್ನೆರಡನೆಯ ಶತಮಾನದ ಶರಣ ಚೈತನ್ಯವೇ
ಇಪ್ಪತ್ತನೆಯ ಶತಮಾನದಿ ಧರೆಗಿಳಿದು ಬಂದಿಹುದು
ಕಲ್ಯಾಣದಲ್ಲಿ ನೂತನ ಅನುಭವ ಮಂಟಪವ
ತನ್ನ ಕಾರ್ಯಕಷ್ಟ ಮಾಡಿ ನಿರ್ಮಿಸಿಹುದು
ಇಂತಹ ಶರಣ ಚೇತನದ ದರ್ಶನ ಪಡೆದು
ಧನ್ಯನಾದೆನಯ್ಯಾ ಜಗಜ್ಯೋತಿ ಬಸವೇಶ್ವರ ".[೧೪]

– ಎಂಬ ವಚನದ ಮೂಲಕ ಡಾ: ಸಿದ್ದಣ್ಣ ಲಂಗೊಟಿಯವರು ಭಾಲ್ಕಿ ಶ್ರೀಗಳ ಭಾವ ಭಕ್ತಿಗಳನ್ನು ಕಂಡುಂಡ ಅನುಭವ ಮುಖಾಂತರ ವಚನ ವೊಂದರಲ್ಲಿ ವ್ಯಕ್ತಪಡಿಸಿದ್ದಾರೆ. ಈ ವಚನವು, ಹನ್ನೆರಡನೆ ಶತಮಾನದ ಬಸವಾದಿ ಶರಣರನ್ನೆ ಹೋಲುವಂತಿದೆ. ಭಾಲ್ಕಿ ಶ್ರೀಗಳಿಗೂ ಅವಲಂಬಿಸಿರುತ್ತದೆ. ಸರಳ ಸಕಾರತೆಯ ಮೂರ್ತಿಯಾದ ಶ್ರೀಗಳು "ಅನುಭವ ಮಂಟಪ " ಎನ್ನುವ ಬೃಹತ್ ಕಾರ್ಯವನ್ನು ಮಾಡಿದ್ದಾರೆ. ಇಂತಹ ಶರಣರು ಈ ಭಾಗದಲ್ಲಿ ದೊರೆತದ್ದು ಭಾಗ್ಯ. ಅಲ್ಲದೆ ಭಕ್ತರ ದರ್ಶನಕೆಂದೆ ಪರಮಾತ್ಮ

ಬರದಂತೆ ಎಚ್ಚರ ವಹಿಸಬೇಕು. ಗುರು – ಜಂಗಮರೆಂದು ಭೇದವನೆಣಿಸಬಾರದು. ಎಲ್ಲರು ಧರ್ಮದ ಸಂಸ್ಕೃತಿಯಲ್ಲಿಯೇ ಹುಟ್ಟಿ ಬೆಳೆಯುತ್ತಿದ್ದೇವೆ. ಮಠಾಧೀಶರು ಕೇವಲ ಭಕ್ತರೊಡನೆ ಸಂಬಂಧ ಹೊಂದಿದರೆ ಸಾಲದು, ಧರ್ಮದ ಜಾಗೃತಿ ಮಾಡಬೇಕು- ಎನ್ನುವ ವಾಣಿ ಜನಮನವಾಗಿದೆ. ಶ್ರೀ ಶಿವಾನಂದ ಮಹಾಸ್ವಾಮಿಗಳವರು ರಚಿಸಿದ ವಚನಗಳೆಲ್ಲವು ಧಾರ್ಮಿಕ ನೆಲೆಯಲ್ಲಿಯೇ ಹುಟ್ಟಿಕೊಂಡಿವೆ. ಧರ್ಮದ ಸರ್ವಾಂಗಿಣ ಉನ್ನತ್ತಿಗಾಗಿ ಶ್ರಮಿಸುವ ಸ್ವಾಮಿಗಳಿವರು. "ಶ್ರೀಗಳಿಗೆ ಬಸವಣ್ಣನವರಲ್ಲಿ ಅತಿವ ಭಕ್ತಿ. ಸಂಗ್ರಹದ ಬಹುಪಾಲು ವಚನಗಳನು ಬಸವಣ್ಣನವರನ್ನು ಬಸವ ಧರ್ಮವನ್ನು ಕುರಿತೆ ಇವೆ. ಶ್ರೀಗುರು ಬಸವ ಲಿಂಗಾಯ ನಮಃ ಎಂಬ ಮಂತ್ರವನ್ನು ಎನ್ನ ರೊಮ ರೋಮಗಳಲ್ಲಿ ಇರಸಯ್ಯಾ ಎಂಬುದರ ಪ್ರಾರ್ಥನೆ "ಬಸವಣನೇ ಪತಿ ತಾನೆ ಸತಿ" ಎಂಬುದರ ವಿಶ್ವಾಸ ಬಸವಣ್ಣನೈ ವಿಶ್ವಗುರು ಎಂಬುದರ ಶ್ರದ್ಧೆ, ವಿಶ್ವಭರಿತ ಬಸವಣ್ಣನವರು ಎಂಬುದರ ಕಲ್ಪನೆ, ಲಿಂಗವಂತ ಧರ್ಮವು ಬಸವಣ್ಣನ ಕರುಣೆ ಎಂಬವುದರ ನಿಲುವು. ಅವರ ಈ ಬಸವ ಭಕ್ತಿಯ ಹೊನಲಾಗಿ ಹರಿದೆದೆ".[೧೭] ವಿಶಾಲ ಹೃದಯದ ಶ್ರೀಗಳು ಧರ್ಮ ರಕ್ಷಣೆ, ಸಂಘಟನೆಗಾಗಿ ಹಗಲಿರಳು ಶ್ರಮಿಸುವರು ಎಂಬುದು ಮನವರಿಕೆಯಾಗುತ್ತದೆ.

ವೀರಶೈವ ಧರ್ಮವು ಇಂದು ಹೊಸ ಹೊಸ ಗಂಡಾಂತರಗಳನ್ನು ಎದುರಿಸುತ್ತಿದೆ. ಧರ್ಮಕ್ಕೆ ಕಳಂಕ ತರುವಂಥಹ ಚಟುವಟಿಕೆಗಳ ವಿರುದ್ಧ ಹೋರಾಡುವಲ್ಲಿ ಶ್ರೀಗಳು ಪ್ರಥಮ ಶ್ರೇಣಿಯಲ್ಲಿದ್ದಾರೆ. ಉಪವಾಸ,ಸತ್ಯಾಗ್ರಹಗಳನ್ನು, ಮಾಡಿ ಧರ್ಮ ರಕ್ಷಣೆಯ ಕಾಯಕದಲ್ಲಿ ತೊಡಗುತ್ತಾರೆ. ಎಂಥಹ ತ್ಯಾಗಕ್ಕಾಗದರೂ, ಸಿದ್ಧರಿದ್ದಾರೆ. ಚುಳುವಳಿಯ ಹೆಸರಿನಲ್ಲಿ ಬಿದಿಗಿಳಿದು ಭಕ್ತರೋಡನೆ ಹೋರಾಟ ಮಾಡಿ ಧರ್ಮವನ್ನು ರಕ್ಷಿಸುತ್ತಾರೆ.

ಹಾರಕೂಡ ಬೃಹನ್ಮಠದ ನೂತನ ಶ್ರೀಗಳಾದ ಚನ್ನವೀರ ಶಿವಾಚಾರ್ಯರು ಧಾರ್ಮಿಕ ಸಂಘಟನೆ ಹಾಗೂ ಸಂರಕ್ಷಣೆಗಳಿಗೆ ಮಹತ್ವ ಕೊಡುತ್ತಾ ಬಂದಿದ್ದಾರೆ. ಮಠದ ಆವರಣದಲ್ಲಿಯೇ ಒಂದು "ಅನುಭವ ಮಂಟಪ" ವನ್ನು ಕಟ್ಟಿ ಅಲ್ಲಿ ಧಾರ್ಮಿಕ ಪ್ರವಚನ ಗೋಷ್ಠಿಗಳನ್ನು ಏರ್ಪಡಿಸಿಕೊಂಡು ಬರುತ್ತಾರೆ. ಪ್ರಮುಖ ವಿದ್ವಾಂಸರನ್ನು ಕರೆಯಿಸಿ ಧರ್ಮ ರಕ್ಷಣೆಯ ಉಪನ್ಯಾಸಗಳನ್ನು ಕೊಡಿಸುತ್ತಾರೆ. "ಧರ್ಮ ಸೇವಾ ಸಮಿತಿ" ಯನ್ನು ರಚನೆ ಮಾಡಿದ್ದಾರೆ. ಇದರ ಮುಖಾಂತರ ವೀರಶೈವ ಧರ್ಮದ ರಕ್ಷಣೆ ಮಾಡುತಿದ್ದಾರೆ. ವೀರಶೈವ ಧರ್ಮಕ್ಕೆ ಯಾವುದೇ ರೀತಿಯ ಧಕ್ಕೆ ಬರದಂತೆ ನೋಡಿಕೊಳ್ಳುತ್ತಾರೆ. ಧಾರ್ಮಿಕ ರಕ್ಷಣೆಯಲ್ಲಿ ಭಾತಂಬ್ರಾ ಶ್ರೀಗಳು ಇತ್ತೀಚಿಗೆ ಗಮನವನ್ನು ಹರಿಸುತ್ತಿದ್ದಾರೆ. ಗಡಿಗೌಡಗಾಂವ ಹಿರೇಮಠದ ಸ್ವಾಮಿಗಳಾದ ಶಾಂತವೀರ

ಶಿವಾಚಾರ್ಯರು ಸಹ ತಮ್ಮ ಮಠದಲ್ಲಿ ಧರ್ಮ ಸಂಘಟನೆಯ ಬಗ್ಗೆ ಪ್ರವಚನವನ್ನು ಹೇಳುತ್ತಾರೆ. ಅದರ ಮುಖಾಂತರ ಧರ್ಮದ ಜಾಗೃತಿಯಾಗಬೇಕೆಂದು ಭಕ್ತರಲ್ಲಿ ಭಕ್ತಿ ಮೂಡಿಸುತ್ತಾರೆ. ನಿಡವಂಚಾ ಚೌಕಿ ಮಠವು ಧರ್ಮ ಸಂಘಟನೆಯ ನಿಮಿತ್ಯ ಹಗಲಿರಳು ದುಡಿಯುತ್ತಿದೆ. ಯುವಕರಲ್ಲಿ ಸಂಘಟನೆ ಸಮಿತಿಗಳನ್ನು ಏರ್ಪಡಿಸಿ, ಅದರ ಮುಖಾಂತರ ಧರ್ಮ ಜಾಗೃತಿಯನ್ನು ಮಾಡುತ್ತಾರೆ. ಏಮಲಖೇಡ ಹಿರೇಮಠವು, ಚಿಟಗುಪ್ಪ ಅಯ್ಯಪ್ಪನ ಮಠ, ಖೇಳಗಿ ವಿರಕ್ತ ಮಠ, ಹಿರೇನಾಗಾವ ವಿರಕ್ತಮಠ, ಮಂಠಾಳ ವಿರಕ್ತಮಠ, ಮುಧೋಳ ಹಿರೇಮಠ, ತಾಜಾಕೂಸನೂರ ವಿರಕ್ತ ಮಠ. ಚಾಂಬೋಳ ಹಿರೇಮಠ, ಹೆಡಗಾಪೂರ ಹಿರೇಮಠಗಳು. ಸಣ್ಣ – ಪುಟ್ಟ ಧಾರ್ಮಿಕ ಕಾರ್ಯಗಳನ್ನು ಮಾಡಿ, ಅದರ ಮುಖಾಂತರ ಧರ್ಮದ ಜ್ಯೋತಿಯ ತತ್ವಗಳು ಬೆಳೆಗಿಸಲು ಶ್ರಮಿಸುತ್ತಿವೆ.

ನಾಲವಾರ ಶ್ರೀ ಕೋರಿಸಿದ್ದೇಶ್ವರ ಮಠವು ಧರ್ಮ ಸಂಘಟನೆಯ ಪ್ರತಿಕವಾಗಿದೆ. ಅಲ್ಲಿನ ಶ್ರೀಗಳಾದ ಷ.ಬ್ರ.ಶ್ರೀ ತೋಟೇಂದ್ರ ಶಿವಾಚಾರ್ಯರು ಧಾರ್ಮಿಕ ಗೋಷ್ಠಿಗಳನ್ನು ಉಪನ್ಯಾಸಗಳನ್ನು ಏರ್ಪಡಿಸಿ, ಅದರ ಮುಖಾಂತರ ಧರ್ಮ ರಕ್ಷಣೆಯ ವಾಣಿಯನ್ನು ಜನರಿಗೆ ಬಿರುತ್ತಿರುತ್ತಾರೆ. ಧರ್ಮವು ಎಲ್ಲ ವರ್ಗದ ಜನರಿಗೆ ಅವಶ್ಯಕವಾಗಿದೆ. ಅದನ್ನು ಕಾಪಾಡಿಕೊಂಡು ಹೋಗುವ ಹೋಣೆ ನಮ್ಮ ನಿಮ್ಮದೆಲ್ಲವು ಇದೆ. ಎಂದು ಪ್ರವಚನಗಳ ಮುಖಾಂತರ ಒತ್ತಿ ಹೇಳುತ್ತಾರೆ. ಶಿವಾನುಭವ ಮಂಟಪವನ್ನು ಶ್ರೀ ಮಠದ ಆವರಣದಲ್ಲಿಯೇ ಸ್ಥಾಪಿಸಿ ಅದರಡಿಯಲ್ಲಿ ಅನೇಕ ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಾರೆ. ಭರತನೂರ ವಿರಕ್ತಮಠವು ಧರ್ಮ ರಕ್ಷಣೆಯ ಸಲುವಾಗಿ ಮುಂದಾಳತ್ವವನ್ನು ವಹಿಸಿಕೊಂಡಿದೆ. ಧರ್ಮಕ್ಕೆ ಯಾವುದೆ ರೀತಿಯ ಕಳಂಕ ಗಂಡಾಂತರಗಳನ್ನು ಬಂದರೆ. ಸತತ ಹೊರಾಟದಲ್ಲಿ ತೊಡಗಿ ತತ್ವಗಳನ್ನು ರಕ್ಷಿಸಿಕೊಂಡು ಬರುವ ಕಾರ್ಯ ಶ್ರೀಮಠಕ್ಕಿದೆ. ನೂತನ ಶ್ರೀಗಳಾದ ಮ.ನಿ.ಪ್ರ. ಗುರು ನಂಜೇಶ್ವರ ಮಹಾಸ್ವಾಮಿಗಳವರು ಹಳ್ಳಿ – ಪಟ್ಟಣಗಳಿಗೆ ಲೆದಾಡಿ ಧಾರ್ಮಿಕ ರಕ್ಷಣೆಯ ಬೀಜವನ್ನು ಬಿತ್ತುತ್ತಿದ್ದಾರೆ.

ಗುಲಬರ್ಗಾ ನಗರದ ಶ್ರೀ ಶರಣಬಸವೇಶ್ವರ ಸಂಸ್ಥಾನ ಮಠವು ಧರ್ಮ ರಕ್ಷಣೆಗಾಗಿ ಸಾಂಸ್ಕೃತಿಕ, ಕಾರ್ಯಕ್ರಮಗಳನ್ನು ಏರ್ಪಡಿಸುವರು. ಪಾಠ – ಪ್ರವಚನಗಳ ಮುಖಾಂತರ ಧರ್ಮ ರಕ್ಷಣೆಯನ್ನು ಜನರಲ್ಲಿ ಮೂಡಿಸುವರು. ವೀರಶೈವ ಧರ್ಮದ ತತ್ವ ಪರಂಪರೆ ಹಾಗೂ ಸಂಸ್ಕೃತಿಯನ್ನು ಕಾಪಾಡಿಕೊಂಡು ಬರುವ ಕೀರ್ತಿ ಶ್ರೀಮಠಕ್ಕಿದೆ. ನಗರ ಚವದಾಪೂರಿ ಹಿರೇಮಠವು ಇತ್ತೀಚಿನ ಶ್ರೀಗಳಾದ ರೇವಣಸಿದ್ದಪ್ಪ ಸ್ವಾಮಿಗಳ ನೇತೃತ್ವದಲ್ಲಿ ಕೆಲವು ಧಾರ್ಮಿಕ ಕಾರ್ಯಗಳನ್ನು ಮಾಡಿ ಧರ್ಮ ರಕ್ಷಣೆಯಲ್ಲಿ ತೊಡಗಿದೆ. ಗುರುಬಸವನ ವಿರಕ್ತ

ಮಠವು, ಸುಲಫಲ ಮಠವು, ಧಾರ್ಮಿಕ ರಕ್ಷಣೆಯ ಸಲುವಾಗಿ ಸತತವಾಗಿ ತನ್ನದೆ ಮಿತಿಯಲ್ಲಿ ಕಾರ್ಯವನ್ನು ಮಾಡುತ್ತಿದ್ದಾರೆ. ಭಕ್ತರೊಡನೆ ನಿಕಟವಾದ ಸಂಬಂಧವನ್ನಿಟ್ಟಕೊಂಡಿದೆ. ಗುಲಬರ್ಗಾ ಜಿಲ್ಲೆಯಲ್ಲಿ ಇನ್ನು ಹಲುವಾರು ವೀರಶೈವ ಮಠಗಳಿದ್ದರೂ, ಧರ್ಮ ರಕ್ಷಣೆಯ ಅಕಾಂಕ್ಷೆಗಳು ತನ್ನದೆಯಾದ ಮಿತಿಯಲ್ಲಿ ಸೇವೆ ಸಲ್ಲಿಸುತ್ತಿವೆ.

ರಾಯಚೂರ ಜಿಲ್ಲೆಯ ಸಿಂದನೂರ ಕಲ್ಮಠವು ಪಾಠ – ಪ್ರವಚನಗಳ ಮುಖಾಂತರ ಧರ್ಮ ರಕ್ಷಣೆಯನ್ನು ಮಾಡುತ್ತಿದೆ. ಹಳ್ಳಿ – ಪಟ್ಟಣಗಳಿಗೆ ಸಂಚರಿಸಿ,ವೀರಶೈವ ಧರ್ಮದ ತತ್ವ, ನಡೆ, ನುಡಿಗಳನ್ನು ಪರಿ ಪಾಲಿಸಿಕೊಂಡು ಬರಬೇಕು ಎಂದು ಶ್ರೀಗಳ ವಾಣಿ. ಮಸ್ಕಿಯ ಗಚ್ಚಿನ ಮಠ, ದೇವರಭೂಪೂರ ಹಿರೇಮಠಗಳು ಸಹ ಧಾರ್ಮಿಕ ರಕ್ಷಣೆಯಲ್ಲಿ ಪಾಲುದಾರರಾಗಿದ್ದಾರೆ. ದೇವದುರ್ಗ ಶ್ರೀ ಸಿದ್ಧರಾಮೇಶ್ವರ ಮಠವು ವೀರಶೈವ ಧರ್ಮ ರಕ್ಷಣೆಯ ಕೆಂದ್ರದಂತಿದೆ. ಪ್ರತಿಯೊಂದು ಹಳ್ಳಿ – ಹಳ್ಳಿಗಳಲ್ಲಿ ಬಸವಣ್ಣನವರ ಮೂರ್ತಿ ಸ್ಥಾಪಿಸಿ, ಬಸವಣ್ಣನವರ ಸಮಕಾಲಿನ ಶರಣರ ತತ್ವಗಳನ್ನು ಪರಿಪಾಲಿಸಿಕೊಂಡು ಬರುತ್ತಿದ್ದಾರೆ. ಶ್ರೀ ಮಠದ ಅವರಣದಲ್ಲಿ ಅನುಭವ ಮಂಟಪವನ್ನು ರಚಿಸಿ ಅದರಡಿಯೇ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದಾರೆ.

ಜಾಲಹಳ್ಳಿ ಹಿರೇಮಠವು ಪಾಠ–ಪ್ರವಚನಗಳಲ್ಲಿ ಎತ್ತಿದ ಕೈಯಾಗಿದೆ. ನೂತನ ಶ್ರೀಗಳಾದ ವಿದ್ಯಾನಂದರು ವಿಧ್ಯಾಮಾನ್ಯ ಶಿವಾಭಿನವ ಶ್ರೀ ಜಯಶಾಂತಲಿಂಗೇಶ್ವರ ಸ್ವಾಮಿಗಳು, ಮಠದಲ್ಲಿ ಅನುಭವ ಮಂಟಪವನ್ನು ಸ್ಥಾಪಿಸಿ ಸಮಿತಿಯನ್ನು ನೇಮಿಸಿ, ಅದರ ಮುಖಾಂತರ ಧಾರ್ಮಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. ನಾಡಿನ ವಿವಿಧ ವಿದ್ವಾಂಸರನ್ನು ಕರೆಯಿಸಿ ಧರ್ಮ ರಕ್ಷಣೆಯ ಉಪನ್ಯಾಸಗಳನ್ನು ಏರ್ಪಡಿಸಿಕೊಂಡು ಬರುತ್ತಾರೆ. ಪ್ರತಿ ಅಮವಾಸೆ ಹಾಗೂ ಹುಣ್ಣಿಮೆಗಳಲ್ಲಿ ಶರಣರ ತತ್ವ ಪಾಲನೆಗಾಗಿ ಪ್ರವಚನಗಳನ್ನು ಹಮ್ಮಿಕೊಳ್ಳುವರು. ಶಿವಾನುಭವ ಗೋಷ್ಠಿಗಳನ್ನು ಹಮ್ಮಿಕೊಂಡು ಧರ್ಮ ರಕ್ಷಣೆಯ ಕಾರ್ಯ ಮಾಡುವರು. ಮಾನವಿ ಕಲ್ಮಠ, ಊಟಕನೂರ ಅಡವಿಸಿದ್ದೇಶ್ವರ ಮಠ, ರುದ್ರದೇವರ ಮಠ, ನವಿಲಕಲ್ಲು ಹಿರೇಮಠ, ಹೀಗೆ ಕೆಲವು ವೀರಶೈವ ಮಠಗಳು ವೀಶರೈವ ಸಂಸ್ಕೃತಿಯನ್ನು ರಕ್ಷಿಸಿಕೊಂಡು ಬರುತ್ತಿವೆ.

೧.೩. ಲಿಂಗಧಾರಣೆ

ವೀರಶೈವ ಧರ್ಮದಲ್ಲಿ ಲಿಂಗಧಾರಣೆ ಮಹತ್ವ ಪೂರ್ಣವಾಗಿದೆ•ಧರ್ಮದ ಅಂಗವೆನೆಸಿದ ಗುರು, ಲಿಂಗ, ಜಂಗಮ, ವಿಭೂತಿ, ರುದ್ರಾಕ್ಷಿ, ಮಂತ್ರ, ಪಾದೋದಕ ಹಾಗೂ ಪ್ರಸಾದಗಳೆಂಬ ಅಷ್ಟಾವರಣಗಳು, ವೀರಶೈವ ಮತಗಳ ವೈಶಿಷ್ಟ್ಯಪೂರ್ಣ ಕಟ್ಟಳೆಗಳಾಗಿವೆ. ಅಷ್ಟಾವರಣದಲ್ಲಿರುವ ''ಲಿಂಗ''ವು ಶಿವರೂಪದಲ್ಲಿ ಕಾಣುತ್ತೇವೆ. ದೇವಸ್ವರೂಪ ಕಣ್ಣಿಗೆ ಹಾಗೂ ಮನಸ್ಸಿಗೆ ಗೋಚರವಾಗದ ವಸ್ತು. ಅದು ಕೈಗೆ ಸಿಗುವುದಿಲ್ಲ. ಮಾತಿಗೆ ಬರುವುದಿಲ್ಲ. ಕಣ್ಣಿಗೆ ಕಾಣವುದಿಲ್ಲ-ದೇವರನ್ನು ಕಾಣಬೇಕೆಂಬ ಹಂಬಲದಿಂದ ತಪಸ್ಸು ಅನುಷ್ಠಾನ, ಧ್ಯಾನ,ಪೂಜೆ ಮಾಡುವ ಸಂಕೇತವಾಗಿ ಇಲ್ಲಿ ''ಲಿಂಗ'' ವೇ ಶಿವ ಸ್ವರೂಪ ಸಾಕ್ಷಾತ್ ಪರಶಿವನ ಸಂಕೇತವೆಂದು ನಂಬಿ ಪೂಜಿಸುತ್ತಿದ್ದರು. ಶರಣರು ಅಂಗುಷ್ಟ ಮಾತ್ರ ಪರಿಮಿತಿಯುಳ್ಳವನಾಗಿ ಹೃದಯ ದಲ್ಲಿರುವ ಜ್ಯೋತಿರ್ಲಿಂಗವನ್ನು, ಸಾಕ್ಷಾತ್ಕರಿಸಲು ಗುರು ಕೃಪೆಯಿಂದ ಲಬ್ಯವಾದ ಲಿಂಗವನ್ನು ಶರೀರದಿಂದ ಅಳಿಸದೆ, ಹತ್ತಿರದಲ್ಲಿಟ್ಟು ಧ್ಯಾನ ಜಪಾದಿ ಪೂಜೆಗಳನ್ನು ಮಾಡಬೇಕೆಂಬ ಲಿಂಗವೆ'' ಗುರುಗಳು ಇಷ್ಟಾರ್ಥವನ್ನು ಕೊಡುವ ದೇವರೆಂದು ತೋರಿಸಿದರು.

'' ಲೀನಂ ಗಚ್ಚತೀ ಲಿಂಗಂ''– ಎಂಬ ವುತ್ಪತ್ತಿಗನುಸಾರವಾಗಿ ಲಿಂಗವೆಂದರೆ, ಚರಚರಾತ್ಮಕವಾದ ಈ ಜಗತ್ತು, ಯಾವ ವಸ್ತುವಿನಲ್ಲಿ ತೋರಿಸಿ , ಅದೇ ವಸ್ತುವಿನಲ್ಲಿ ಲಯ ವಾಗುವದೋ ಅಂತಹ ಸರ್ವದಾರ ವಸ್ತುವೆ ಲಿಂಗವೆನಿಸುತ್ತದೆ.

''ಲಿಂಗವಿಕಾರನಿಗೆ ಅಂಗ ವಿಕಾರ ವೆಂಬುದಿಲ್ಲ
ಜಂಗಮ ವಿಕಾರನಿಗೆ ಧನ ವಿಕಾರವೆಂಬುದಿಲ್ಲ
ಪ್ರಸಾದ ವಿಕಾರನಿಗೆ ಮನವಿಕಾರ ವೆಂಬುದಿಲ್ಲ''. [೧೮]

ಆದ್ದರಿಂದ ಲಿಂಗರೂಪಕ್ಕೆ ಯಾವುದೇ ಆಕಾರ, ವಿಕಾರಗಳೆಂಬುದು ಇರುವುದಿಲ್ಲ. ಅದು ಜಗವೆಲ್ಲ ವ್ಯಾಪಿಸಿರುತ್ತದೆ. ಜಗದಗಲ ಮುಗಿಲಗಲ ವ್ಯಾಪಿಸಿರುತ್ತದೆ. ಅದರ ಅಂತ್ಯ ಪಾರಗಳೆಂಬುದು ತಿಳಿಯಲಾರದು. ಆದ್ದರಿಂದ ಶರಣರು ''ಲಿಂಗ ಮಧ್ಯ ಜಗತ್ ಸರ್ವಂ'' – ಎಂದಿರುವುದು ಜಾಚಿತ್ಯಪೂರ್ಣವಾಗಿದೆ. ಎಲ್ಲವನ್ನು ಈ ಲಿಂಗದಲ್ಲಿಯೇ ಅಡಗಿದೆ ಎಂಬ ಭಾವ ಇಲ್ಲಿ ಯುಕ್ತವಾಗುತ್ತದೆ.

ಲಿಂಗಧರಿಸುವ ವಿಧಾನ

ಲಿಂಗಧಾರಣೆ ಮತ್ತು ಲಿಂಗಧೀಕ್ಷೆಗಳೆರಡು ವೀರಶೈವ ಧರ್ಮ ತತ್ವಗಳ ಕುರುಹುಗಳಾಗಿವೆ. ವೀರಶೈವ ಸಿದ್ಧಾಂತ ಕ್ರಿಯೆಯ ಪ್ರಕಾರ ಮಗು ತಾಯಿ ಗರ್ಭನಿಂದ ಮೂಡುವುದಕಿಂತ ಮುಂಚಿತವಾಗಿ ಹಿಡಿದುಕೊಂಡು ಲಿಂಗೈಕ್ಯರಾದ ಮೇಲು ನಿಯಮನುಸಾರವಾಗಿ ''ಲಿಂಗ'' ಬೇಕಾಗುತ್ತದೆ.

ವೀರಶೈವ ಸ್ತ್ರೀಯರು ಗರ್ಭವತಿಯರಾದ ೮ನೇ ತಿಂಗಳಿನಲ್ಲಿಯೇ ಅವರ ಗುರುಗಳು ಅಥವಾ ಮಠಾಧೀಶರನ್ನು ಶುಭ ಸ್ವರೂಪದಿಂದ ಕರೆಯಿಸಿ, ಶ್ರೀಶೈಲ ಶಿಲೆಯಿಂದ ತಯಾರಿಸಲ್ಪಟ್ಟ ಸೂತ್ರಯುಕ್ತವಾದ ಲಿಂಗವನ್ನು ವಿಧಾನದಂತೆ ಪೂಜಿಸಿ, ಗರ್ಭಿಣಿಯರ ಸ್ವಾಧೀನಕ್ಕೆ ಕಟುತ್ತಾರೆ. ಇದರಿಂದ ಮಗು ಜನಿಸಿದ ತಕ್ಷಣ ಲಿಂಗಧಾರಣೆ ಮಾಡಲು ಅನುಕೂಲವಾಗುತ್ತದೆ. ಆದ್ದರಿಂದ ಮಗುವು ತಾಯಿ ಗರ್ಭದಿಂದ ಜನಿಸಿದ ಕೂಡಲೇ ಅಂದಿನ ದಿವಸವೇ ಜಂಗಮರನ್ನು, ಅಥವಾ ಮಠಾಧೀಶರನ್ನು ಕರೆಯಿಸಿ ಕ್ರಿಯಾಚರಣೆಗಳ ಮೂಲಕ ಮನೆಯನ್ನು ಷಟ್ಸಮ್ಮಾಜಗಳಿಂದ ಶೂಚಿಯ ಮಾಡಿ, ತಳಿರು ತೋರಣಗಳಿಂದ ಅಲಂಕಾರವ ಗೈದು, ಅಭಿಷೇಕ ಪೂಜಾ ವಸ್ತ್ರಗಳನ್ನೆಲ್ಲ ಸಜ್ಜುಗೊಳಿಸಿಕೊಂಡು, ಮಗು ವಿನ ತಂದೆಯ ಗುರು ಸಮ್ಮುಖದಲ್ಲಿ ಸಂಕಲ್ಪವನ್ನು ಮಾಡಬೇಕು. ಬಿಟ್ಟಿದ ಲಿಂಗಕ್ಕೆ ವಿಭೂತಿಯಿಂದ ಅಭಿಷೇಕ ಮಾಡಿಸಿ, ಪೂಜೆಯನ್ನು ಮಾಡಿ, ಬಿಳಿಯ ಹೊಸ ಬಟ್ಟೆಯಲ್ಲಿ ಕಟ್ಟಿ, ಮಗುವಿನ ಕೊರಳಿಗೆ ಕಟ್ಟಿ ಮಗುವಿಗೆ ಲಿಂಗಧಾರಣೆ ಮಾಡಬೇಕು-ನಂತರ ತಾಯಿಗೆ ಕೊಡುತ್ತಾರೆ.

ಒಂದು ವೇಳೆ ಮರುದಿವಸವಾದರೂ ಮಾಡಬಹುದು, ಆದರೆ ಇಂದಿನ ಸ್ಥಿತಿಯಲ್ಲಿ ಗರ್ಭಿಣಿಯರು ಹೆರಿಗೆಯ ಸಂದರ್ಭದಲ್ಲಿ ದವಖಾನೆಯಲ್ಲಿ, ವಿಶ್ರಾಂತಿಯಲ್ಲಿ ತೊಡಗಿರುವುದರಿಂದ ಅನಾನುಕೂಲ ವಾಗಿರತ್ತದೆ. ಮನೆಗೆ ಕರೆತಂದ ದಿವಸ ಅಂದರೆ ಮೂರನೇ ದಿವಸಕ್ಕೊ ಅಥವಾ ಐದನೇ ದಿವಸಕ್ಕೋ ಮಗುವಿಗೆ ಲಿಂಗಧಾರಣೆ ಮಾಡುವ ಕಾರ್ಯಗಳು ಇಂದು ನಡೆಯುತ್ತಲಿವೆ. ಐದು ದಿವಸಗಳ ಮೇಲ್ಪಟ್ಟ ನಂತರ ಲಿಂಗಧಾರಣೆ ಮಾಡುವುದು ಶರಣರು ಕನಿಷ್ಠ ಅನಿಷ್ಠವಾದೆಯೆಂದು ಹೇಳಿದ್ದಾರೆ. ಹೊಟ್ಟೆಯೊಳಗಿನಿಂದಲೇ ಮಗುವು ಲಿಂಗಧಾರಿಯಾಗಿ ಜನನವಾಗಬೇಕೆಂಬುದು ಶರಣ ಆಶಯವಾಗಿತ್ತು. ಅಂದರೆ ಮಗುವು ತಾಯಿಯ ಗರ್ಭದಿಂದ ಮೂಡುತ್ತಿದ್ದಂತೆ, ಶಿವಸ್ವರೂಪ ಸ್ವಯಂ ಸಿದ್ಧಿಯನ್ನು ಪಡೆದುಕೊಂಡು, ಲಿಂಗವತಾರಿಯಾಗಿ ಶರಣರ ಅವತಾರಿಯಾಗಿ ಬೆಳೆಯಬೇಕೆಂದು ಹುಟ್ಟುತಲೆ ಶುಭ್ರವಾಗಿ ಕಂಗೊಳಿಸಿ ಬೆಳೆಯಬೇಕೆಂದು ವೀರಶೈವರ ಸಂಪ್ರದಾಯವಾಗಿದೆ.

ಮಗು ಜನಿಸಿದನಂತರ ಜಂಗಮರಿಗೆ ಅಥವಾ ಮಠಾಧೀಶರಿಗೆ ಕರೆಯಿಸಿ, ಮಗುವಿಗೆ ಸ್ನಾನಾದಿಗಳನ್ನು ಮಾಡಿಸುತ್ತಾರೆ. ಗೋಮಯದಿಂದ ಮನೆಯ ಸಾರಣೆಯನ್ನು ಮಾಡಿಸುತ್ತಾರೆ. ಸ್ವಾಮಿಗಳಿಗೆ ಮನೆಯ ಒಂದು ಸ್ಥಳದಲ್ಲಿ ಆಸನ ಹಾಕಿ ಕುಳ್ಳಿರಿಸುತ್ತಾರೆ. ಆಗ ಜಂಗಮ ಪಾದೋದಕವನ್ನು ಒಂದು ಬಟ್ಟಲಲ್ಲಿ ಇಟ್ಟುಕೊಳ್ಳುತ್ತಾರೆ. ಒಂದು ರಂಗೋಲಿ ಬರೆಸುತ್ತಾರೆ-ಅದರ ಮೇಲೆ ಜೋಳ, ಖೊಬ್ಬರಿ, ಅಕ್ಕಿ, ಹಿಟ್ಟು ಇಡುತ್ತಾರೆ. ಅದರಲ್ಲಿ ಹಾಲು, ತುಪ್ಪ, ಸಕ್ಕರೆ, ಗೋಮುತ್ರ ಪಾದೋದಕ ತೆಗೆದುಕೊಂಡು ಹೂ ಬಿಲ್ವಪತ್ರಿ, ವಿಭೂತಿಯಿಂದ ಐದು ಸಾರಿ ಮೇಲಿನ ಎಲ್ಲ ವಸ್ತುಗಳನ್ನು ಲಿಂಗದ ಮೇಲೆ ಸುರಿದು ತೊಳೆಯುತ್ತಾರೆ. ನಂತರ ಒಂದು ಬಟ್ಟೆಯನ್ನು ತೆಗೆದುಕೊಂಡು ವಿಭೂತಿಯಿಂದ ಲಿಂಗಕ್ಕೆ ಪೂಜಿಸಿ, ಮಗುವಿನ ಹಣೆಗೆ ವಿಭೂತಿ ಹಚ್ಚಿ ಜಂಗಮ ಪಾದೋದಕವನ್ನು ಮಗುವಿಗೆ ಮತ್ತು ತಾಯಿಗೆ ಕೊಟ್ಟು ನಂತರ ಪೂಜಿಸಿದ ಲಿಂಗವನ್ನು ಮಗುವಿನ ಎದೆಯ ಮೇಲೆ ಧಾರಣೆ ಮಾಡುತ್ತಾರೆ.

ಹೀಗೆ ಲಿಂಗ ಧಾರಣೆಯ ಮಾಡುವ ಕ್ರಿಯೆಯು ಬೆಳೆದು ಬಂದಿದೆ. ಈ ಸಂಪ್ರದಾಯವನ್ನು ಹೈದ್ರಾಬಾದ – ಕರ್ನಾಟಕ ಮಠಾಧೀಶರು ಅನುಸರಿಸುತ್ತ ಬಂದಿರುವುದು ಕಾಣುತ್ತೇವೆ.

## ೧.೪. ಲಿಂಗದೀಕ್ಷೆ

ಲಿಂಗದೀಕ್ಷೆಯೂ ವೀರಶೈವ ಧರ್ಮದ ಪವಿತ್ರ ಬಂಧನವಾಗಿದೆ. ಇದು ಸಮಾಜದಲ್ಲಿ ಪ್ರತಿಯೊಬ್ಬ ವ್ಯಕ್ತಿಗೆ ಅವಶ್ಯಕವಾಗಿದೆ. ಇಲ್ಲಿ '' ಲಿಂಗ '' ಮತ್ತು '' ದೀಕ್ಷೆ ''ಗಳೆಂಬ ಬೇರೆ ಬೇರೆ ಶಬ್ದಗಳನ್ನೊಳಗೊಂಡಿದೆ. ಈ ಎರಡು ಶಬ್ದಗಳು ಕೂಡಿದ ಸಂಬಂಧ ಅನನ್ಯವಾದುದು. ''ಲಿಂಗ '' ಎಂದರೆ ವೀರಶೈವ ತತ್ವಗಳಾದ ಅಷ್ಟಾವರಣಗಳಲ್ಲಿ ಒಂದು. ಇದರ ಮೂಲ ಸಿಂಧೂ ಸಂಸ್ಕೃತಿಯಲ್ಲಿ ದೊರೆಯುತ್ತದೆ. ಇಲ್ಲಿ '' ಲ '' ಕಾರವೇ ಶೂನ್ಯ ''೦'' ಬಿಂದುವೇ '' ಲೀಲೆ ''– ''ಗ'' ಕಾರವೇ ಚಿತ್ತು, ಎಂಬರ್ಥಗಳನ್ನು ಕೊಡುತ್ತವೆ. ಅಂದರೆ ಲಿಂಗದಲ್ಲಿ ವಿಶ್ವದ ಸ್ವರೂಪವೆಲ್ಲ ಅಡಗಿದೆಯೆಂಬ ಭಾವನೆ. ಅದು ನಿರಾಕಾರವಾಗಿದೆ. ''ಲಿಂಗ ಮಧ್ಯ ಜಗತ್ ಸರ್ವಂ'' – ಎಂಬಂತೆ. ಪ್ರಪಂಚದ ಪ್ರತಿಯೊಂದು ನಿರ್ಜೀವ ಮತ್ತು ಸಜೀವ ವಸ್ತುಗಳು ''ಲಿಂಗ'' ದಲ್ಲಿಯೆ ಅಡಗಿವೆ. ಒಂದರ್ಥದಲ್ಲಿ ''ಲಿಂಗ '' ವೆಂದರೆ ಜಗತ್ತು. ''ಲಿಂಗ'' ನಿರೂಪವಾದುದು. ಈ ಲಿಂಗದಲ್ಲಿ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ, ಗಳೆಂಬ ಮೂರು ಪ್ರಕಾರಗಳು ಕಾಣುತ್ತೇವೆ.

''ದೀಕ್ಷೆ'' – ಎಂದರೆ ಒಂದು ಧಾರ್ಮಿಕ ಪದ್ಧತಿ, ನಿಯಮ, ವ್ರತ ಸಂಸ್ಕಾರ ಮಂತ್ರೋಪದೇಶ – ಗಳೆಂಬ ಮುಂತಾದ ಅರ್ಥಗಳನ್ನು ಹೊಂದಿದ್ದರೂ, ''ದೀಕ್ಷೆ'' ಯೆಂದರೆ ''ಸಂಸ್ಕಾರ'' ಎಂದೇಹೇಳಬೇಕು.

ಅವಿವೇಕಿಯಾದ ಮಾನವನಿಗೆ ವಿವೇಕವನ್ನು ಹೊಂದುವುದೆ ದೀಕ್ಷೆ. ಈ ದೀಕ್ಷೆಯನ್ನು ಗುರುಮುಖೇನ ಹೊಂದಬೇಕಾಗುತ್ತದೆ. ಗುರುಗಳಲ್ಲಿ , ದೀಕ್ಷಾಗುರು, ಶಿಕ್ಷಾಗುರು, ಮೋಕ್ಷಾಗುರು, ಗಳೆಂದು ಮೂರು ಪ್ರಕಾರದ ಗುರುಗಳು ದೊರೆಯುತ್ತಾರೆ.

ದೀಕ್ಷೆ ಪದ್ಧತಿ ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿದೆ. '' ಸ್ಕಂದ ಪುರಾಣದಲ್ಲಿ '' ಯಾವನು ತನ್ನ ವಾಮ ಹಸ್ತ ಪೀಠದಲ್ಲಿ ಇಷ್ಟಲಿಂಗವನ್ನಿಟ್ಟು ಅದರಲ್ಲಿ ತನ್ನ ಮಸ್ತಕವನ್ನು ನೆಲೆಗೊಳಿಸಿ, ಬಾಹ್ಯಕ್ರಿಯೆಗಳನ್ನು ದೂರ ಮಾಡಿ, ಭಕ್ತಿಶ್ರದ್ಧೆಯಿಂದ ಪೂಜಿಸುವನೋ ಅವನು ವೀರಶೈವನೆಂಬ ಹೇಳಿಕೆ ಪ್ರಾಪ್ತವಾಗಿದೆ. ಅದರಂತೆ ಲಿಂಗದೀಕ್ಷೆಯ ಪಾತ್ರವನ್ನು ''ಚನ್ನ ಬಸವಣ್ಣನವರ ದೀಕ್ಷಾ ವಿಧಾನ, ಪದ್ಮರಸನ ದೀಕ್ಷಾ ಭೋದೆ'' ''ಕರಸ್ಥಲದ ನಾಗಲಿಂಗದ ದೀಕ್ಷಾ ವಿಧಾನ'' ದೀಕ್ಷಾ ವಿಧಾನ ವೀರ ಸಂಗಪ್ಪಾ, ವೀರಶೈವ ದೀಕ್ಷಾ ವಿಧಿ'' ಗಳೆಂಬ ಮುಂತಾದ ಧಾರ್ಮಿಕ ಗ್ರಂಥಗಳಲ್ಲಿ ''ಲಿಂಗ ದೀಕ್ಷೆಯ ಪರಿಕಲ್ಪನೆಯ ಕಂಡು ಬರುತ್ತದೆ. ಈ ಲಿಂಗ ದೀಕ್ಷೆಯಲ್ಲಿ ವೇಧ (ಜ್ಞಾನ) ಮಂತ್ರ ಮತ್ತು ಕ್ರಿಯಾಗಳಿಂದು ಮುಖ್ಯವಾಗಿ ಮೂರು ಪ್ರಕಾರಗಳಲ್ಲಿ ಎದ್ದು ಕಾಣುತ್ತವೆ.

ಮಹತ್ವ

ಸಮಾಜದ ಆಲೋಚನೆಗಳು, ತತ್ವಗಳು, ಸುಧಾರಣೆಗಳು, ಕಾರ್ಯರೂಪಕ್ಕಿಳಿಸಲು ಮತ್ತು ಸಮಾಜದಲ್ಲಿ ಪ್ರತಿಷ್ಠಾಪಿಸಲು, ಕಲ್ಯಾಣದಲ್ಲಿ ''ಅನುಭವ ಮಂಟಪ'' ವನ್ನು ನಿರ್ಮಿಸಿದವರು ಶಿವ ಶರಣರು. ಅಲ್ಲಮ ಪ್ರಭುದೇವರು, ಕಾಯಕಯೋಗಿ ಸಿದ್ದರಾಮೇಶ್ವರ. ಜ್ಞಾನ ಭಂಡಾರಿ ಚೆನ್ನಬಸವಣ್ಣ, ವೈರಾಗ್ಯ ನಿಧಿ, ಅಕ್ಕಮಹಾದೇವಿ, ಕ್ರಾಂತಿ ವೀರ ಮಡಿವಾಳ ಮಾಚಿದೇವರು, ವಿಶ್ವಗುರು ಬಸವಣ್ಣನವರು, ಅನುಭವ ಮಂಟಪದ ಆತ್ಮಗಳಾದರೂ, ಜೊತೆಗೆ ೭೭೦ ಮಠಗಣಂಗಳೆಲ್ಲ ಇದರಲ್ಲಿ ಪಾಲ್ಗೊಂಡಿದ್ದವು.

ಜಾತಿ – ಮತ – ಪಂಥಗಳ ಗೊಂದಲವಿಲ್ಲದ್ದೆ ''ಶರಣ ಸಮಾಜ''ವನ್ನು ನಿರ್ಮಿಸಿ, ಸ್ತ್ರಿ ಸಮಾನತೆಯೆಂದು ಸಾರಿ, ಹೆಣ್ಣು ಮಕ್ಕಳಿಗೂ, ಧರ್ಮ ಸಂಸ್ಕಾರ ನೀಡಲಿ, ಅನುಭವ ಮಂಟಪದಲ್ಲಿ ಸಮಾನ ಅವಕಾಶ ಕಲ್ಪಿಸಿಕೊಟ್ಟರು. ಸಮಾಜದಲ್ಲಿ ಕೆಳವರ್ಗದ ಜನರಿಗೆ ನೆಮ್ಮದಿಯ ಬದುಕಿಲ್ಲ. ಇದನ್ನು ಕಂಡ ಶರಣರು ಕೆಳ ಜಾತಿಯವರಿಗೆ ''ಸಂಸ್ಕಾರ'' (ದೀಕ್ಷೆ) ಯನ್ನು ಕೊಟ್ಟು ಸಮಾನತೆಯ ಅವಕಾಶವನ್ನು ಕಲ್ಪಿಸಿಕೊಟ್ಟರು. ಲಿಂಗದೀಕ್ಷೆಯಿಂದ ಸಾಮಾಜಿಕ ಪರಿವರ್ತನೆಯಾಗುತ್ತದೆ. ಹರಿಹರ ಕವಿಯ ಮಾದರ ಚೆನ್ನಯ್ಯನ ಪಾತ್ರವನ್ನೇ ನೋಡಬಹುದಾಗಿದೆ. ಮಾದರ ಚೆನ್ನಯ್ಯ ಗುಪ್ತ ಭಕ್ತಿಯನ್ನು ಶಿವನಿಗಾದ

ಶಿವದರ್ಶನವನ್ನು ಕಂಡುಕೊಂಡವನಾದ ದೊರೆ "ಕರಿ ಕಾಲ ಚೋಳ" ಮತ್ತು ಚೆನ್ನಯ್ಯ ಕೋಟಿಯ ಸನ್ನಿವೇಶವನ್ನು ತೀವ್ರಭಾವನೆ ವರ್ಣಿಸುತ್ತಾನೆ. ಶಿವನ ಸಾಕ್ಷಾತ್ಕಾರವನ್ನು ಪಡೆದ ಸ್ವತಃ ಮಾದರ ಚನ್ನಯ್ಯನೇ ಶಿವನೆಂದು ಮನ ತುಂಬಿಕೊಂಡ. ಮೇಲು ಕುಲದ ದೊರೆ " ಕರಿಕಾಲಚೋಳ" ಚನ್ನಯ್ಯನ ಪಾದಗಳಿಗೆ ನಮಸ್ಕರಿಸುತ್ತಾ ಹೀಗೆ ಹೇಳುತ್ತಾನೆ.

" ದೇವನೊಲಿದವ ಕುಲವೆ ಸತ್ಕುಲಂ
ಘನ ಮಹಿಮನೊಲಿದ ಜಾತಿಯೇ ಜಾತಿ ನಿರ್ಮಲಂ
ಶಿವನೊಡನುಂಡ ನಿಮ್ಮ ಜಾತಿಗಾಂ ಸರಿಯೇ?
ಸರ್ವಜ್ಞಾ ನಿಮ್ಮ ಕೆರ್ಪಿಂಗೆನ್ನ ಶಿರ ಸರಿಯೇ ?
ಬಿಡನಯ್ಯಾ ನಿಮ್ಮ ಪಾದಮುಂ ಬಿಟ್ಟ ಬಾಳ್ವೆನೆ?
ಮೃಢ ಮೂರ್ತಿಯ ಬಿಟ್ಟು ನರಕದೊಳಗಾಳ್ವೆನೆ?"[೧೯]

ಇಲ್ಲಿ ದೀಕ್ಷೆ ಪಡೆದ ವ್ಯಕ್ತಿ ಯಾರೇ ಆಗಿರಲಿ ಆತ ತನ್ನ ಪೂರ್ವಾಶ್ರಮವನ್ನು ಮರೆತು ಹೊಸ ಆಯಾಮ ಆಲೋಚನೆಗಳಿಗೆ ಅಂಟಿಕೊಳ್ಳುತ್ತಾನೆ. ಅವನ ಘನತೆ ಶ್ರೇಷ್ಠತೆಯನ್ನು ಅಳೆಯಲು ಸಾಧ್ಯವಿಲ್ಲ. ಶಿವನ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ. ಆದರಿಂದ ಈಲ್ಲಿ ಕರಿ ಕಾಲ ಚೋಳದೊರೆ "ಚೆನ್ನಯ್ಯ"ನೆ ಗುರು , ಲಿಂಗ, ಜಂಗಮ, ವಿಶ್ವರೂಪವೆಂದು ತಿಳಿದುಕೊಳ್ಳುತ್ತಾನೆ. ಇಲ್ಲಿ ಜಾತಿಯನ್ನೆ ನಿರ್ಮೂಲನ ಮಾಡಿದ ಶರಣರನ್ನು ನಾವು ಕಾಣುತ್ತೇವೆ.

"ಲಿಂಗದೀಕ್ಷೆಯನ್ನು ಪಡೆದ ವ್ಯಕ್ತಿ ಮೇಲು ಜಾತಿಯವನಿಗಿಂತ ಶ್ರೇಷ್ಠನು ಕೀಳು ಜಾತಿಯವನಾದ ಮಾದರ ಚನ್ನಯ್ಯ ಪಾದಗಳಿಗೆ ಮೇಲ್ ಜಾತಿಯವನಾದ ದೊರೆ ನಮಸ್ಕರಿಸುತ್ತಿರುವುದರ ಅರ್ಥ ನಿಜಕ್ಕೂ ಜಾತಿ ವಿನಾಶವಾಗಬೇಕಾದರೆ, ಮೊದಲು ಮೇಲ ಜಾತಿಯ ಜನ, ಜಾತಿಯನ್ನು ನಿರಾಕರಿಸಬೇಕು".[೨೦] ಅಂದರೆ ವಾಸ್ತವ್ಯ, ಸಾಮಾಜಿಕ, ಜೀವನದಲ್ಲಿ ಈ ಸಾಧ್ಯತೆ ಅತ್ಯಂತ ಪರಿಮಿತವಾದುದು. ಬದಲಾವಣೆಯಾಗುವುದು ಎಂಬುದಕ್ಕೆ ಸತ್ಯಾಂಶವೇ ಆಗಿದೆ.

ಇಡೀ ಮನುಷ್ಯರನ್ನೇ ಕೇಂದ್ರವಾಗಿಟ್ಟುಕೊಂಡು ಈ ದೀಕ್ಷೆಯ ಸಂಪ್ರದಾಯ ಬಳಕೆಯಾಗಿದೆ. ಮನುಷ್ಯನೆಂದರೆ ಸಮಾಜ. ಸಮಾಜವೆಂದರೆ ಮನುಷ್ಯ, ಎಂದು ಗ್ರಹಿಸಿಕೊಂಡಿದ್ದರಿಂದ ಇಲ್ಲಿ ಎಲ್ಲ ಜಾತಿಯ ಜನ ಸಮುದಾಯಗಳು ಸಹಬಾಳ್ವೆ ಅನಿವಾರ್ಯವಾಗಿದೆ. ತಮ್ಮ ಸಮಸ್ಯೆಗಳು ನೇರವಾಗಿ ಸಾಮಾಜಿಕ

ವ್ಯವಸ್ಥೆಯೊಂದಿಗೆ ಸಂಬಂಧ ಪಟ್ಟಿರುವುದರಿಂದ, ಮನುಷ್ಯನನ್ನು , ಸಮಾಜವನ್ನು ಪರಿವರ್ತಿಸುವುದೇ, ಲಿಂಗದೀಕ್ಷೆಯ ಮುಖ್ಯ ಉದ್ದೇಶ.

ಬಸವಣ್ಣನವರು ಜಾತೀಯತೆಯನ್ನು ನಿರಾಕರಿಸಿದವರು. ಅಷ್ಟೇ ಅಲ್ಲದೆ ಜಾತಿ ವ್ಯವಸ್ಥೆಯನ್ನು ಮೇಲು – ಕೀಳೆಂಬ ಹುಸಿ ತತ್ವವನ್ನು ಅತ್ಯಂತ ಧ್ವನಿ ಪೂರ್ಣವಾಗಿ ವಿಂಗಡಿಸಿದ್ದಾರೆ.

" ಸೆಟ್ಟಿಯೆಂಬೆನೆ ಸಿರಿಯಾಳನ?
ಮಡಿವಾಳನೆಂಬೆನೆ ಮಾಚಯ್ಯನ ?
ಡೋಹಾರನೆಂಬೆನೆ ಕಕ್ಕಯ್ಯನ?
ಮಾದಾರನೆಂಬೆನೆ ಚನ್ನಯ್ಯನ?
ಆನು ಹಾರುವನೆಂದರೆ, ಕೂಡಲ ಸಂಗಮದೇವಾ ನಗುವನಯ್ಯ"[೨೧]

ಲಿಂಗದೀಕ್ಷೆ ಪಡೆದ ಸಾಧಕನಲ್ಲಿ ಕುಲ, ಗೋತ್ರಗಳೆಂಬೆಲ್ಲವುಗಳು ಸುಟ್ಟುಹೋಗಿ ಎಲ್ಲರೂ ಸರಿ ಸಮಾನರೆಂದು ಭಾವಿಸುತ್ತಾನೆ. ಸಾಧಕ "ಲಿಂಗದೀಕ್ಷೆ" ಪಡೆದು "ಸಂಸ್ಕಾರ" ಹೊಂದಿದ ಬಳಿಕ ಜಾತಿ – ಕುಲವನೆಣಿಸಿದರೆ, ದೇವರು ಸಹ ನಗುತ್ತಾರೆಂದು ಶರಣರು ತಿಳಿಸಿದರು. ಅಲ್ಲದೆ " ಹೊಲೆಯ ಯುಂಟೆ ಲಿಂಗವಿದ್ದೆಡೆಯಲ್ಲಿ? ಕುಲಯುಂಟೆ ಜಂಗಮವಿದ್ದೆಡೆಯಲ್ಲಿ? ಎಂಜಲುಂಟೆ ಪ್ರಸಾದವಿದ್ದೆಡೆಯಲ್ಲಿ?" ಎಂದು ಹೇಳುತ್ತ ದಾಸೀಪುತ್ರನಾಗಿರಲಿ, ವೇಶ್ಯಾಪುತ್ರನಾಗಲಿ, ಶಿವದೀಕ್ಷೆಯಾದ ಬಳಿಕ ಸಾಕ್ಷಾತ್ ಶಿವನೆಂದು ವಂದಿಸಿ, ಪೂಜಿಸಿ, ಪಾದೋದಕ ಪ್ರಸಾದ ಕೊಂಬುದು ಯೋಗ್ಯವೆಂದು ತಿಳಿಸಿದರು.

"ಅಸ್ಪೃಶ್ಯರನ್ನು ಭಕ್ತರನ್ನಾಗಿಸುವುದರ ಮೂಲಕ ತಾವು ಉತ್ತಮರೆಂಬ ಭಾವನೆ ಅವರಲ್ಲಿ ಬೇರೂರಲು, ಅವರನ್ನು ಸರಿ ಸಮಾನರನ್ನಾಗಿ ಗೌರವಿಸುವುದರ ಮೂಲಕ ಅವರಲ್ಲಿ ಆತ್ಮವಿಶ್ವಾಸವನ್ನು ಬೆಳೆಸಲು ಶಿವಶರಣರು ಪ್ರಯತ್ನಿಸಿದರು. ದೀಕ್ಷೆಯ ಮೂಲಕ ಅವರ ಪೂರ್ವಾಚರಗಳನ್ನು ಮೌಢ್ಯಗಳನ್ನು ನಿವಾರಿಸಲು ಎಲ್ಲಕ್ಕಿಂತ ಮಿಗಿಲಾಗಿ ಎಲ್ಲರಂತೆ ಆರೋಗ್ಯ ಜೀವನ ನಡೆಸುವ ಹಕ್ಕು ನಮಗೂ ಇದೆ. ಅನ್ಯರ ಹಂಗಿನಲ್ಲಿ ಬಾಳದೆ ಸ್ವಂತ ದುಡಿಮೆಯಿಂದ ಸತ್ಯಶುದ್ಧ ಬಾಳುವೆ ನಡೆಸುವೆವೆನ್ನುವ ಪ್ರತಿಜ್ಞಾಕೈಗೊಳ್ಳಲು, ಅವರಲ್ಲಿ ಹೊಸ ಜೀವನೋತ್ಸಾಹ ಮೂಡಿಸಲು ಶಿವಶರಣರು ಪ್ರಾಂಜಲ ಮನಸ್ಸಿನಿಂದ ಪ್ರಯತ್ನಿಸಿದರು".[೨೨] ಜಾತಿ ಮತ – ಕುಲ – ಗೋತ್ರಗಳನ್ನು ಆಚೆ ಸರಿಸಿ, ಸಾಧಕನಿಗೆ ಮೊದಲು ವೀರಶೈವ ಧರ್ಮ ತತ್ವಗಳ

ಅಯ್ಯಾಚಾರ ನಡೆಸಿ, ನಂತರ ಸಾಧಕನಿಗೆ "ಸಂಸ್ಕಾರ" (ದೀಕ್ಷೆ) ಮಾಡುತ್ತಾರೆ. ಅಂದಿನಿಂದ ಆತನಲ್ಲಿರುವ ಕಲ್ಮಷಗಳನ್ನು ತೊರೆದು ನಿಷ್ಠಾವಂತ ಆರಾಧಕನಾಗುತ್ತಾನೆ.

" ಏವಂ ದೀಕ್ಷಾ ಪ್ರಕರ್ತವ್ಯ ಯಾವಜ್ಜೀವಂ ಪ್ರತಿಜ್ಞಾಮಾ"[೨೩] – ಸಾಧಕ ಯಾವ ಜಾತಿಯವನೇ ಆಗಿದ್ದರೂ,ಅವನನ್ನು ಅಯ್ಯಾಚಾರಗೊಳಿಸಿ,ಮಂತ್ರದ ಮೂಲಕ ಲಿಂಗದೀಕ್ಷೆ ಪಡೆದರೆ, ಆ ಸಾಧಕ ಆ ತತ್ವಗಳನ್ನು ನಿಯಮಾನುಸಾರವಾಗಿ ತಪ್ಪದೆ ಪಾಲಿಸಿ ನಡೆಯುತ್ತೇನೆಂದು ಪ್ರಮಾಣ ಮಾಡಬೇಕಾಗುತ್ತದೆ. ಆ ನಿಯಮವನ್ನು ಉಲ್ಲಂಘಿಸಿದರೆ, ಸಾಧಕನು ಪಾಪಕ್ಕೊಳಗಾಗುತ್ತಾನೆ. ಶರಣರು ಹೇಳಿದಂತೆ ಕೆಲವು ಸಾಧಕರು ದೀಕ್ಷೆ ಪಡೆದು ತತ್ವಗಳ ನಿಯಮಾನುಸಾರ ನಡೆಯದಕಾರಣ, ಅವರು ಹಲವಾರು ಕಷ್ಟ ನಷ್ಟಗಳಲ್ಲಿ ಬೆಂದು ಬಳಲುತ್ತಿರುವುದನ್ನು ಕಾಣುತ್ತೇವೆ.

" ಶ್ರೀ ಗುರು ಮಂತ್ರ ದೀಕ್ಷೆಯಿಂದೆ
ಮನದ ಪೂರ್ವಾಶ್ರಯವ ಕಳೆದು
ಮನಕ್ಕೆ ಘನ ನೆನೆಹ ಸಂಬಂಧಿಸಿದನಾಗಿ
ಮನ ನಿರ್ಮಳವಾಗಿ ಲಿಂಗಕ್ಕಾಶ್ರಯವೆಂದರಿವುದು "[೨೪]

ದೀಕ್ಷಾ ಸಂಸ್ಕಾರದಿಂದ ಪೂರ್ವಜಾತಿಯಳಿದು ಪುನರ್ಜನ್ಮ ದೊರೆಯುತ್ತದೆ. ಹಲವಾರು ಜಾತಿ, ಕುಲ, ಗೋತ್ರ, ಪಂಥಗಳು ಕಟ್ಟಿಗೆಗಳಿದ್ದ ಹಾಗೆ, ಅವುಗಳೆಲ್ಲ ಕೂಡಿ ಹಾಕಿ ಬೆಂಕಿ ಕೊಟ್ಟಾಗ ಅವುಗಳಲ್ಲಿರುವ ಕಟ್ಟಿಗೆಯ ಗುಣಗಳು ಸುಟ್ಟುಹೋಗಿ, ಎಲ್ಲವೂ ಬೂದಿಯ ರೂಪ ಹೊಂದುತ್ತವೆ. ಹಾಗೆ ಸಂಸ್ಕಾರಗೊಂಡನಂತರ ಅವನಲ್ಲಿ ಜಾತಿಯತೆಯನ್ನು ಅಳಿದು ಶರಣತತ್ವ ದೊರೆಯುತ್ತದೆ. " ದೀಕ್ಷೆ ಪಡೆದ ವ್ಯಕ್ತಿ ಯಾರೇ ಆಗಿರಲಿ ಆತ ತನ್ನ ಪೂರ್ವಾಶ್ರಮವನ್ನು ಮರೆತು ವೀರಶೈವ ಸಂಪ್ರದಾಯಗಳ ನಿಷ್ಠಾವಂತ ಆರಾಧಕನಾಗುತ್ತಾನೆ. ಸ್ನಾನ, ಪೂಜೆ, ಜಪ, ಇತ್ಯಾದಿ ಪರಿಕಲ್ಪನೆಗಳನ್ನು ಮೈಗೂಡಿಸಿಕೊಳ್ಳುತ್ತಾನೆ".[೨೫] ಲಿಂಗದೀಕ್ಷೆ ಹೊಂದಿದ ಸಾಧಕ, ಧಾರ್ಮಿಕ ತತ್ವಾಚರಣೆಗಳನ್ನು ಪರಿಪಾಲಿಸಿಕೊಂಡು ಬರಬೇಕಾಗುತ್ತದೆ. ಸಾಧಕ ಕೆಳ ಜಾತಿಯವನಾಗಿದ್ದರೆ, ಮತ್ತೆ ಜನರು ಸ್ವಜಾತಿಯಲ್ಲಿ ಅವಕಾಶ ಕೊಡುವುದಿಲ್ಲ. ಇತ್ತ ಮೇಲ್ಜಾತಿಯವರು ಸಂಬಂಧ ಹಾಗೂ ವೈವಾಹಿಕ ಜೀವನಕ್ಕೆ ಎಡೆ ಮಾಡಿ ಕೊಡುವುದಿಲ್ಲ. ಹೀಗಾಗಿ ಕೆಳಜಾತಿಯ ಸಾಧಕ ಹಲವಾರು ರೀತಿಯ ಕಷ್ಟಗಳಲ್ಲಿ ತೊಳಲಾಡುತ್ತಾನೆ. "ಮತ ಪ್ರಚಾರದ ಈ ಪಥ ಭ್ರಾಂತತೆ ಕೆಳವರ್ಗದವರಿಗೆ ಲಿಂಗದೀಕ್ಷೆ ಕೊಡುವುದರ ಮೂಲಕ ನಿಯಂತ್ರಣದಲ್ಲಿಟ್ಟು ಕೊಳ್ಳುವುದೇ

ಆಗಿದೆ. ಇತ್ತ ಮೇಲ್ಜಾತಿಗೂ ಸೇರದೆ ಅತ್ತ ತನ್ನ ಪೂರ್ವಾಶ್ರಮಕ್ಕೆ ಬದ್ಧನಾಗದೆ ದ್ವಂದ್ವದಾರೆಯಲ್ಲಿ ನಿರೀಕ್ಷಿತ ವ್ಯಕ್ತಿ ಉಳಿಯುತ್ತಾನೆ''.[೨೬]

'' ಮನದ ಮೈಲಿಗೆಯ ಕಳೆಯಲು ಶರಣರ ನುಡಿ ಗಡಣಗಳೇ ಮೂಲವಯ್ಯ
ತನುವಿನ ಮೋಹವನಳಿಸಲು ಅನುಭಾವಿಗಳ ಸಹವಾಸವೇ ಮೂಲವಯ್ಯ
ಲಿಂಗಾಂಗ ಸಮರಸವನ್ನರಿಯಲು ಇಷ್ಟಲಿಂಗಾರ್ಚನೆ ಮೂಲವಯ್ಯ''.[೨೭]

ಲಿಂಗದೀಕ್ಷೆಯೂ ಭವಬಂಧನವನ್ನು ಕಳೆಯುತ್ತದೆ. ಇಷ್ಟಾರ್ಥವನ್ನು ನೀಡುತ್ತದೆ. ಅನಿಷ್ಠತೆಗಳನ್ನು ನಿವಾರಿಸುತ್ತದೆ. ಲಿಂಗಪೂಜೆಯ ಬಲದಿಂದ ತಾನಾರೆಂಬುದನ್ನು ಸಾಧಿಸುವ ಶಕ್ತಿ ಬರುತ್ತದೆ. ಆತ್ಮ ಶಕ್ತಿಗೆ ಮೂಲ ಸಾಧನವೇ ಲಿಂಗಪೂಜೆ. ಶಿವಲಿಂಗಪೂಜೆಯಿಂದ ಅಪಮೃತ್ಯು ತಪ್ಪುತ್ತದೆ. ಕಾಲ ಕರ್ಮಂಗಳು ಅಂತಃಕ್ಲೇಷಗಳು ಅಂತ್ಯಗೊಳ್ಳುತ್ತವೆ. ಅಂತರಂಗ ಮತ್ತು ಬಹಿರಂಗಗಳ ಜ್ಞಾನ ಶಕ್ತಿ ವೃದ್ಧಿಯಾಗುತ್ತದೆ. ನಯನ ವೃದ್ಧಿಸುತ್ತವೆ. ದೈವ ದೃಷ್ಟಿ ಹಾವ ಭಾವ, ದೈವ ಕ್ರಿಯೆಗಳು ಬೆಳವಣಿಗೆಯಲ್ಲಿರುತ್ತವೆ. ಮಾನಸಿಕ ಚಿಂತೆ ದೂರಾಗಿ ನೆಮ್ಮದಿ ದೊರೆಯುತ್ತದೆ.

'' ದೀಕ್ಷಿಯಾಃ ಪರಮ ಪುರುಷಾರ್ಥ ಹೇತುತ್ವಾತ ತನ್ಯಾಶ್ಚ
ಪಶು ಪಾಶೇಶ್ವರ ಸ್ವರೂಪ ನಿರ್ಣಾಮ ಭೂತೇನ ಮಂತ್ರ
ಮಂತ್ರೀಶ್ವರಾದಿ ಮಹಾತ್ಮ ನಿಶ್ಚಯೇನ ಜ್ಞಾನೇನವಿನಾ
ನಿಷ್ಪಾದಯಿಡುವ ಶಕ್ಯುತ್ವಾತ್ ತದವ ಭೋದಕಾಸ್ಯ
ವಿದ್ಯಾಪಾದಸ್ಯ ಪ್ರಾಥಮ್ಯವಸ್ '' [೨೮]

ದೀಕ್ಷೆಯ ಪರಮ ಪುರುಷಾರ್ಥ ಹೇತವನ್ನು ಪಶು, ಪಾಶ, ಈಶ್ವರ, ಇವುಗಳ ಸ್ವರೂಪ ನಿರ್ಣಯ, ಹಾಗೂ ಮಂತ್ರ ಪುರುಷ – ಮಹತ್ಮ್ಯಗಳ ನಿಶ್ಚಯ ಜ್ಞಾನ ವಿಲ್ಲದೆ, ಸಿದ್ಧಿಯನ್ನು ಪಡೆಯುವುದು ಅವಶ್ಯಕವಾದ ಕಾರಣ ಈ ಜ್ಞಾನ ಸ್ವರೂಪವನ್ನು ತಿಳಿಸಿ ಕೊಡುವುದು ವಿದ್ವಾಪಾದದ ಪ್ರಥಮ ಪ್ರಾಶಸ್ಯವಾಗಿದೆ.

'' ದೀಯತೆ ಲಿಂಗ ಸಂಬಂಧ
ಕ್ರಿಯತೇಚ ಮಲತ್ರಯ
ದೀಯತೇ ಕ್ರಿಯಯೇನ್ ಸಂ
ದೀಕ್ಷೇತಿ ನಿರದ್ಯತೆ ''[೨೯]

ಎಂಬ ಮೇಲಿನ ವಾಕ್ಯವು ಶಿಷ್ಯಾಚಾರ್ಯವಾಗಿ ಕರ್ಮಗಳಲ್ಲಿ ಯೋಗ್ಯತೆಯನ್ನುಂಟು ಮಾಡುತ್ತದೆ. ಅಲ್ಲದೆ ಲಿಂಗ ಹಾಗೂ ದೀಕ್ಷೆಯ ಸಂಬಂಧ ಅನನ್ಯವಾದುದು. ವಿಶಾಲವಾದ ಜಗದಗಲ ಮುಗಿಲಗಲ ಆಕಾಶದೀಚತ್ತತ್ತ [೨] ಎಂಬಂತಾಗುವುದು. ಇಲ್ಲಿ ಮಲ, ಮಾಯ ಮಲ, ಕಾರ್ಮಿಕ ಮಲ, ವೆಂಬ ಮಲತ್ರಯಗಳನ್ನು ನಾಶ ವಾಗಯತ್ತವೆ. ನಂತರ ಸ್ಥೂಲ, ಸೂಕ್ಷ್ಮ ಕಾರಣಗಳಿಗೆ ಶಿವದೀಕ್ಷಾ ಸಂಸ್ಕಾರ ಮಾಲೆ ಪೂರ್ವಾಶ್ರಿತ ಸೂತಕ ಕಳೆದು ತ್ಯಾಗಾಂಗ ಭೋಗಾಂಗ, ಯೋಗಾಂಗಗಳ ಮಾಡಿ ಪ್ರತಿ ಶುದ್ಧಾಂಗಕ್ಕೆ ಇಷ್ಟ ಪ್ರಾಣ ಭಾವ ಲಿಂಗ ಸಂಬಂಧ ಹಾಗೂ ಸಂಪರ್ಕಗಳನ್ನು ಕಲ್ಪಿಸುತ್ತವೆ. ಲಿಂಗದೀಕ್ಷೆಯಿಂದ ಸಾಧಕ ಸುಮಾರ್ಗದತ್ತ ನಡೆಯಲು ಅನುಕೂಲವಾಗುತ್ತದೆ.

''ಸಾಮಾಜಿಕ ಮತ್ತು ಧಾರ್ಮಿಕ ಸಮತೆಯ ಲಾಂಛನವಾಗಿತ್ತು. ಇನ್ನೊಂದು ಕಡೆ ಅಂತರಂಗ ಅರುಹಿನ ಕರುಹುವಾಗಿತ್ತು. ಈ ಕುರುಹು ಎದೆಯಲ್ಲಿರುವ ಸಾಧನವಾಗಿತ್ತು''.[೩೦] – ಎಂದು ಲಿಂಗದೀಕ್ಷೆಯ ಪರಿಕಲ್ಪನೆ ಮಹತ್ವತೆಯನ್ನು ಸಾರಿ ಹೇಳಿದ್ದಾರೆ. ಗುರುವಿನಿಂದ ಪಡೆದ ಲಿಂಗದೀಕ್ಷೆಯನ್ನು ಸ್ಥೂಲ ಸೂಕ್ಷ್ಮ ಕಾರಣ, ಶರೀರಗಳಿಗೆ ಅಂಟಕೊಂಡ ಮಲ, ಮೋಹ ಬಂಧನದಿಂದ ಮುಕ್ತಗೊಳಿಸುವುದೇಲಿಂಗದೀಕ್ಷೆಯಾಗಿರುತ್ತದೆ. ಲಿಂಗಕ್ಕೆ ಶಿವಸ್ವರೂಪಕತೆ ಯೆಂದು ಅರಿತು ಪೂಜಿಸುವರು. ಧಾರ್ಮಿಕ ಆಚರಣೆಗಳು, ಆಲೋಚನೆಗಳು ಇಲ್ಲಿ ಸಾರ್ವತ್ರಿಕಗೊಳಿಸಿವೆ.

''ಷಟಸ್ಥಲ ಅವಲಂಬಿಯಾಗಿರುವ ಸಾಧಕನಿಗೆ ಯಾವಾಗಲು ಅರುಹಿನ ಕುರುಹು ಬೇಕೆ ಬೇಕು. ಅದಕ್ಕಾಗಿ ಗುರುವಿನ ಮೊರೆ ಹೋಗಬೇಕಾಗುತ್ತದೆ. ಶಿಷ್ಯನ ಮಟ್ಟ ಪರೀಕ್ಷಿಸಿದ ಗುರುವು ಅವನ ಉದ್ಧಾರಕ್ಕೆಂದು ಮಸ್ತಕದ ಮೇಲೆ ಹಸ್ತವನ್ನಿಟ್ಟು ಕರದಲ್ಲಿರಲೆಂದು ಉದರ ಸಂಸ್ಕೃತಿಯಾದ ಇಷ್ಟಲಿಂಗಧಾರಣೆಯ ಕ್ರಿಯೆಯನ್ನು ನೆರವೇರಿಸುತ್ತಾರೆ. ಈ ಕ್ರಮವಾಗಿರುತ್ತದೆ''.[೩೦] ಗುರುವಿನಿಂದ ದೀಕ್ಷೆಪಡೆದ ವ್ಯಕ್ತಿ ಪರರ ಹಂಗಿನಲ್ಲಿರದೇ ಲಿಂಗಪೂಜೆಯ ನೆರವೇರಿಸುತ್ತಾನೆ. ಧ್ಯಾನದಲ್ಲಿಯೇ ತಲ್ಲಿನರಾಗಿರುತ್ತಾನೆ. ಬಸವಣ್ಣನವರು ಹೇಳಿರುವಂತೆ ''ಲಿಂಗಕ್ಕೆಂದೆ ನೆನೆವೆ, ಲಿಂಗಕ್ಕೆಂದೆ ಮಾಡುವೆ, ಲಿಂಗಕ್ಕೆಂದೆ ಕೊಡುವೆ ನಾನಯ್ಯ, ಸಕಲ, ಪದಾರ್ಥಂಗಳ ಲಿಂಗಕ್ಕೆಂದೆ ಭಾವಿಸುತ್ತಾರೆ. ಲಿಂಗದೀಕ್ಷೆ ಧಾರ್ಮಿಕ ಕ್ರಿಯಾ ವಿಧಿಯನ್ನು ಪಾಲಿಸಿಕೊಂಡು ಬರುವ ಒಂದು ಸಾಧನವಾಗಿದೆ''.

"ಇಷ್ಟಲಿಂಗವನ್ನು ಪ್ರಾಣಲಿಂಗವೆಂದು ಕರೆದು, ಅದನ್ನು ಪ್ರಾಣದಂತೆ ಶರೀರದಿಂದ ಅಗಲಿಸದೇ ಧರಿಸಬೇಕೆಂದು ಆಜ್ಞೆ ಮಾಡಿರುತ್ತಾರೆ".[೨೨] ಲಿಂಗದೀಕ್ಷೆಯನ್ನು ಪಡೆಯಲಿರುವ ಸಾಧಕನಿಗೆ ಗುರುಗಳು ಧಾರ್ಮಿಕ ತತ್ವಾಚರಣೆಗಳನ್ನು ಪರಿಪಾಲಿಸಿಕೊಂಡು ಬರಲು ಕಟ್ಟುನಿಟ್ಟಾದ ನಡೆವಳಿಕೆಯನ್ನು ಬೋಧಿಸುತ್ತಾನೆ.

ಶರಣರು ಸಮಾಜದ ಬದುಕನ್ನು ತೀವ್ರವಾಗಿ ಅನುಭವಿಸುತ್ತ, ವ್ಯಕ್ತಿತ್ವದ ನಿಜನೆಲೆಯನ್ನು ಕಾಣುವತ್ತ ಪ್ರಬೋಧಿಸಿ, ಸಮಾಜದಲ್ಲಿ ಆರ್ಥಿಕ ಮುಗ್ಗಟ್ಟನ್ನು ಸುಧಾರಿಸುವ ಸಲುವಾಗಿ ಈ ಲಿಂಗದೀಕ್ಷೆಯನ್ನು ಕೊಡುತ್ತಾರೆ. ದೂರದ ಪವಿತ್ರ ಕ್ಷೇತ್ರಗಳಿಗೆ, ಗುಡಿ ಗುಂಡಾರಗಳಿಗೆ ಹೋಗಿ ದರ್ಶನ ಪಡೆಯಬೇಕಾದರೆ ಹಣ ಅನಾವಶ್ಯಕ ವೆಚ್ಚವಾಗಿರುತ್ತದೆ. ಇದರಿಂದ ಎಷ್ಟೋ ಜನರು ಸಾಲ ಸೂಲ ಮಾಡಿ ದೂರದಲ್ಲಿರುವ ದೇವಾಲಯಗಳಿಗೆ ಹೋಗಿ ದರ್ಶನ ಪಡೆಯುತ್ತಾರೆ. ಇದನ್ನರಿತ ಶರಣರು ದೇವರು ದೂರ ಇಲ್ಲ. ಆತ ನಿಮ್ಮಲ್ಲಿಯೇ ಇದ್ದಾನೆ. ನಿಮ್ಮೊಳಗೆ ನಿವು ತಿಳಿದು ನೋಡಿರಿ – ಎಂದು ಬೊಧಿಸುತ್ತಾರೆ. ಅಂಬಿಗರ ಚೌಡಯ್ಯ ನಂತು ಹೀಗೆ ಮಾಡುವವರನ್ನು ಬಲವಾಗಿ ಖಂಡಿಸಿದ್ದಾರೆ.

" ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗಿ
ಹೊಟ್ಟಡಿಯಾಗಿ ಬೀಳುವ ಲೊಟ್ಟೆ ಮೂಳನ ಕಂಡಡೆ
ಮೆಟ್ಟಿದ ಎಡ ಪಾದರಕ್ಷೆಯ ತಗೊಂಡು ಲಟಲಟನೆ
ಹೊಡೆಯೆಂದಾತ ನಮ್ಮ ಅಂಬಿಗರ ಚೌಡಯ್ಯ"[೨೩]

ಗುರುವಿನಿಂದ ಲಿಂಗದೀಕ್ಷೆಯನ್ನು ಪಡೆದ ನಂತರ ಇಷ್ಟಲಿಂಗ ಪೂಜಿಸುವೆ, ಈ ಲಿಂಗದಲ್ಲಿಯೇ ಸರ್ವಸ್ವ ಅಡಗಿದೆ. ಈ ಲಿಂಗ ಬಿಟ್ಟು ದೂರದ ಲಿಂಗಕ್ಕೆ ಹೋಗಿ ಪೂಜಿಸುವವರಿಗೆ ದರ್ಶನ ಪಡೆಯುವವರಿಗೆ ನೆಮ್ಮದಿ ದೊರೆಯುವದಿಲ್ಲ. ತಮ್ಮ ತಮ್ಮ ಆರ್ಥಿಕ ಮಟ್ಟವನ್ನು ಸುಧಾರಿಸಬೇಕಾದರೆ, ದೂರದಲ್ಲಿರುವ ಬೆಟ್ಟದ ಲಿಂಗಕ್ಕೆ ಹೊಗಬಾರದು. ನಿಮ್ಮ ಎದೆಯ ಮೆಲಿರುವ ಲಿಂಗಕ್ಕೆ ಪೂಜಿಸಿದರೆ, ನಿಮ್ಮ ನಿಮ್ಮ ಅರ್ಥಿಕ ಮಟ್ಟ ಸುಧಾರಿಸುತ್ತದೆ. ಆದ್ದರಿಂದಲೇ"ಲಿಂಗ ಮಧ್ಯ ಜಗತ್ ಸರ್ವಂ" ಎಂದು ಹೇಳಿರುವದು ಸತ್ಯಂಶವಾಗಿದೆ.

ವೀರಶೈವ ಧರ್ಮ ಹಾಗೂ ಶರಣ ಸಂಸ್ಕೃತಿಯ ಪ್ರಕಾರ ಮಗುವು ಜನಿಸಿದ ೮ನೇ ವರ್ಷದಿಂದ ೧೬ನೇ ವರ್ಷದೊಳಗಿನ ಸ್ತ್ರೀ ಪುರುಷರಿಗೆಲ್ಲರಿಗೂ ದೀಕ್ಷಾ ಸಂಸ್ಕಾರ ಕೊಡುವ ಸಂಪ್ರದಾಯವಿದೆ. ಮಾಹೇಶ್ವರ ವಟುಗಳಿಗೆ ಅಯ್ಯಾಚಾರ ಮಾಡುವುದು ಉತ್ತಮ. ೧೬ ವರ್ಷದ ನಂತರ "ಲಿಂಗದೀಕ್ಷೆ" ತೆಗೆದುಕೊಳ್ಳುವುದು ಅಧಮವಾಗಿರುತ್ತದೆ. ದೀಕ್ಷಾಮಯವಾಗಬೇಕಾದರೆ, ಅದರ ಆಚಾರ ವಿಚಾರ,

ನಿಯಮಗಳಿಗೆ ತಕ್ಕ ಬದ್ಧರಾಗಿ ನಡೆಯಬೇಕು. ಪುಣ್ಯಕರವಾದ ಮಂತ್ರದ ಕಡೆಗೆ ಗಮನವಿಟ್ಟು ಭಕ್ತಿಯಿಂದ ಯೋಗ್ಯ ಗುರುಮುಖೇನ ಸಂಸ್ಕಾರವನ್ನು ಹೊಂದಿ ಧನ್ಯರಾಗಬೇಕಾಗುತ್ತದೆ.

ಒಟ್ಟಾರೆಯಾಗಿ ಲಿಂಗದೀಕ್ಷೆಯೂ ವಿವಿಧ ಕಾಲ ಘಟ್ಟಗಳಲ್ಲಿ ವಿಭಿನ್ನರೀತಿಗಳಿಂದ ಕ್ರಿಯಾತ್ಮಕಗೊಂಡು ವಿವಿಧ ಸೆಳೆಕುಗಳನ್ನು ಇಡೀ ದೇಶದುದ್ದಕ್ಕೂ ಸ್ಥಾಪಿಸಿಕೊಂಡಿದೆ. ಸಾಮಾಜಿಕ ಆಚರಣೆಗಳು ಸಮಾನ ರೀತಿಯಿಂದ ಸಾರ್ವತ್ರಿಕಗೊಳಿಸಿದೆ. ಮನುಷ್ಯರು ನೈತಿಕವಾಗಿ ನಡೆ – ನುಡಿ ಶುದ್ಧವಾಗಿ ನಡೆಯಬೇಕೆಂಬ ನಿಬಂಧನೆ ಇದಾಗಿದೆ.

ಹೀಗೆ ಲಿಂಗ ದೀಕ್ಷೆಯು ಸಾಮಾಜಿಕ, ಧಾರ್ಮಿಕ, ಆರ್ಥಿಕ, ಬೌದ್ಧಿಕ ಮಟ್ಟವನ್ನು ಸುಧಾರಿಸಲು ಸಾಧನವಾಗಿ ಬಳಕೆಯಾಗಿದೆ. ಅಲ್ಲದೆ ಆಸ್ತಿತ್ವದ ನೆಲೆಯನ್ನು ಕುರಿತು ಹೊಸ ಹೊಸ ಆಲೋಚನೆಗಳು ಹಾಗೂ ಬದಲಾವಣೆಗಳನ್ನು ಹೊಂದಿದೆ. ವಿವಿಧ ಕ್ರಾಂತಿಪುರುಷ ಶರಣರು, ಚಿಂತಕರು, ಭಕ್ತರು, ಜಂಗಮರು ಈ ನಿಟ್ಟಿನಲ್ಲಿ ಚಿಂತಿಸಿದ ರೀತಿ ಗಮನಾರ್ಹ. ಹೈದ್ರಾಬಾದ – ಕರ್ನಾಟಕ ಭಾಗದಲ್ಲಿರುವ ವೀರಶೈವ ಮಠಾಧೀಶರು ಕೊಡುವ ಲಿಂಗದೀಕ್ಷೆ ಸಂಪ್ರದಾಯ ಪ್ರಾಚೀನವಾದುದ್ದು. ಭಾಲ್ಕಿ ಹಿರೇಮಠ, ಹುಲಸೂರ ಗುರುಬಸವೇಶ್ವರ ಸಂಸ್ಥಾನ ಮಠದ ಪರಮಪೂಜ್ಯರಾದ ಮ. ನಿ. ಪ್ರ. ಶಿವಾನಂದ ಮಹಾಸ್ವಾಮಿಗಳು ಲಿಂಗದೀಕ್ಷೆಯನ್ನು ಕೊಡುವ ಸಂಸ್ಕೃತಿ ಹೆಚ್ಚಾಗಿ ಕಂಡು ಬರುತ್ತದೆ. ಗುಲಬರ್ಗಾ ಜಿಲ್ಲೆಯ ಖಜೂರಿ ವಿರಕ್ತ ಮಠವು ಲಿಂಗದೀಕ್ಷೆಯ ಕೊಡುವ ಮಠ ವೆಂದೇ ಪ್ರಸಿದ್ಧ ಪಡೆದುಕೊಂಡಿದೆ. ಇನ್ನು ಹಲವಾರು ಈ ರೀತಿ ಮಠಗಳಲ್ಲಿ ಲಿಂಗದೀಕ್ಷೆ ಕೊಡುವ ಸಂಪ್ರದಾಯ ಬೆಳೆದು ಬಂದಿದೆ.

### ೧.೫ ಗದ್ದುಗೆ ಪೂಜೆ

ಗದ್ದುಗೆ ಪೂಜೆ ಎಂಬುದು ಶಿವಸ್ವರೂಪಿಯಾದ ಮಠಾಧೀಶರು ಅಥವಾ ಲಿಂಗೈಕ್ಯರಾದ ಪ್ರಮುಖ ಜಂಗಮರ ಧ್ಯೋತಕವಾಗಿದೆ. ಜೀವತ್ವ ಶಿವತ್ವ ಶರಣತ್ವ, ರೂಪಕ್ಕೆ ''ಆಕೃತಿ'' ಎಂದು ಶರಣರ ನಿಲುವು. ಲಿಂಗಸ್ವರೂಪಿಯಾದ ನಿಜ ಶರಣರನ್ನು ಅವಲಂಬಿಸಿರುತ್ತದೆ. ವೀರಶೈವ ತತ್ವಗಳಾದ ಷಟಸ್ಥಲಗಳಲ್ಲಿ ಭಕ್ತ ಮಹೇಶ, ಪ್ರಸಾದ ಪ್ರಾಣಲಿಂಗ, ಶರಣ ಹಾಗೂ ಐಕ್ಯ – ಗಳೆಂಬ ಆರು ಅಂಗ ಸ್ಥಳಗಳಿವೆ. ಈ ಕೊನೆಯ ಐಕ್ಯ ಸ್ಥಳವೆ ಶಿವನಲ್ಲಿ ಲೀನವಾಗುವುದು. ''ಅಂಗಗಳೇ ಲಿಂಗದಲ್ಲಿ ಕೂಡಿಹೋಗುವುದನ್ನು ನಿವೃತ್ತಿ ಎಂದು ಕರೆಯುತ್ತಾರೆ. ಹೀಗೆ ಲೋಕದಲ್ಲಿ ಪ್ರವೃತ್ತನಾದ ಲಿಂಗವೇ ಅಂಗಸ್ವರೂಪದಲ್ಲಿದ್ದು ಪುಃನ ಲಿಂಗದತ್ತ ನಡೆದು ನಿವೃತ್ತಿಯಾಗುವುದು ಅಂದರೆ ಅಂಗ ಲಿಂಗದಲ್ಲಿ ಸೇರುವುದೇ ಲಿಂಗಸಾಮರಸ್ಯ''.[೩೪] ಐದು ಅಂಗಗಳು

ವಿಮುಕ್ತಿ ಹೊಂದಿ ಕೊನೆಗೆ ಐಕ್ಯನಾಗುವುದಕ್ಕೆ ಸಂಕೇತವಾಗಿ ''ಗದ್ದುಗೆ'' ಯನ್ನು ನಿರ್ಮಿಸಿ, ಪೂಜಿಸುತ್ತಿರುವುದು ಕಂಡು ಬರುತ್ತದೆ.

ಶರಣರು ಈ ಪದ್ಧತಿಯನ್ನು ''ಗದ್ದುಗೆ'' ಯೆಂದು ಕರೆದರೆ, ಜನ ಸಾಮಾನ್ಯರು ''ಸಮಾಧಿ'' ಯೆಂದು ಕರೆಯುವದು ರೂಢಿಯಲ್ಲಿದೆ. ಮುಸ್ಲಿಂ ಸಂಪ್ರದಾಯದಲ್ಲಿ ಇಂತಹ ಪದ್ಧತಿಗೆ ''ಗೋರಿ'' ಗಳೆಂದು ಕರೆಯುತ್ತಿದ್ದರು. ಶರಣರು ಗುರು – ಲಿಂಗ , ಜಂಗಮ ಎಂಬ ಭಾವನೆಯಿಂದ ಪರತತ್ವದಲ್ಲಿ ಬೆರೆಯುತ್ತಾರೆ. ಅಂದರೆ, ಲಿಂಗದಲ್ಲಿ ಲೀನವಾಗುತ್ತಾರೆ. ಲಿಂಗೈಕ್ಯನಾದ ಜಂಗಮನ ರೂಪ ದೇಹವನ್ನು ಭೂಮಿಯಲ್ಲಿ ನಿಯಮಾನುಸಾರ ತಗ್ಗು ತೋಡಿ ಹೂಳುವುದಕ್ಕೆ ಸಮಾಧಿ ಎಂದು ಕರೆಯುತ್ತಾರೆ. ಈ ಸಮಾಧಿಯ ಮೇಲೆ ನಿರ್ಮಿಸಿದ ಕಟ್ಟೆಗಳಿಗೆ ಗದ್ದುಗೆಗಳೆಂದು ಕರೆಯುತ್ತಾರೆ. ಎರಡು ಒಂದೇ ಅರ್ಥದಲ್ಲಿ ಬಳಕೆಯಾಗುತ್ತದೆ.

### ಸ್ಥಳ

ಸಮಾಧಿಯನ್ನು ಮಠ ಸ್ಥಲದ ಸಮೀಪದಲ್ಲಾಗಲಿ, ಶಿವದೇವಸ್ಥಾನದ ಹತ್ತಿರವಾಗಲಿ, ಶಿವ ಸಂಬಧವಾದ ತೋಪು – ತೀರ್ಥದ ಸಮೀಪದಲ್ಲಾಗಲಿ, ನದಿ ದಂಡೆ ಹೂದೋಟಗಳಲ್ಲಾಗಲ್ಲಿ, ಮಾಡಲಾಗುತ್ತದೆ. ಒಂದು ಶುಭ ಸ್ಥಳವನ್ನು ನಿರ್ಧರಿಸಿ, ಆ ಸ್ಥಳವನ್ನು ಗೋವಿನ ಸಗಣಿಯಿಂದ ಸಾರಿಸಬೇಕು. ನಂತರ ''ಓಂ ಹ್ರಾಂ ಪ್ರಥಿವ್ಯೆ ನಮಃ'' ಎಂಬ ಮಂತ್ರದಿಂದ ಜಲ, ಗಂಧ ಅಕ್ಷತೆ, ಪತ್ರಿ ಪುಷ್ಪಗಳಿಂದ ಭೂಮಿ ಪೂಜೆ ಮಾಡಬೇಕು.

### ಸಮಾಧಿಯ ಆಕಾರ

ಐದು ಪಾದ ಸುತ್ತ ಚೌಕು, ಒಂಬತ್ತು ಪಾದ, ತಗ್ಗು ಅಗಿದ್ದು ಸೋಪಾನಗಳನ್ನು ಉತ್ತರದಲ್ಲಿ ಉದ್ದ – ಅಗಲ – ಎತ್ತರ ೧ ಪಾದಳತೆಯ ೧ನೇ ಸೋಪಾನವನ್ನು ,ಉದ್ದ – ಅಗಲ – ಎತ್ತರ ೨ ಪಾದಳತೆಯ ೨ನೇ ಸೋಪಾನವನ್ನು ಮಾಡತಕ್ಕದು. ಇದು ಸಮಾಧಿಯ ಮಧ್ಯದೊಳು ಮೂರು ಪಾದಗಳ ಅಗಲ ೨ ಪಾದ ಉದ್ದ ೧ ಪಾದ ಎತ್ತರವಾದ ವೇದಿಕೆ ( ಕಟ್ಟೆ) ಯನ್ನು ನಿರ್ಮಿಸುತ್ತಾರೆ, ಈ ವೇದಿಕೆಗೆ ದಕ್ಷಿಣವಾಗಿ ಪೂರ್ವ – ಪಶ್ಚಿಮ – ೨ ಪಾದಗಳ ತ್ರಿಕೋನ ಮಾಡುತ್ತಾರೆ. ಅಂದರೆ ಲಿಂಗೈಕ್ಯನನ್ನು ಕೂಡಿಸಲು ತಳಭಾಗದಲ್ಲಿ ''ಕಿರುಕುಣಿ'' ಯನ್ನು ಮಾಡುತ್ತಾರೆ. ಕಿರುಕುಣಿಯ ಮಧ್ಯದಲ್ಲಿ ಎಡಕ್ಕೆ – ಬಲಕ್ಕೆ ದೀಪವಿಡಲು ಎರಡು ಚಿಕ್ಕದಾದ ಮಾಡಗಳನ್ನು ರಚಿಸುತ್ತಾರೆ.

ನಂತರ ಆ ಸಮಾಧಿಯನ್ನು ಆಕಳ ಸಗಣಿಯಿಂದ ಸಾರಿಸಿ, ಸುಣ್ಣ ಕೆಮ್ಮಣ್ಣುಗಳಿಂದ ಲಕ್ಷಣವಾಗಿ ಬಳಿದು ಬಾಳೆ ಕಂಭ,ಕಬ್ಬು,ಮಾವಿನ ಎಲೆ ತೋರಣಗಳಿಂದ ಅಲಂಕಾರವಾಗಿ ಹಂದರವನ್ನು ಹಾಕುತ್ತಾರೆ. ಅ ತ್ರಿಕೋಣೆಯನ್ನು ಗಾಯತ್ರೀ ಮಂತ್ರ ಜಪದ ಜಲದಿಂದ ಪ್ರೇಕ್ಷಣ ಮಾಡುತ್ತಾರೆ.

''ಯಾತೇ ರುದ್ರ ಶಿವಾತದೂ ರಘೋರಾ ಪಾಪಕಾಶಿನಿ : ತಯಾನಸ್ತನುವಾಶಂತ ಮಯಾಗಿರಿಶಂತಾ ಭಿಚಾಕಶೀಹಿ''.[೨೫]

ಎಂಬ ಮಂತ್ರದಿಂದ ಅಲ್ಲಿಯ ರಂಗವಲ್ಲಿಯನ್ನು ಹಾಕುತ್ತಾರೆ. ದೀಪಗಳನ್ನು ಹಚ್ಚಿ ಧೂಪದಿಂದ ವಾಸನಾ ವಿಶಿಷ್ಟವನ್ನಾಗಿ ಮಾಡುತ್ತಾರೆ. ನಂತರ ತ್ರೀಕೋಣೆಯಲ್ಲಿ ಭಸ್ಮ – ಹರಡಬೇಕು.

ತಗಡು ಸ್ಥಾಪಿಸುವುದು

ಹೀಗೆ ಸಮಾಧಿಯನ್ನು ರಚಿಸುತ್ತಾರೆ. ನಂತರ ತಾಮ್ರದ ತಗಡಿನ ತುಂಡುಗಳಲ್ಲಿ ಲಿಂಗಮುದ್ರೆಯನ್ನು ಹಾಕಿಸಿ, ಒಟ್ಟು ಹನ್ನೊಂದು ಲಿಂಗಮುದ್ರೆಯನ್ನು ಸ್ಥಾಪಿಸುತ್ತಾರೆ. ಸಮಾಧಿಯ ಪೂರ್ವ ಗೋಡೆಯ ''ಅ ಬಸವ'' – ಎಂಬ ನಾಲ್ಕು ಅಕ್ಷರಗಳನ್ನು ಬರೆದು ತಗಡನ್ನು ಸ್ಥಾಪಿಸಬೇಕು. ಇದರಂತೆ ಪಶ್ಚಿಮ ಗೋಡೆಗಳಲ್ಲಿ ''ಮ, ಓಂನಮ ಶಿವಾಯ'' – ಈ ಏಳು ಅಕ್ಷರಗಳನ್ನು ಬರೆಯಿಸಿ ಮುದ್ರೆ ಒತ್ತಬೇಕು. ದಕ್ಷಿಣ ಗೋಡೆಯಲ್ಲಿ ಓ ಹ್ರಾಂ ಹ್ರೀಂ ಹ್ರೂಂ ಹೈಂ ಹೋಂ ಹ್ರೌಂ ಹಃ – ಈ ಎಂಟು ಬರೆದು ಹಚ್ಚಬೇಕು-ತ್ರಿಕೋಣದ ಮೇಲ್ಭಾಗದಲ್ಲಿ ''ಹ'' ಬರೆಯಬೇಕು. ಅದರ ಬೆನ್ನಿನಲ್ಲೇ ''ಹಓಂಕ್ಷ '' ಎಂಬ ಎರಡು ಮೂರು ಅಕ್ಷರ ಬರೆಯಬೇಕು. ನಂತರ ಒಂಬತ್ತು ''ಳ'' ಗಳನ್ನು ಬರೆಯಬೇಕು. –ಹೀಗೆ ಇನ್ನು ಮುಂತಾದ ತಗಡುಗಳನ್ನು ಸ್ಥಾಪಿಸಬೇಕು.

''ಆ ಕಾರಂ ವಾಮಭಾಗೇಚ
ಉ ಕಾರಂ ಪೂರ್ವ್ವವೇಚ
ಮ ಕಾರಂ ಪಶ್ಚಿಮ ಶ್ಚೈವ
ಓಂ ಕಾರಂ ದಕ್ಷಿಣ ಸ್ಥದಾ
ದ ಕಾರಂ ಋರ್ಧ್ವ ಭಾಗೇಚ !
ಲಿಂಗ ಪ್ರಾಣ ಮಂತ್ರ ಲಕ್ಷಣಂ
ಬಸವಕ್ಷರಂತು ಪೂರ್ವಂ !
ಅ.ಪ. ಮೋಕ್ಷರಂತು ಪಶ್ಚಿಮ !

ಉತ್ತರರಂ ಷಡಕ್ಷರಂ ಚೈವ:

ಪಂಚ ಪ್ರಸಾದ ದಕ್ಷಣೆ ಓಂ ಕಾರಂ ಉದನಂ ದೇವಿ

ನಮಕಾರ ಭುಜ ದ್ವಯಂ

ಶಿಕಾರಂ ದೇಹ ಮಧ್ಯಸಂ

ವಕಾರ ಪದದ್ವಯಂ

ಇಂತಿವು ಲಿಂಗೈಕ್ಯರಾದ ಭಕ್ತಮಹೇಶ್ವರುಗಳಿಗೆ ಸಾಧಿಸವುದು:'' ೩೬

ಲಿಂಗೈಕ್ಯನ ಶರೀರದಲ್ಲಿ ಮೇಲಿನಂತಿಹ ತಗಡುಗಳನ್ನು ತಯ್ಯಾರಿಸಿ, ಆ ತಗಡು ಮಂತ್ರಯುಕ್ತವಾಗಿ ಶವದ ದೇಹದಲ್ಲಿ ಸೇರಿಸುತ್ತಾರೆ. ಕೆಲವೊಂದು ರೀತಿ ಇಂತಹ ಸಾಂಪ್ರದಾಯ ಇಂದಿನ ಕಾಲದಲ್ಲಿಯೂ ಕಂಡು ಬರುತ್ತದೆ. ಇವುಗಳಿಲ್ಲದೆ ಇನ್ನೊಂದು ರೀತಿಯ ತಗಡುಗಳನ್ನು ತಯ್ಯಾರಿಸಿ ಮೃತರ ದೇಹದಲ್ಲಿ ಸೇರಿಸುತ್ತಾರೆ. ಅವು ಯಾವುವೆಂದರೆ, ಮುಂದಿನಂತಿವೆ.

ಲಿಂಗೈಕ್ಯನ ದೇಹದ ಅಂಗಾಂಗಳಲ್ಲಿ ಧರಿಸುವ ತಗಡುಗಳನ್ನು ನೋಡುವುದಾದರೆ ಲಿಂಗೈಕ್ಯನ ನಾಲಿಗೆಯಲ್ಲಿ '' ಓಂ '' ಅಕ್ಷರ ಬರೆದ ತಗಡನ್ನು ಬಲಭುಜದಲ್ಲಿ , ''ನ '' ಅಕ್ಷರ ಬರೆದ ತಗಡನ್ನು ಎಡ ಭುಜದಲ್ಲಿ , '' ಮ '' ಅಕ್ಷರ ಬರೆದ ತಗಡನ್ನು ಹೊಕ್ಕಳಲ್ಲಿ , ''ಶಿ '' ಅಕ್ಷರ ಬರೆದ ತಗಡನ್ನು ಬಲಪಾದದಲ್ಲಿ , ''ವ ''ಅಕ್ಷರ ಬರೆದ ತಗಡನ್ನು ಎಡಪಾದದಲ್ಲಿ , '' ಯ '' ಅಕ್ಷರ ಬರೆದ ತಗಡನ್ನು ಎದೆ ಗುಂಡಿಗೆಯಲ್ಲಿ , ''ಎ ಬಸವ '' ಅಕ್ಷರ ಬರೆದ ಬೆನ್ನಿನಲ್ಲಿ ''ಮ ಅ ಉ ಮ '' ಅಕ್ಷರ ಬರೆದ ಎಡಬದಿಯಲ್ಲಿ '' ಅ ಓಂ ನಮಃ ಶಿವಾಯ '' ಈ ಎಳಕ್ಷರ ಬರೆದ ಬಲಬದಿಯಲ್ಲಿ '' ಓಂ ಹ್ರಾಂ ಹ್ರೀಂ ಹ್ರೂಂ ಹ್ರೈಂ ಹ್ರೊಂ ಹ್ರೌಂ ಎಂಬ ಎಂಟು ಪ್ರಮಾಣಕ್ಷರವನ್ನು ಬರೆದ ತಗಡನ್ನು ಧರಿಸುವುದು.

ಮಂತ್ರ ಗೌಪ್ಯದಿಂದ ತಯಾರಿಸಿದ ನಾನಾ ರೀತಿಯ ತಗಡುಗಳನ್ನು ಲಿಂಗೈಕ್ಯನ ದೇಹದಲ್ಲಿ ತೊಡಿಸಿ ಲಿಂಗ ಶರೀರಕ್ಕೆ ಹೊಲಿದು, ತಯ್ಯಾರಿಸುತ್ತಾರೆ. ಒಂದು ಹೊಸ ಬಟ್ಟೆಯ ಚೀಲ ಮಾಡಿ ಅದರಲ್ಲಿ ಬಿಲ್ವ ಪತ್ರಿ ವಿಭೂತಿಗಳಿಂದ ತುಂಬಿ ಸಮಾದಿ ತ್ರಿಕೋಣದಲ್ಲಿ ಸರಿಯಾಗಿ ಕೂಡಿಸುತ್ತಾರೆ. ನಂತರ ವಿಭೂತಿ ಕಲಿಸಿ ಲೆಪಿಸಿದ ಮಣ್ಣಿನ ಹೆಂಟೆಯನ್ನು ''ಲಿಂಗ ಶರೀರ'' ದ ತಲೆ ಮೇಲಿಟ್ಟು ಮಣ್ಣಿನ ಉಂಡೆಗಳಿಂದ ತ್ರಿಕೋಣೆಯನ್ನು ಭದ್ರವಾಗಿ ಮುಚ್ಚುತ್ತಾರೆ. ತ್ರಿಕೋಣದ ಬಾನಿಂಗೆ ಒಂದು ತೆಳುವಾದ ಕಲ್ಲನ್ನು ಇಟ್ಟು ಮಣ್ಣಿನಿಂದ ಚೆನ್ನಾಗಿ ಆ ತೆಗ್ಗನ್ನು ತುಂಬಿ ಭೂಮಿಯ ಸಮನಾಗಿ ಮಾಡುತ್ತಾರೆ. ನಂತರ ಆ ಸಮಾಧಿಯ ಮೇಲ್ಭಾಗದಲ್ಲಿ ಕಲ್ಲಿನ ಲಿಂಗವನ್ನು ಸ್ಥಾಪಿಸುತ್ತಾರೆ. ಕೊನೆಗೆ ಜಂಗಮರ ಪಾದವನ್ನು ಆ ಸಮಾಧಿಯ ಮೇಲಿಟ್ಟು

ಲಿಂಗೈಕ್ಯನ ಸಂಬಂಧಿಕರು ಪಾದಪೂಜೆ ಲಿಂಗ ಪೂಜಾ ವಿಧಾನವನ್ನು ಮಾಡುತ್ತಾರೆ. ಸರ್ವರು ಪುಷ್ಪಾಂಜಲಿ ಮಾಡಿ ಜಯಘೋಶ ಮಾಡುತ್ತಾರೆ.

ಪ್ರಕಾರಗಳು

ಹೀಗೆ ಸಮಾಧಿಯ ವಿಧಿ ವಿಧಾನಗಳಿಂದ ರೂಪಗೊಂಡುದನ್ನೆ ಶರಣರು '' ಗದ್ದುಗೆ '' ಎಂದು ಕರೆಯುತ್ತಾರೆ. ಈ ಸಮಾಧಿಯಲ್ಲಿ ಕೆಲವು ಪ್ರಕಾರಗಳು ಕಂಡು ಬರುತ್ತವೆ.

| | | |
|---|---|---|
| ೧. ಕ್ರಿಯಾರೂಪ ಸಮಾಧಿ | ೧.೧ | ಸತ್ ಕ್ರಿಯಾ ಸಮಾಧಿ |
| | ೧.೨. | ಗೋಮುಖ ಸಮಾಧಿ |
| | ೧.೩. | ಗೋಕುಳ ಸಮಾಧಿ |
| | ೧.೪. | ಬಯಲು ಸಮಾಧಿ |
| ೨. ಜ್ಞಾನ ರೂಪ ಸಮಾಧಿ | ೨.೧. | ನಿರ್ವಾಣ ಸಮಾಧಿ |
| | ೨.೨. | ಸಚ್ಚಿದಾನಂದ ಸಮಾಧಿ |
| | ೨.೩. | ನಿರ್ವಯ ಸಮಾಧಿ |
| | ೨.೪. | ನಿಜಶಿವ ಸಮಾಧಿ |

ಹೀಗೆ ಮುಂತಾದ ರೀತಿಯಲ್ಲಿ ಕಂಡು ಬಂದರೂ ೧) ಸ್ಥಳ ಸಮಾಧಿ ( ಜೀವಂತ ಸಮಾಧಿ) ೨) ಜಲ ಸಮಾಧಿ (ನೀರಿನಲ್ಲಿ) ೩) ಅಗ್ನಿ ಸಮಾಧಿ ( ಬೆಂಕಿಯಲ್ಲಿ) – ಹೀಗೆ ಸಮಾಧಿಗಳಲ್ಲಿ ನಾನಾ ಪ್ರಕಾರಗಳಿವೆ.ಇವು ಮೂರು ರೀತಿಯ ನಿಯಮಗಳಿಲ್ಲಿ '' ಹಠಯೋಗ '' ಇದ್ದವನಿಗೆ ಮಾತ್ರ ಅನ್ವಯಿಸುತ್ತದೆ. ಇವುಗಳಲ್ಲಿ ಒಟ್ಟು ಹನ್ನೊಂದು ರೀತಿಯ ಸಮಾಧಿಗಳು ಕಂಡು ಬರುತ್ತವೆ. ತಮ್ಮ ತಮ್ಮ ಸಂಪ್ರದಾಯಕ್ಕೆ ತಕ್ಕಂತೆ ಈ ಸಮಾಧಿಗಳನ್ನು ರಚಿಸುತ್ತಾರೆ. ಅದರ ಮೇಲೆ ಅಂದರೆ ಭೂಮಿಯ ಮೇಲೆ ನಾಲ್ಕು ಅಡಿ ಅಥವಾ ಐದು ಅಡಿ ಚೌಕಾಕಾರ ದ ಹಾಗೂ ಐದು ಅಡಿ ಎತ್ತರದಿಂದ ಕಲ್ಲಿನಿಂದಲೋ ಇಟ್ಟಂಗಿಯಿಂದಲೋ ನಿರ್ಮಿಸುತ್ತಾರೆ. ಇದಕ್ಕೆ'ಗದ್ದುಗೆ'ಯೆಂದು ಕರೆಯುವುವರು. ಆ '' ಗದ್ದುಗೆ '' ಯ ನಟ್ಟ ನಡುವೆ ''ಲಿಂಗ '' ವನ್ನು ಸ್ಥಾಪಿಸುತ್ತಾರೆ. ಅಥವಾ ಲಿಂಗೈಕ್ಯರಾದ ವ್ಯಕ್ತಿಗಳ ಪ್ರತಿಮೆಯನ್ನೇ ಸ್ಥಾಪಿಸುತ್ತಾರೆ.

ಇನ್ನೂ ಕೆಲವರು ಗದ್ದುಗೆಯ ಮೇಲೆ ಕಟ್ಟಿಗೆಯ ಪಾದಗಳನ್ನೋ ಅಥವಾ ಬೆಳ್ಳಿಯ ಪಾದಗಳನ್ನೋ ಇಟ್ಟು ಪೂಜಿಸುತ್ತಾರೆ. ಸಮಾಧಿಸ್ಥರಾದ ಗದ್ದುಗೆಯು ಸಾಕ್ಷಾತ್ ಪರಶಿವನ ಸ್ವರೂಪವೆಂದೂ ದೇವರೆಂದು ನಂಬಿ ಪೂಜಿಸುತ್ತಾರೆ.

## ಬದಲಾವಣೆ

ನೂತನ ಪೀಠಾಧೀಶರ ಗದ್ದುಗೆ ಅಲ್ಲದೆ ಮಠಾಧೀಶರು ಕೂಡುವ ಆಸನಕ್ಕೆ " ಗದ್ದುಗೆ " ಯೆಂದು ಕರೆಯುವ ಸಂಪ್ರದಾಯವಿದೆ. ಸ್ವಾಮಿಗಳು ಬಂದಿದ್ದಾರೆ, ಗದ್ದುಗೆ ಹಾಕಿ, ಅವರನ್ನು ಕುಳಿತುಕೊಳ್ಳಲು ಹೇಳಿ, ಗದ್ದುಗೆ ಸ್ವಚ್ಛ ಮಾಡಿರಿ, ಎಂಬ ಮುಂತಾದ ಶಬ್ದಗಳನ್ನು ನಾವು ಕೇಳುತ್ತೇವೆ. ಮಠಕ್ಕೆ ಬಂದ ಭಕ್ತರು ಮೊದಲು ಮಠಾಧೀಶರ ಪಾದ ಮುಟ್ಟಿ ದರ್ಶನ ಪಡೆಯುತ್ತಾರೆ. ಅಗ ಸ್ವಾಮಿಗಳು ಮೊಟ್ಟ ಮೊದಲು ಕೇಳುವುದು ಗದ್ದುಗೆಗೆ ಹೋಗಿ ಬಂದಿರಾ? ದರುಶನ ಪಡೆದಿರಾ? ಇಲ್ಲದಿದ್ದರೆ ಗದ್ದುಗೆಗೆ ಹೋಗಿ ದರುಶನ ಪಡೆದುಕೊಂಡು ಬನ್ನಿ, ಎನ್ನುವ ಶಬ್ದಗಳು ಇಂದಿಗೂ ಕೇಳಿ ಬರುತ್ತವೆ. ಲಿಂಗೈಕ್ಯರಾದ ಸಮಾಧಿ ಅಥವಾ ಗದ್ದುಗೆ ಮಠದ ಹೊರಗಡೆ ಅಂದರೆ ಮಠದ ಸ್ಥಳದಲ್ಲಿಯೇ ಇರುತ್ತದೆ. ಆದರೆ ನೂತನ ಪೀಠಾಧಿಪತಿಗಳ ಗದ್ದುಗೆ ಮಠದ ಒಳಗಡೆ ಇರುತ್ತದೆ, ಜೀವಂತ ಸಮಾಧಿಯಾದರೆ ಮಠದ ಒಳಗಡೆ ಸಮಾಧಿಯನ್ನು ಮಾಡಬಹುದು.

ಆದರೆ ಇಂದು ಮಠಕ್ಕೆ ಬಂಧ ಭಕ್ತರು ನೂತನ ಮಠಾಧೀಶರ ಕುರುಹುವಾದ ಆಸನಕ್ಕೆ ದರ್ಶನ ಪಡೆಯುತ್ತಾರೆ. ಶರಣರ ದೃಷ್ಟಿಯಲ್ಲಿ ಇವು ಗದ್ದುಗೆಯ ರೂಪದಲ್ಲಿಯೇ ಗೋಚರಿಸುತ್ತವೆ. ಆ ಗದ್ದುಗೆ ಮೇಲೆ ಇಟ್ಟಿರುವ ಕಟ್ಟಿಗೆಯ ಪಾದಗಳನ್ನು ಮುಟ್ಟಿ ದರ್ಶನ ಪಡೆಯುತ್ತಾರೆ. ಜೀವಂತವಿದ್ದ ಸ್ವಾಮಿಗಳಿಗೂ ಗದ್ದುಗೆಯ ರೂಪದಲ್ಲಿ ಕಾಣುತ್ತೇವೆ. ಶ್ರೀಗಳು ಕೂಡುವ ಆಸನ (ಗದ್ದುಗೆ) ದ ಮೇಲೆ ಶ್ರೀಗಳ ಭಾವಚಿತ್ರವನ್ನೋ ಪಾದಗಳನ್ನೋ ಅಥವಾ ಶ್ರೀಗಳ ದಂಡುಗಳನ್ನೋ ಗುರುವಿನ ಸಂಕೇತವಾಗಿ ಇಡುತ್ತಿದ್ದರು. ಈ ಸಂಕೇತಗಳಿಗೆ ಭಕ್ತರು ಶ್ರೀಗಳಿಂದು ದರ್ಶನ ಪಡೆದುಕೊಂಡು ಹೋಗುವುದು ಕಂಡುಬರುತ್ತದೆ. ಶ್ರೀಗಳು ಹತ್ತಾರು ಧಾರ್ಮಿಕ ಕಾರ್ಯ ಚಟುವಟಿಕೆಗಳಲ್ಲಿ ತೊಡಗಿರುವುದರಿಂದ ದರ್ಶನಕ್ಕೆ ಬಂದ ಭಕ್ತರಿಗೆ ಯಾವುದೇ ರೀತಿಯಿಂದ ತೊಂದರೆಯಾಗಬಾರದೆಂದು ಈ ಸಂಪ್ರದಾಯವನ್ನು ಬೆಳೆಸಿಕೊಂಡು ಬಂದರೆಂದು ತಿಳಿಯುತ್ತದೆ.

ಕೆಲವೊಂದು ಮಠಾಧೀಶರು, ಶರಣರು, ಜಂಗಮರು, ಮೂರ್ತಿ ಪೂಜೆಯನ್ನು, ಗದ್ದುಗೆ ಪೂಜೆಯನ್ನು, ಗುಡಿ – ಗುಂಡಾರಗಳನ್ನು ಅಲ್ಲಗಳೆದಿದ್ದಾರೆ. ಕಟ್ಟಿದ ಲಿಂಗವ ಬಿಟ್ಟು ಬೆಟ್ಟದ ಲಿಂಗಕ್ಕೆ ಹೋಗುವ ಭಕ್ತರನ್ನು ಖಂಡಿಸಿದ್ದಾರೆ. "ಕಡೆದಿಟ್ಟ ಕಲ್ಲಿನ ಲಿಂಗವನ್ನು ಪೂಜಿಸುವುದು ಅಲ್ಲಗಳೆದು ದೇಹವೆಂಬ ದೇಗುಲದೊಳಗಿನ ಲಿಂಗವನ್ನು ಜಾಗೃತಗೊಳಿಸುವ ಸಲುವಾಗಿ ಇಷ್ಟಲಿಂಗವನ್ನು ಕೊರಳಲ್ಲಿಯೋ ರಟ್ಟೆಯಲ್ಲಿಯೋ ಕಟ್ಟಿ ಕೊಳ್ಳುವ ವೈಜ್ಞಾನಿಕ ರೀತಿಯನ್ನು ಅನುಸರಿಸಿ, ವೀರಶೈವರೆನಿಸಿಕೊಂಡರು".[೨೭] ಇನ್ನೂ ಕೆಲವು ಮಠಾಧೀಶರು ಹಳೆಯ ಸಂಪ್ರದಾಯವನ್ನೆ ಮುಂದುವರೆಸಿಕೊಂಡು ಬರುತ್ತಿದ್ದಾರೆ. ಇಂದಿನ ಬದಲಾವಣೆಗಳಿಗೆ ಮಠಾಧೀಶರೇ ಕಾರಣರಾಗುತ್ತಿದ್ದಾರೆ.

### ಜನಪದದಲ್ಲಿ ಗದ್ದುಗೆ

ಜಾನಪದ ಸಾಹಿತ್ಯದಲ್ಲಿಯೂ "ಗದ್ದುಗೆ" ಯ ಶಬ್ದದ ಪ್ರಸ್ತಾಪ ಬಂದಿರುತ್ತದೆ.

"ಶರಣ ಬಸಪ್ಪ ಕೂಡುವುದು ಗದ್ದಗಿಚಂದ !
ಉಪಾಯ ಹೂಡಿಸ್ಯಾರ ಹೊಸ್ತಿಲ ಮುಂದ !!
ಜಳಕ ಮಾಡಿದ ನೀರು ಹರದಾವ ಹಿಂದ !
ಪೂಜಾಕ ಬೇಕಂತ ಪತ್ತರಿ ತರಸಿ" !![೨೮]

"ಗದ್ದುಗೆ" ಎನ್ನುವ ಶಬ್ದವನ್ನು ಕಲಬುರ್ಗಿ ಶ್ರೀ ಶರಣಬಸಪ್ಪನವರನ್ನು ಕುರಿತು ಹಾಡಿದ ಜಾನಪದ ಸಾಹಿತ್ಯದಲ್ಲಿ ಪ್ರಸ್ತಾಪಿಸಲಾಗಿದೆ.

### ಪೂಜಾ ವಿಧಾನಗಳಲ್ಲಿ ವ್ಯತ್ಯಾಸ

ಹೈದ್ರಾಬಾದ – ಕರ್ನಾಟಕ ಭಾಗದ ವೀರಶೈವ ಮಠಗಳಲ್ಲಿ ದೊರೆಯುವ "ಗದ್ದುಗೆ" ಪೂಜೆಗಳಲ್ಲಿ ವಿವಿಧ ರೀತಿಯ ಭಿನ್ನತೆಯನ್ನು ಕಾಣುತ್ತೇವೆ. ಎಲ್ಲ ಶರಣರ ಮಠಾಧೀಶರು ಲಿಂಗೈಕ್ಯರಾದ ಮೇಲೆ ಅವರ ಸಿದ್ಧಿಪುರುಷ ಯೋಗದಿಂದ ಗದ್ದುಗೆಯನ್ನು ಕಟ್ಟಿಸುವುದಿಲ್ಲ. ಗದ್ದುಗೆ ಕಟ್ಟಿಸಿಕೊಳ್ಳುವ ವ್ಯಕ್ತಿಯ ಪವಾಡ ಪುರುಷನಾಗಿರಬೇಕು. ದೇವ ಸ್ವರೂಪನಾಗಿರಬೇಕು, ಅಂತರಂಗ ಬಹಿರಂಗಗಳೆರಡು ಶುದ್ಧವಾಗಿರಬೇಕು. ಅವರ ವ್ಯಕ್ತಿತ್ವದ ಮೇಲೆ ಅವಲಂಬಿಸಿರುತ್ತದೆ.

ಹಾರಕೂಡ ಬೃಹನ್ಮಠದ ಐದನೇಪೀಠಾಧಿಪತಿಗಳು, ಪವಾಡ ಪುರುಷರು, ದೇವ ಸ್ವರೂಪರೂ ಬೇಡಿದ ಭಕ್ತರಿಗೆ ಬೇಡಿದ ವರವನ್ನು ಕೊಟ್ಟವರೂ ಆದ ಪೂಜ್ಯ ಶ್ರೀ ಚನ್ನವೀರ ಶಿವಾಚಾರ್ಯರು. ಇವರು

ಲಿಂಗೈಕ್ಯರಾದ ನಂತರ ಶ್ರೀ ಮಠದ ಆವರಣದಲ್ಲಿಯೇ ಭೂಮಿಯನ್ನು ಆಳವಾಗಿ ಅಗೆದು , ಗವಿ ಮಾಡಿ, ಆ ಗವಿಯಲ್ಲಿಯೇ ಸಮಾಧಿ ಮಾಡಿದ್ದಾರೆ, ಗದ್ದುಗೆ ನಿರ್ಮಿಸಿದ್ದಾರೆ. ಅದರ ಮೇಲೆ ಶ್ರೀ ಚನ್ನವೀರ ಶಿವಾಚಾರ್ಯರ ಮೂರ್ತಿ ಸ್ಥಾಪನೆಮಾಡಿ , ಭವ್ಯವಾದ ಗೋಪುರದಿಂದ ಮಂದಿರವನ್ನು ನಿರ್ಮಿಸಲಾಗಿದೆ. ಭಕ್ತರು ಇದಕ್ಕೆ 'ಗುಡಿ'–'ಮಂದಿರ'– ವೆಂದೇ ಕರೆಯುತ್ತಾರೆ. ಪ್ರತಿ ದಿವಸ ಈ ಮೂರ್ತಿಗೆ ಸ್ನಾನ ಮಾಡಿಸಿ ಪತ್ರಿ ಪುಷ್ಪ ವಿಭೂತಿಗಳಿಂದ ಅಲಂಕರಿಸಿ, ಪೂಜಿಸುತ್ತಾರೆ.

ಹುಲಸೂರ ಗ್ರಾಮದ ಶ್ರೀ ಗುರು ಬಸವೇಶ್ವರ ವಿರಕ್ತ ಮಠದಲ್ಲಿ ಪೂರ್ವ ಪೀಠಾಧೀಪತಿಯ ಗದ್ದುಗೆಯನ್ನು ನಿರ್ಮಿಸಿ, ಅದರ ಮೇಲೆ " ಲಿಂಗ" ಸ್ಥಾಪನೆಯನ್ನು ಮಾಡಿದ್ದಾರೆ. ಮತ್ತೊಂದು ಗದ್ದುಗೆಯ ಮೇಲೆಯೂ " ಲಿಂಗ " ಸ್ಥಾಪನೆ ಮಾಡಿ ಆ ಲಿಂಗದ ಮುಂಭಾದಲ್ಲಿ ಪಾದಗಳನ್ನಿಟ್ಟಿರುತ್ತಾರೆ. ಬಂದ ಭಕ್ತರು ಈ ಪಾದಕ್ಕೆ ಮುಟ್ಟಿ ನಮಸ್ಕರಿಸಿ ದರ್ಶನ ಪಡೆದುಕೊಂಡು ಹೋಗುತ್ತಾರೆ.

ಭಾಲ್ಕಿ ಹಿರೇಮಠದ ಪೂಜ್ಯರಾದ ಡಾ: ಚನ್ನಬಸವ ಪಟ್ಟದ್ದೇವರ ಸಮಾಧಿಯೂ ಗವಿಯಲ್ಲಿ ಮಾಡಿದ್ದಾರೆ. ಈ ಗವಿಯಲ್ಲಿ " ಷಟಸ್ಥಲ" ದ ರೂಪದಲ್ಲಿ ಸಮಾಧಿಯನ್ನು ನಿರ್ಮಿಸಿ ಗದ್ದುಗೆಯನ್ನು ಕಟ್ಟಿಸುತ್ತಿದ್ದಾರೆ.

ಕಲಬುರ್ಗಿ ಶ್ರೀ ಶರಣಬಸಪ್ಪನವರ ಮಠದಲ್ಲಿ ಪೂರ್ವ ಪೀಠಾಧಿಪತಿಯರ ನಾಲ್ಕು " ಗದ್ದುಗೆ" (ಸಮಾಧಿ)ಗಳು ಎದ್ದು ಕಾಣುತ್ತವೆ. ಮೂಲ ಪೀಠಾಧಿಪತಿಯಾದ ಶ್ರೀ ಶರಣಬಸಪ್ಪ ಮಹಾಶರಣ ಹಾಗೂ ಅವರ ಗುರುಗಳಾದ ಮರುಳಾರಾಧ್ಯರ ಸ್ವಾಮಿಗಳಿಬ್ಬರ " ಗದ್ದುಗೆ" ಒಂದೆಯಾಗಿರುತ್ತದೆ. "ಆತ್ಮ ಬೇರೆ ಬೇರೆಯಾದರು ಲಿಂಗ ಒಂದೇ" ಎಂದರಿತು ಇವರಿಬ್ಬರು ಒಂದೇ ಕಡೆ ಕೂಡಲು ಮೊದಲೆ ಒಪ್ಪಿಕೊಂಡರೆಂದು ತಿಳಿದು ಬರುತ್ತದೆ. ಆದ್ದರಿಂದ ಒಂದೇ ಗದ್ದುಗೆಯ ಮೇಲೆ ಗುರು – ಶಿಷ್ಯರ ಮೂರ್ತಿಗಳನ್ನು ಸ್ಥಾಪಿಸಲಾಗಿದೆ. ಈ ಮೂರ್ತಿಗಳಿಗೆ ತ್ರಿಕಾಲ ಪೂಜೆ ಸಲ್ಲುತ್ತದೆ. ಇದೇ ಮಠದಲ್ಲಿ ಇನ್ನೂ ಮೂರು ಗದ್ದುಗೆಗಳು ಕಂಡು ಬರುತ್ತವೆ. ಆ ಗದ್ದುಗೆಗಳ ಮೇಲೆ " ಲಿಂಗ " ಗಳಾಗಲಿ, "ಮೂರ್ತಿ," ಪಾದಗಳಾಗಲಿ ಯಾವುದು ಕಂಡು ಬರುವುದಿಲ್ಲ. ಈ ಗದ್ದುಗೆಗಳಿಗೂ ಶ್ರೀ ಗಳು ತ್ರಿಕಾಲ ಪೂಜೆ ಮಾಡುವ ಸಂಪ್ರದಾಯ ಬೆಳೆದುಕೊಂಡು ಬಂದಿದೆ.

ಪಂಚಾಚಾರ್ಯ ಸಂಪ್ರದಾಯ ಮಠಗಳಾದರೆ , ಗದ್ದುಗೆ ಪೂಜೆಯನ್ನು ಮಾಡುವಾಗ ಕುಕ ಮ, ವಿಭೂತಿ , ಗಂಧ, ಗಳನ್ನು ಹಚ್ಚುತ್ತಾರೆ. ಅದರೆ ವಿರಕ್ತ ಸಂಪ್ರದಾಯದ ಮಠಗಳಾದರೆ ಅಲ್ಲಿ ಕೇವಲ "

ವಿಭೂತಿ '' '' ಭಸ್ಮ '' ಮಾತ್ರ ಬಳಸುತ್ತಾರೆ. ಈ ಸಂಪ್ರದಾಯ ಹಿಂದಿನಿಂದಲೂ ಬೆಳೆದುಕೊಂಡು ಬಂದಿದೆ. ಹೈದ್ರಾಬಾದ – ಕರ್ನಾಟಕ ಭಾಗದ ವೀರಶೈವ ಮಠಗಳಲ್ಲಿ ಗದ್ದುಗೆ ಪೂಜೆಯೂ ಹಲವಾರು ರೀತಿಯಲ್ಲಿ ಕಂಡು ಬಂದರೂ , ಮಠಾಧೀಶರ ಉದ್ದೇಶ, ನಿಲುವುಗಳೆಲ್ಲವೂ ಒಂದೆಯಾಗಿರುತ್ತವೆ.

ಒಟ್ಟಾರೆಯಾಗಿ '' ಗದ್ದುಗೆ ''ಯೆಂದರೆ ಸಮಾಧಿ ಎಂದರ್ಥ- ಜಂಗಮನಾದವನು ಸಮಾಜದಲ್ಲಿ ಒಳ್ಳೆಯ ವ್ಯಕ್ತಿಯೆಂದು ಸರ್ವತೋಮುಖ ಅಭಿವೃದ್ಧಿ ಸಾಧಿಸಿ, ಲಿಂಗೈಕ್ಯರಾದರೆ ಅವರ ನಿಜ ಶರಣರ ಸಂಕೇತವಾಗಿ ಈ '' ಗದ್ದುಗೆ '' – ಗುಡಿ – ಮಂದಿರಗಳನ್ನು ನಿರ್ಮಿಸುವುದು-ಗದ್ದುಗೆ ಕಟ್ಟಿಸಿ ಅದರ ಮೇಲೆ ''ಲಿಂಗ'' ವನ್ನೋ ಲಿಂಗೈಕ್ಯ ಶರಣರ ಮೂರ್ತಿ ಸ್ಥಾಪನೆಯನ್ನು ಚಿತ್ರವನ್ನೋ ಅಥವಾ ಪಾದರಕ್ಷೆಗಳನ್ನೋ ಇಟ್ಟು ಪೂಜಿಸುವ ರೀತಿಯಲ್ಲಿ ಕಾಣುತ್ತೇವೆ.

೨. ಸಾಮಾಜಿಕ ಕೊಡುಗೆ

ವೀರಶೈವ ಮಠಗಳು ಸಾಮಾಜದ ಅವಿಭಾಜ್ಯ ಅಂಗ. ಸಮಾಜದೊಡನೆ ನಿಕಟವಾದ ಸಂಬಂಧವನ್ನು ಹೊಂದಿವೆ. ಸಮಾಜದ ಜತೆಗೆ ಅಂಟಿಕೊಂಡ ಮಠಗಳು ತುಂಬಾ ಗೌರವದ ಸ್ಥಾನವನ್ನು ಇಟ್ಟುಕೊಂಡಿವೆ. ಸಾಂಸ್ಕೃತಿಕ ಕಾರ್ಯ ಚಟುವಟಿಕೆಗಳನ್ನು ಸತತ ನಡೆಸಿಕೊಂಡು ಬರುತ್ತ ಜಾತಿ, ಮತ, ಪಂಥ, ಬೇಧ – ಭಾವ, ಸ್ತ್ರೀ – ಪುರುಷ, ಮೇಲು – ಕೀಳೆಂಬ ಭಾವನೆಯನ್ನು ಬದಿಗೊತ್ತಿ ಎಲ್ಲರು ಸಮಾಜದಲ್ಲಿ ಸರಿ ಸಮಾನರು ಯಾರು ಮೇಲಲ್ಲ ಯಾರು ಕೀಳಲ್ಲ, ಹೊಲಸು ತಿಂಬುವವನೆ ಹೊಲೆಯ, ಎಂದು ಸಾರಿ ಹೇಳುತ್ತ ಜನರಲ್ಲಿ ಕಾಯಕದ ಮಹತ್ವತೆಯನ್ನು ತಿಳಿಸಿಕೊಡುತ್ತಾರೆ. ಮಠಗಳ ಸಾಮಾಜಿಕ ಕೊಡುಗೆಗಳು ಸಮಾಜಕ್ಕೆ ಅರ್ಪಿತವಾಗಬೇಕಾದರೆ, ಆಯಾ ಮಠಗಳ ಮಠಾಧಿಪತಿಯ ಕಾರ್ಯ ಚಟುವಟಿಕೆಗಳ ಮೇಲೆ ಅವಲಂಬಿತವಾಗಿರುತ್ತದೆ.

'' ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ
ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ
ಛಲಬೇಕು ಶರಣಂಗೆ ಪರದೈವವನೆ ಇಲ್ಲೆನೆಂಬ
ಛಲಬೇಕು ಶರಣಂಗೆ ಲಿಂಗ – ಜಂಗಮ ಒಂದೆ ಎಂಬ
ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ
ಛಲವಿಲ್ಲದವರ ಮೆಚ್ಚ ನಮ್ಮ ಕೂಡಲ ಸಂಗಮದೇವಾ '' [೬೯]

ಲೌಕಿಕ ಹಿತಾಸಕ್ತಿಯನ್ನು ಕಡೆಗೆಣಿಸದೆ ಪಾರಲೌಕಿಕ ಚಿಂತನೆಯಲ್ಲಿ ಸದಾ ತಮ್ಮನ್ನು ತೊಡಗಿಸಿಕೊಂಡಿರುವ ನಮ್ಮ ನಾಡಿನ ಪೀಠಾಧಿಪತಿಗಳು. ಭಕ್ತರು ಕಟ್ಟಿಸಿಕೊಟ್ಟ ಭವ್ಯವಾದ ಮಠಗಳಲ್ಲಿ ಕೇವಲ ಲಿಂಗ ಪೂಜೆ ಮಾಡುತ್ತ ತಮ್ಮ ಆತ್ಮೋಧಾರಕ್ಕೆ ಹಂಬಲಿಸಲಿಲ್ಲ. ರುದಾಕ್ಷಿ ಮಣಿಗಳನ್ನೆಣಿಸುತ್ತಾ ಜಪ – ತಪಗಳಲ್ಲಿ ತಲ್ಲೀನರಾಗಲಿಲ್ಲ. ವೀರಾಗಿ ವಿರಕ್ತರೆಂದು ಎಲ್ಲವನ್ನು ತ್ಯಜಿಸಿ ಗುಡ್ಡಬೆಟ್ಟವನ್ನು ಸೇರಿ ತಪ್ಪಸ್ಸು ಗೈಯಲಿಲ್ಲ, ಭಕ್ತರ ಉದ್ಧಾರವೇ ಪರಮಾತ್ಮನ ಆರಾಧನೆ ಎಂಬ ವಿಚಾರ ಕ್ರಾಂತಿಯ ಹರಿಕಾರರಾಗಿ ಜನತೆಯ ಮಧ್ಯದಲ್ಲಿದ್ದುಕೊಂಡು ಅವರ ಸುಖ ದುಃಖಗಳಿಗೆ ಸ್ಪಂದಿಸುತ್ತ ಸಮಾಜದ ಒಳಿತಿಗಾಗಿ ತಮ್ಮ ಶಿವಬದುಕನ್ನು ಸಾಗಿಸಿ, ಶಿವಾನುಭವಿಗಳಾಗಿ, ಜನರಿಗೆ, ಸಮಾಜಕ್ಕೆ ಶಿವಬೆಳಕನ್ನು ನೀಡಿದ್ದಾರೆ. ''ಲೋಕದ ಮಧ್ಯದಲ್ಲಿದ್ದರೂ, ನೀರ ತಾವರೆಯಂತೆ ಸಕಲ ಜೀವಿಗಳಿಗೆ ಲೇಸನ್ನೆ ಬಯಸುತ್ತಿರುವ ಸ್ವಾಮಿಗಳವರ ವೈಯಕ್ತಿಕ ಸಾಧನೆ ಸಿದ್ಧಿಗಳು ಸಮಾಜದ ಬಹುಮುಖ ಶುದ್ಧಿಗಾಗಿ ಕೈಗೊಂಡ ಕಾರ್ಯಗಳು ನಾಡಿನ ಇತಿಹಾಸದಲ್ಲಿ ಒಂದು ಸುವರ್ಣ ಸಂಪುಟ ಚರಿತ್ರೆಯಲ್ಲಿ ಧವಳ ಕೀರ್ತಿಘಟ್ಟ''.[೯೦] ಮಠಾಧೀಪತಿಗಳು ಕೇವಲ ಮಠದ ಆವರಣದೊಳಗಲ್ಲದೆ, ಹಳ್ಳಿ – ಪಟ್ಟಣಗಳಿಗೆ ಸಂಚರಿಸಿ, ಪಾಠ – ಪ್ರವಚನಗಳ ಮುಖಾಂತರ ಜನರಲ್ಲಿರುವ ಮೂಢ ನಂಬಿಕೆ ಅಂಧಕಾರ ಕಲ್ಮಷಗಳನ್ನು ಕಿತ್ತೊಗ್ಗೆಯಲು ಸದಾ ಶ್ರಮಿಸುತ್ತಿದ್ದಾರೆ.

ಸುಭದ್ರವಾದ ಸರ್ವರ ಲೇಸನ್ನು ರಕ್ಷಿಸುವ ಅರ್ಥ ವ್ಯವಸ್ಥೆ ಮಾತ್ರ ನಾಡಿನ ಒಳಿತಿಗಾಗಿ, ಹಾಗೂ ಸಮಾಜದ ಶಾಂತಿಗೆ ಕಾರಣವಾಗುತ್ತದೆಂಬುದನ್ನವರು ಬಲ್ಲರು. ಸಂಪತ್ತಿನ ನ್ಯಾಯ ಬದ್ಧವಾದ ಹಂಚಿಕೆಯೇ ಜಂಗಮ ತತ್ವದ ಪ್ರಧಾನ ಧ್ಯೆಯ.[೯೧] ಬಡತನ ಸಿರಿತನಗಳ ಬೇಧ–ಭಾವಗಳನ್ನುನುಸರಿಸದೆ. ಎಲ್ಲರೂ ಸಮಾನ ದೃಷ್ಟಿಯಿಂಂದ ನೋಡುತ್ತಿದ್ದರು. ಹನ್ನೆರಡನೆ ಶತಮಾನದ ಶರಣ ತತ್ವದ ಬೀಜವನ್ನೆ ಜನ–ಮನಗಳಿಗೆ ತಲುಪಿಸುವ ಕಾರ್ಯ ಸ್ವಾಮಿಗಳದ್ದು. ಜನರಲ್ಲಿ ವೈಚಾರಿಕತೆಯ ಪ್ರಜ್ಞೆಯನ್ನು ಮಾಡಿಸುವುದರ ಜೊತೆಗೆ. ಅವರನ್ನು ಸಮಾಜದ ಧಾರಿಯಲ್ಲಿ ನಡೆಯಲು ಪ್ರಚೋಧನೆ ನೀಡುತ್ತಿದ್ದಾರೆ. ಎಲ್ಲ ವರ್ಗದ ಮಠಾಧಿಪತಿಗಳ ಭಕ್ತರೊಡನೆ ಆತ್ಮಗೌರವ ವಿಶ್ವಾಸಗಳನ್ನು ಇಟ್ಟುಕೊಳ್ಳಬೆಕಾಗುತ್ತದೆ. ಶರಣರ ತತ್ವಗಳು ವೀರಶೈವ ಧರ್ಮದ ಸಂಕೇತವಾಗಿವೆ. ವಜ್ರದಂತಿರುವ ಶರಣರ ತತ್ವಗಳನ್ನು ಸಮಾಜದ ಮೂಲೆ ಮೂಲೆಗಳಿಗೂ ಪಸರಿಸಲು ಹಗಲಿರುಳು ಶ್ರಮಿಸುತ್ತಾರೆ. ''ಬಸವಣ್ಣನವರ ಮಹತ್ವ ಇರುವುದು ತತ್ವಗಳ ಅವಿಷ್ಕಾರಕಿಂತ ಹೆಚ್ಚಾಗಿ ಆಗಲೇ ಸಿದ್ಧವಾಗಿದ್ದ ತತ್ವಗಳನ್ನು ಉಜ್ಜಿ ಅಂದಿನ ಜೀವನಕ್ಕೆ ಅದನ್ನು ಅನ್ವಯಿಸಿ, ಕ್ರಿಯಾತ್ಮಕವಾಗಿ

ಕಾರ್ಯಗತ ಗೊಳಿಸುವುದರಲ್ಲಿ''. [೪೨] ಮಠಗಳು ಮಠಾಧಿಪತಿಗಳು ಸಮಾಜದಲ್ಲಿ ಕ್ರಾಂತಿ ಭೂತರಾಗಿ ಸಮಾಜದ ಸೇವೆಯನ್ನು ಮಾಡುತ್ತಿದ್ದಾರೆ.

''ಶರಣ ಸಮಾಜವನ್ನು ಸಮರ್ಥವಾಗಿ ಕಟ್ಟಲು ಮತ್ತು ಶರಣರನ್ನು ಏಕೈಕ ಉದ್ದೇಶದ ಸಲುವಾಗಿ ಏಕೈಕ ವೇದಿಕೆಯ ಮೇಲೆ ಅವರನ್ನು ಒಂದು ಗೂಡಿಸುತ್ತ ಶರಣರಲ್ಲಿ ಅನುಕೂಲವು ಸೌಹಾರ್ದ ಸಂಬಂಧವನ್ನು ಶ್ರೀಮಂತಗೊಳಿಸಿ, ಮುನ್ನಡೆಸಿದ ಹಲವಾರು ಕಾರ್ಯಕ್ರಮಗಳಲ್ಲಿ ಒಂದು ದಾಸೋಹ'' [೪೩] ವೀರಶೈವ ಮಠಗಳಲ್ಲಿ ಎಲ್ಲರೂ ಒಂದೆ ಎಂಬ ಭಾವನೆ ಪರಿಪಾಲಿಸಿಕೊಂಡು ಬರುತ್ತಿದ್ದರು. ಅಲ್ಲಿ ಎಲ್ಲ ವರ್ಗದ ಜನರಿಗೆ ದಾಸೋಹಂಬಾವವನ್ನು ನಿರ್ವಹಿಸಿಕೊಟ್ಟಿದ್ದರು. ಪ್ರತಿಯೊಬ್ಬ ಭಕ್ತನಿಗೆ ಊಟದ ವ್ಯವಸ್ಥೆಯೂ ಶ್ರೀ ಮಠಗಳಲ್ಲಿದ್ದವು. ಇಂದಿಗೂ ಕೆಲವು ಮಠಗಳಲ್ಲಿ ದಾಸೋಹ ನಡೆಯುತ್ತಿರುವುದು ಕಂಡು ಬರುತ್ತದೆ, ಮಠಾಧಿಪತಿಯ ಸ್ಥಾನ ವ್ಯಕ್ತಿತ್ವದ ಮೇಲೆ ಮಠ ಬೆಳೆಯುತ್ತದೆ. ಸಾಮಾಜಿಕ ಆಚಾರ – ವಿಚಾರಗಳ ಮೇಲೆ ಅವಲಂಬಿತವಾಗಿರುತ್ತದೆ. ಬಸವಾದಿ ಶರಣರು ಇಟ್ಟು ಹೋದ ವಚನ ಸಾಹಿತ್ಯದ ಮೌಲ್ಯವನ್ನು ಮನೆ – ಮನೆಗೆ ಸಾರಲು , ಪ್ರಚಾರ ಮಾಡಲು ಸ್ವಾಮೀಜಿಯವರ ಪಾತ್ರ ಹಿರಿದಾಗಿರುತ್ತದೆ.

ಹೈದ್ರಾಬಾದ – ಕರ್ನಾಟಕ ವೀರಶೈವ ಮಠಗಳು ಸಾಮಾಜಿಕ ಸೇವೆಗೆ ಕಂಕಣಬದ್ಧವಾಗಿವೆ. ಸಮಾಜದಲ್ಲಿ ತುಂಬಿ ಹರಿಯುತ್ತಿರುವ. ಮೇಲು – ಕೀಳೆಂಬ ವಿಭವನೆ, ಮೂಢ ನಂಬಿಕೆ ಕಂದಚಾರ ಕಲ್ಮಷಗಳನ್ನು ಕಿತ್ತೊಗೆಯಲು ಮಠಗಳು ಮಹತ್ವದ ಪಾತ್ರವನ್ನು ವಹಿಸಿವೆ. ಸಮಾಜದ ಉನ್ನತಿಯನ್ನು ಮಾರ್ಗದರ್ಶನದ ಮುಖಾಂತರ ಕೊಂಡೊಯುತ್ತಿರುವುದು ಅತಿ ಮಹತ್ವದ ಘಟ್ಟವಾಗಿದೆ. ಇವರ ಸಾಮಾಜಿಕ ಕೊಡುಗೆಗಳನ್ನು ವಿಭಿನ್ನ ರೀತಿಯಲ್ಲಿ ಕಂಡುಬರುತ್ತದೆ.

೧) ಅಸ್ಪೃಶ್ಯತಾ ನಿವಾರಣೆ ೨) ಅನಾಥ ರಕ್ಷಣೆ ೩) ದಾಸೋಹ (ಅನ್ನಛತ್ರ)

೪) ಪ್ರತಿಭಾ ಪುರಸ್ಕಾರ, ಸಾಮೂಹಿಕ ವಿವಾಹ, ಉಚಿತ ನೇತ್ರ ಶಿಬಿರ

## ೨.೧. ಅಸ್ಪೃಶ್ಯತಾ ನಿವಾರಣೆ

ಭಾಲ್ಕಿಯ ಹಿರೇಮಠದ ಪೀಠಾಧ್ಯಕ್ಷರಾಗಿದ್ದ ಡಾಃ ಚನ್ನಬಸವ ಪಟ್ಟದ್ದೇವರು ಅಸ್ಪೃಶ್ಯತಾ ನಿವಾರಣೆಯ ಸಲುವಾಗಿ ಹಗಲಿರುಳು ದುಡಿದವರು. ಮೇಲು ಕೀಳೆಂಬ ಭಾವನೆಯನ್ನು ಕಿತ್ತೊಗೆದು ಅಸ್ಪ ಜಾತಿಯ ಜನಾಂಗಕ್ಕೆ ಲಿಂಗದೀಕ್ಷೆಯನ್ನು ಕೊಟ್ಟು ಸರಿಸಮಾನತೆಯನ್ನು ನೀಡಿದರು. ಇವನಾರವ ಇವನಾರವ

ಇವನಾರವನೆಂದೆನಿಸದಿರಯ್ಯ ಇವ ನಮ್ಮ ಮನೆಯ ಮಗನೆಂದೆನಿಸಯ್ಯ ಎಂದು ಶರಣರ ತತ್ವಗಳನ್ನು ಸಾರಿ ಎಲ್ಲರನ್ನು ತನ್ನಂತೆ ಕಂಡರು ಕ್ರಿ. ಶ. ಸುಮಾರು ೧೯೪೨ ರಲ್ಲಿ ಭಾಲ್ಕಿಯ ಹರಿಜನರಿಗೆ ತಮ್ಮ ಹಿರೇಮಠ ಸಂಸ್ಥಾನದ ಆವರಣದಲ್ಲಿರುವ ನೀರಿನ ಬಾವಿಯನ್ನು ಮುಟ್ಟಿಸಿದರು. ಅಂದಿನ ಕಾಲದಲ್ಲಿ ಇದ್ದಿರುವ ಮುಟ್ಟಿ ತಟ್ಟಿಗಳ ಸಂಪ್ರದಾಯವನ್ನು ಕಿತ್ತೊಗೆದರು. ಮಠದಲ್ಲಿ ಸಮಾನ ಅವಕಾಶ ಕಲ್ಪಿಸಿಕೊಡುತ್ತಿದ್ದರು. ಅದರಂತೆ ಭಾಲ್ಕೇಶ್ವರ ದೇವಾಲಯದಲ್ಲಿರುವ ಕುಡಿಯುವ ನೀರಿನ ಭಾವಿಯನ್ನು ಮುಟ್ಟಿಸಿದರು. ಇದರಿಂದ ಜಾತಿ ನಿರ್ಮೂಲನೆ ಸಲುವಾಗಿ ಸತತ ಪರಿಶ್ರಮ ಪಟ್ಟರು. ''ಸೆಲವೊಂದೆ ಹೊಲಗೇರಿ , ಹೊಲಸು ತಿಂಬುವವನೆ ಹೊಲೆಯ .... ಎನ್ನುವ ಮುಂತಾದ ಶರಣರ ವಚನಗಳನ್ನು ಬಿಚ್ಚಿ ಹೇಳಿದರು. ಜಾತಿ ಹಿಸತೆಯೆಂಬುವವನ ಮನೆಯಲ್ಲಿ ಜ್ಯೋತಿಯ್ಯೂ, ಹಿಸವೇ ಜಾತಿ ಪರಜಾತಿಯೆಂದು ಭೇದವ ನಿಡಬೇಡ ದೇವರ ನೋಲಿಸಿ ಕೊಂಡವನೆ ಉತ್ತಮ ಜಾತಿಯವರು'' ಎನ್ನುವ ಸರ್ವಜ್ಞನ ವಾಣಿಯನ್ನು ಸಾರಿ ಹೇಳಿದರು.

ಡಾಃ ಚನ್ನವೀರ ಕಣವಿಯವರು ಭಾಲ್ಕಿ ಹಿರೇಮಠದ ಅಸ್ಪೃಶ್ಯತಾ ನಿವಾರಣೆಯನ್ನು ಕಂಡು ಭಕ್ತಿಪೂರ್ಣವಾಗಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. '' ಅಸ್ಪೃಶ್ಯತೆಯನ್ನು ಹೋಗಲಾಡಿಸುವ ಕಾರ್ಯ ಕಲ್ಯಾಣ ನಾಡಿನಲ್ಲಿ ಮತ್ತೆ ಮುಂದುವರಿಯುತ್ತಿರುವುದು ಭಾಲ್ಕಿ ಶ್ರೀಗಳೇ ಅದಕ್ಕೆ ಶ್ರೀ ಪಾದ ಹಾಕಿರುವುದು ಎಂಥ ಯೋಗಾಯೋಗ : ಸಮಾಜದ ಹಲ – ಕೆಲವರ ವಿರೋಧವನ್ನು ಲೆಕ್ಕಿಸದೇ ನಿಮ್ನ ವರ್ಗದ ಜನಾಂಗಕ್ಕೆ ಲಿಂಗಸಂಸ್ಕಾರ ಅಂತರ್ಜಾತಿ ವಿವಾಹಗಳಿಗೆ ಪ್ರೋತ್ಸಾಹ ತಮ್ಮ ಹಿರೇಮಠ ನೀರಿನ ಭಾವಿಯನ್ನು ಹರಿಜನರಿಗೆ ಮುಟ್ಟಿಸಿದ್ದು, ಲಿಂಗದೀಕ್ಷೆ, ಅನಾಥ ಮಕ್ಕಳ ಪಾಲನೆ , ಹರಿಜನ ಬಂದುಗಳಾದ ವಿಠ್ಠಲ ಬೆಲ್ದಾಳ ದಂಪತಿಗಳಿಗೆ ಲಿಂಗದೀಕ್ಷೆ , ಜಂಗಮ ದೀಕ್ಷೆ ನೀಡಿದ್ದಲ್ಲದೆ ಅವರಿಂದಲೇ ಉಳಿದವರಿಗೂ ದೀಕ್ಷೆ ದೊರಕುವ ಅವಕಾಶ ಒದಗಿಸುವುದು. ಕೆಲವರಿಗೆ ಇದನ್ನು ನಂಬುವುದೇ ಅಸಾಧ್ಯವಾಗಿರಬಹುದು''.[೪೪] ಹೈದ್ರಾಬಾದ ಭಾಗದಲ್ಲಿ ಪ್ರಪ್ರಥಮವಾಗಿ ಅಸ್ಪೃಶ್ಯತಾ ನಿವಾರಣೆಯ ಸಮಾನತೆಯ ಕಾರ್ಯ ಮಾಡಿದ ಕೀರ್ತಿ ಶ್ರೀ ಭಾಲ್ಕಿ ಮಠಕ್ಕಿದೆ. ಮೂಢ ನಂಬಿಕೆ ಹಾಗೂ ಜಾತಿಯತೆಯನ್ನು ಹೋಗಲಾಡಿಸಿ ಸಮಾನತೆಗಾಗಿ ಹಗಲಿರುಳು ಶ್ರಮಿಸಿದ್ದವರು. ಡಾಃ ದೇವೆಂದ್ರಕುಮಾರ ಹಕಾರಿಯವರು ತಮ್ಮ ಕವನವೊಂದರಲ್ಲಿ ಶ್ರೀಗಳು ದಲಿತರ ಮೇಲೆ ತೋರಿದ ಕರುಣೆಯನ್ನು ವ್ಯಕ್ತಪಡಿಸಿದ್ದಾರೆ.

" ಬೆವರ ಬೆಗುದಿಗಾಣ ಸುತ್ತಲ್ಲಿ ಸಿಕ್ಕು
ದಿಕ್ಕೆಟ್ಟು ರೋಧಿಸುವ ದೀನ ದಲಿತರ
ಬಂದುವಾಗಿ ಬಳಿಸಾರಿ
ಮುಂದಾಗಿ ನಿನ್ನಕ್ಕೆ ಕಣ್ಣಿರ ಒರೆಸಿತು:"[೪೫]

ದಿನ ದಲಿತರನ್ನು ಆತ್ಮ ವಿಶ್ವಾಸ ಗೌರವಗಳಿಂದ ಕಾಣುತ್ತಿದ್ದರು. ಯಾವುದೇ ರೀತಿಯ ಸಮಸ್ಯೆಗಳು ಉದ್ಭವಿಸದಂತೆ ನೋಡಿಕೊಂಡು ಬರುತ್ತಿದರು. "ಅಸ್ಪೃಶ್ಯತಾ ನಿವಾರಣೆ ಹಾಗೂ ದಲಿತೋದ್ಧಾರದ ಮಹಾಮಣಿಹವನ್ನು ಕೈಗೆತ್ತಿಕೊಂಡು ಯಶಸ್ವಿಯಾಗಿರುವುದರಲ್ಲಿ ಕಾಯಕ ತತ್ವವನ್ನು ಅನುಷ್ಠಾನಕ್ಕೆ ತರುವಲ್ಲಿ ಅಂಗ ಲಿಂಗ ಸಾಮರಸ್ಯದ ಮೂಲಕ ಶಿವಯೋಗವನ್ನು ಸ್ಥಾಪಿಸುವಲ್ಲಿ ಒಂದೇ ಎರಡೇ ಇಂತಹ ನೂರಾರು ಸಾವಿರಾರು ಲೋಕ ಸಂಗ್ರಹ ಕಾರ್ಯವೆಸಗಿದ ಮಹಾತ್ಮ"[೪೬] ಶ್ರೀ ಭಾಲ್ಕಿ ಶ್ರೀಗಳು ಎಂದು ಡಾಃ ಸಾ. ಶಿ. ಮರುಳಯ್ಯನವರು ಶ್ರೀಗಳ ಜೀವನ ಸಾಧನೆ ಕುರಿತು ಮೌಲಿಕ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದ್ದಾರೆ. ಹತ್ತು ಹಲವಾರು ಹಳ್ಳಿಗಳಿಗೆ ಸಂಚರಿಸಿ ದಲಿತೋದ್ಧಾರ ಮಾಡಿದರು. ಅಲ್ಲಿರುವ ಅಸ್ಪೃಶ್ಯತೆಯನ್ನು ನಿವಾರಣೆ ಮಾಡಿದರು. ಧಾರ್ಮಿಕ ಹಾಗೂ ಸಾಂಸ್ಕೃತಿಕವಾದ ಕಾರ್ಯಕ್ರಮಗಳಲ್ಲಿ ಹಾಗೂ ಅನುಭವ ಮಂಟಪದ ಗೋಷ್ಠಿಗಳಲ್ಲಿ ವರ್ಗ ಜಾತಿ ಭೇದ ಭಾವಗಳಿಲ್ಲದೆ ಸಂಕಲರಿಗೂ ಸಮಾನ ಅವಕಾಶ ಕಲ್ಪಿಸಿಕೊಡುತ್ತಿದ್ದರು. ಅಲ್ಲಿ ಎಲ್ಲ ವರ್ಗದ ಜನರು ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದರು.

ಡಾಃ ಎಚ್ ತಿಪ್ಪೇರುದ್ರ ಸ್ವಾಮಿಯವರು ಅನುಭವ ಮಂಟಪವನ್ನು ಕುರಿತು, ಕಾಯಕ ಮಿಮಾಂಸೆ ಇಲ್ಲಿ ನಡೆದದ್ದು ಬೌದ್ಧಿಕವಾಗಿ ಮಾತ್ರವಲ್ಲ "ಕುರ್ವನ್ನೆವೇಹ ಕರ್ಮಾಣಿ " ಇತ್ಯಾದಿ ಮಾತುಗಳಲ್ಲಿ ಉಪನಿಷತ್ತು ಅದನ್ನು ಆಗಲೇ ಸೂಚಿಸಿತು. ಇಲ್ಲಿ ನಡೆದದ್ದು ಅದನ್ನು ಸಾಮಾಜಿಕ ಜೀವನದಲ್ಲಿ ಅನ್ವಯಿಸಿ ಜೀವಂತ ಸತ್ಯವನ್ನಾಗಿಸುವ ಚಳುವಳಿ, ಬಸವಣ್ಣ, ಮಂತ್ರಿಯಾಗಿದ್ದ ವೃತ್ತಿಯಿಂದ, ಬ್ರಾಹ್ಮಣನಾಗಿದ್ದ ಜಾತಿಯಿಂದ, ಹರಳಯ್ಯ, ಧೂಳಯ್ಯ ನಾಗಮಯ್ಯ ಮೊದಲಾದವರು ಸಮಾಜವು ಕೀಳೆಂದು ಕಾಣುವ ಕೆಲಸದಲ್ಲಿದ್ದರು. ಅಸ್ಪೃಶ್ಯರಾಗಿದ್ದವರು ಬಸವಣ್ಣನ ಧರ್ಮ ಆ ತಾರತಮ್ಯವನ್ನು ತೊಡೆದು ಹಾಕಿ ಸಾಧಕನ ಮೂಲಭೂತ ಮೌಲ್ಯಗಳನ್ನು ಮಾತ್ರ ಲಕ್ಷಿಸಿ ಸರ್ವಸಮಾನತೆಯನ್ನು ಸಾಧಿಸಿ ತೋರಿಸಿದರು. ಅನುಭವ ಮಂಟಪದಲ್ಲಿ ಎಲ್ಲರಿಗೂ ಸಮಾನ ಸ್ಕಂದರಾಗಿ ಕುಳಿತು ಜಿಜ್ಞಾಸೆಯಲ್ಲಿ ತೊಡಗುತ್ತಿದ್ದರು".[೪೭] ಅಲ್ಲಿ ಹೆಚ್ಚಾಗಿ ಧಾರ್ಮಿಕತೆ ಹಾಗೂ ವಚನ ರಚನೆಗಳಾಗುತ್ತಿದ್ದವು. ಎಲ್ಲ ವರ್ಗದವರಿಗೂ ಸಮಾನ ಅವಕಾಶ

ಕಲ್ಪಿಸಲಾಗಿತ್ತು. ಅದರಂತೆಯೇ ಭಾಲ್ಕಿ ಶ್ರೀಗಳು ಈ ಅನುಭವ ಮಂಟಪದಲ್ಲಿ ದಲಿತೋದ್ಧಾರ ಅಸ್ಪೃಶ್ಯತಾ ನಿವಾರಣೆಯ ಕಾರ್ಯ ಮಾಡಿ ಹೆಸರಾಗಿದ್ದಾರೆ.

''ಬಸವಣ್ಣನವರ ಸಮಕಾಲೀನ ಶರಣ ಕೇಂದ್ರ ಸ್ಥಳ ಅನುಭವ ಮಂಟಪ ,ಅದು ಧಾರ್ಮಿಕ ಕ್ರಾಂತಿ, ಸಾಮಾಜಿಕ ಸುಧಾರಣೆ, ವಚನ ಸಾಹಿತ್ಯದ ರಚನೆಗಳ ಕ್ಷೇತ್ರಗಳಿಗೆ ಮೀಸಲಾದ ಸಂಸ್ಥೆಯಾಗಿತ್ತು. ಸಮಾಜದ ತೀರಾ ಕೆಳವರ್ಗದವರೆಂದು ಭಾವಿಸಲಾಗಿದ್ದ ಅಸ್ಪೃಶ್ಯರ ಬಗ್ಗೆ ಅವರು (ಬಸವಣ್ಣ) ತಾಳಿದ ನಿಲುವು ಭಾರತದ ಇತಿಹಾಸದಲ್ಲಿ ಅನನ್ಯವಾದುದು. ಅವರ ತೋರಿಕೆಯ ಸಹಾನುಭೂತಿಯ ಮನೋಭಾವವನ್ನು ತಾಳಲಿಲ್ಲ. ನಿಜವಾದ ಅರ್ಥದಲ್ಲಿ ಅವರನ್ನು ಪ್ರೀತಿಸಿದ ಅವರೊಡನೆ ಕೂಡಿ ಬದುಕಿದ''.[೪೮] ಅನುಭವ ಮಂಟಪದಲ್ಲಿ ಎಲ್ಲ ಶರಣ ಶರಣೆಯರನ್ನು ಸಮಾನರೆಂದು ಭಾವಿಸಲಾಗುತ್ತಿತ್ತು. ಉಚ್ಚ ನಿಚ್ಚ ಭೇಧ ಭಾವಗಳಿಗೆ ಅವಕಾಶ ಇಲಿರಲಿಲ್ಲ. ಎಲ್ಲರು ದೇವರ ಮಕ್ಕಳೇ ಎಲ್ಲರೂ ಅಣ್ಣ – ತಮ್ಮಂದಿರೆ ಎಂಬುದು ಶರಣರ ನಿಲುವಾಗಿತ್ತು. ಆದ್ದರಿಂದಲೇ ಅವರೆಲ್ಲರು ಒಂದೂಗೂಡಿ ಧರ್ಮ ಸುಧಾರಣೆಯ , ಸಮಾಜ ಸುಧಾರಣೆಯ ಹಾಗೂ ಅಸ್ಪೃಶ್ಯತಾ ನಿವಾರಣೆಯ ಕಾರ್ಯವನ್ನು ಮಾಡಿದರು. ನಡೆದಾಡುವ ನೇಲವೊಂದೆ ಕುಡಿಯುವ ನೀರು ಒಂದೇ ಪ್ರಸಾದವಂದೆ ಅವುಗಳಲ್ಲಿ ಯಾವುದೇ ವ್ಯಾತ್ಯಾಸವಿಲ್ಲ. ಅಂತೆಯೇ ಭೂಮಿಯ ಮೇಲಿರುವ ಎಲ್ಲ ಜನರು ಸಹೋದರರೆ ಎಂಬ ಆಪ್ತ ಭಾವನೆ ಅವರದಾಗಿತ್ತು.

ಜನಸೇವೆಯೇ ಜನಾರ್ಧನ ಸೇವೆ ಎಂದರಿತ ಹುಲಸೂರು ಶ್ರೀ ಗುರು ಬಸವೇಶ್ವರ ಸಂಸ್ಥಾನ ಮಠದ ಮಠಾಧೀಶರಾದ ಮ. ನಿ. ಪ್ರ. ಶಿವಾನಂದ ಮಹಾಸ್ವಾಮಿಗಳು, ಸದಾ ಕಾಲ ಸಮಾಜದ ಉನ್ನತಿಗಾಗಿ ಅಸ್ಪೃಶ್ಯತಾ ನಿವಾರಣೆಗಾಗಿ ಹಗಲಿರುಳು ಶ್ರಮಿಸುತ್ತಿದ್ದರು.

'' ಕುಲವಿಲ್ಲ ಯೋಗಿಗೆ ಫಲವಿಲ್ಲ ಜ್ಞಾನಿಗೆ
ತೊಲೆಗಂಬ ವಿಲ್ಲ ಗಗನಕ್ಕೆ ಸ್ವರ್ಗದಲ್ಲಿ
ಹೊಲಗೇರಿ ಇಲ್ಲ ಸರ್ವಜ್ಞ ''[೪೯]

ಸರ್ವಜ್ಞನ ಈ ವಚನದಲ್ಲಿ ಯೋಗಿಯಾದವನಿಗೆ ಕುಲ ಜಾತಿ ಯಾವುದೂ ಇರುವುದಿಲ್ಲ. ಅದರಂತೆ ಜ್ಞಾನಿ ಆದವನಿಗೆ ತಿಳಿದಿರುತ್ತಾರೆ. ಅದರಂತೆ ಸ್ವರ್ಗ ಲೋಕದಲ್ಲಿಯೂ ಎಲ್ಲರೂ ಸರಿಸಮಾನರೆ ಜಾತಿ, ಮತಗಳ ಬಗ್ಗೆ ಸಂಶಯ ಇಲ್ಲ ಎಂದು ಹೇಳಿದ್ದಾರೆ. ಅದರಂತೆ ಇಲ್ಲಿ ಶ್ರೀ ಶಿವಾನಂದ ಮಹಾಸ್ವಾಮಿಗಳು ಜಾತಿನಿರ್ಮೂಲನೆ ಮಾಡಲು ಧಾರ್ಮಿಕ ಕಾರ್ಯಕ್ರಮಗಳನ್ನು ಪಾಠ – ಪ್ರವಚನಗಳನ್ನು ಹಮ್ಮಿಕೊಂಡು

ಅಸ್ಪೃಶ್ಯತೆಯನ್ನು ಹೋಗಲಾಡಿಸಲು ಪ್ರಯತ್ನಿಸಿದ್ದಾರೆ. ಶ್ರೀ ಮಠದಲ್ಲಿ ಅಂತರ್ಜಾತಿಯ ವಿವಾಹಗಳನ್ನು ಮಾಡಿದ ಹೆಮ್ಮೆ ಮಠಕ್ಕಿದೆ. ಸುತ್ತ – ಮುತ್ತ ಗ್ರಾಮಗಳಿಗೆ ಸಂಚರಿಸಿ ಅಸ್ಪೃಶ್ಯತಾ ನಿವಾರಣೆಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದಾರೆ. ಜನರಲ್ಲಿರುವ ಕಲ್ಮಶಗಳನ್ನು ಕಿತ್ತೊಗೆದು ಅವರಲ್ಲಿ ಅರಿವಿನ ಬೀಜವನ್ನು ಬಿತ್ತುತ್ತಿದ್ದಾರೆ. ಮೂಢ ನಂಬಿಕೆಯನ್ನು ಹೋಗಲಾಡಿಸುತ್ತಿದ್ದಾರೆ. ಸಾಂಸ್ಕೃತಿಕ ಕಾರ್ಯಕ್ರಮಗಳೊಂದಿಗೆ ಕಲ್ಯಾಣ ನಾಡಿನಲ್ಲಿ ಸುತ್ತಿ ಗ್ರಾಮಾಂತರ ಪ್ರದೇಶಗಳಲ್ಲಿ ಸಂಚರಿಸಿ ಅಸ್ಪೃಶ್ಯತಾ ನಿವಾರಣೆ [illegible] ಮಾಡಿದ್ದಾರೆ.

೨.೨. ಅನಾಥ ರಕ್ಷಣೆ

ವೀರಶೈವ ಧರ್ಮದಲ್ಲಿ ಅನಾಥರ ರಕ್ಷಣೆ ಮಾಡುವುದು ಪ್ರಮುಖ ಕಾರ್ಯವಾಗಿದೆ. ಇಲ್ಲಿನ ವೀರಶೈವ ಮಠಾಧೀಶರು ಈ ಕಾರ್ಯದಲ್ಲಿ ನಿರಂತರ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ತಂದೆ , ತಾಯಿ, ಬಂಧು ಬಳಗಗಳಿಲ್ಲದ ಅನಾಥ ಮಕ್ಕಳನ್ನು ಮಠಾಧೀಶರು ಪಾಲನೆ ಪೋಷಣೆ ಮಾಡುವರು. ಭಾಲ್ಕಿ ಹಿರೇಮಠದ ಪೂಜ್ಯ ಗುರುಗಳಾದ ಶ್ರೀ ಮ. ಘ . ಚ. ಬಸವಲಿಂಗ ಪಟ್ಟದ್ದೇವರು ನೇತ್ರತ್ವದಲ್ಲಿ ''ಅನಾಥಾಶ್ರಮ'' ವನ್ನು ತೆರೆದು ಅದರಡಿಯಲ್ಲಿ ಸುಮಾರು ಮೂವತ್ತು ಹೆಚ್ಚು ಅನಾಥ ಮಕ್ಕಳನ್ನು ರಕ್ಷಿಸಿ ಬೆಳೆಸುತ್ತಿದ್ದಾರೆ. ಅಂಥಹ ಮಕ್ಕಳಿಗಾಗಿ ವಿಧ್ಯಾಭ್ಯಾಸ ಕೊಡಿಸುವುದು ಹೊಟ್ಟೆ , ಬಟ್ಟೆ ವೈದ್ಯಕೀಯ ಚಿಕಿತ್ಸೆ . . . . . . . . ಮುಂತಾದ ವ್ಯವಸ್ಥೆಗಳನ್ನು ಸುವ್ಯವಸ್ಥಿತ ರೀತಿಯಲ್ಲಿ ಮಾಡುತ್ತಿದ್ದಾರೆ.

ಹುಲಸೂರ ಶ್ರೀ ಗುರು ಬಸವೇಶ್ವರ ಸಂಸ್ಥಾನ ಮಠದ ಪರಮ ಪೂಜ್ಯರಾದ ಶ್ರೀ ಮ. ನಿ. ಪ್ರ. ಶಿವಾನಂದ ಮಹಾಸ್ವಾಮಿಗಳು ಮಠದಲ್ಲಿ ಅನಾಥಾಶ್ರಮವನ್ನು ಸ್ಥಾಪಿಸಿ ಅನಾಥರೆಂದು ಬಂದ ಮಕ್ಕಳಿಗೆ ಅಥವಾ ಸ್ವಾಮಿಜಿಯವರೇ ಸ್ವತಃ ಅನಾಥ ಮಕ್ಕಳಿದ್ದ ಸ್ಥಳಕ್ಕೆ ಭೇಟಿಕೊಟ್ಟು ಅವರನ್ನು ಶ್ರೀ ಮಠಕ್ಕೆ ಕರೆದುಕೊಂಡು ಬರುವರು. ಸುಮಾರು ಮೂವತ್ತೆರಡು ಬಾಲಕ ಬಾಲಕಿಯರು ಅನಾಥಾಶ್ರಮದಲ್ಲಿ ಬೆಳೆಯುತ್ತಿದ್ದಾರೆ. ಅನಾಥ ಮಕ್ಕಳು ಶೈಕ್ಷಣಿಕತೆಯಲ್ಲಿ ಮುಂದುವರೆದು ಅಭ್ಯಾಸವನ್ನು ಮುಂದುವರೆಸಿದ್ದಾರೆ. ವಿಧ್ಯಾಭ್ಯಾಸಕ್ಕೆ ತಗಲುವ ವೆಚ್ಚವನ್ನು ಶ್ರೀ ಪೂಜ್ಯರೇ ನೋಡಿಕೊಂಡು ಹೋಗುತ್ತಿದ್ದಾರೆ. ಅನಾಥ ಬಾಲಕರ ರಕ್ಷಣೆಯೇ ಶ್ರೀ ಮಠದ ರಕ್ಷಣೆಯಾಗಿದೆ ಮಠದಲ್ಲಿ ಬೆಳೆಯುವ ಅನಾಥ ಮಕ್ಕಳಿಗೆ ಯಾವುದೇ ರೀತಿಯ ಕುಂದು ಕೊರತೆಗಳನ್ನು ಬಾರದಂತೆ ನೋಡಿಕೊಳ್ಳುತ್ತಿದ್ದಾರೆ, ಬೆಳೆಸುತ್ತಿದ್ದಾರೆ.

ಭಾತಂಬ್ರಾ ವಿರಕ್ತ ಮಠದ ಪೂಜ್ಯರಾದ ಶ್ರೀ ಮ. ನಿ. ಪ್ರ. ಶಿವಯೋಗೀಶ್ವರ ಮಹಾಸ್ವಾಮಿಗಳು ೧೯೮೪ ರಲ್ಲಿ ಬೀದರ ನಗರದ ಹೃದಯ ಭಾಗದಲ್ಲಿ ಬಸವ ಮುಕ್ತಿ ಮಂದಿರ (ಮಠ) ಸ್ಥಾಪಿಸಿ ಈ ಆವರಣದಲ್ಲಿ " ಅನಾಥಾಶ್ರಮ " ವನ್ನು ಪ್ರಾರಂಭಿಸಿದ್ದಾರೆ. ಅನಾಥ ಬಾಲ ಬಾಲಕಿಯರ ಪಾಲನೆ ಪೋಷಣೆ ಮಾಡುತ್ತಿದ್ದಾರೆ ೧೯೯೨ – ೯೪ ರಲ್ಲಿ ಮಹಾರಾಷ್ಟ್ರದ ಖಿಲಾರಿ ಗ್ರಾಮದಲ್ಲಿ ಸಂಭವಿಸಿದ ಭೂಕಂಪದಲ್ಲಿ ಸಾವಿರಾರು ಜನರು ಮೃತಪಟ್ಟಿದ್ದಾರೆ. ಒಂದು ಕುಟುಂಬದಲ್ಲಿ ಎಲ್ಲ ಸದಸ್ಯರು ಮೃತಪಟ್ಟು, ಒಂದು ವರ್ಷದ ಒಂದು ಬಾಲಕಿ ಎರಡು ವರ್ಷದ ಇನ್ನೊಂದು ಬಾಲಕಿ ಮಾತ್ರ ಜೀವಂತ ಉಳಿದಿದ್ದರು. ಆ ಚಿಕ್ಕ ಬಾಲಕಿಯರನ್ನು ಕಂಡು ರಾಜಕಾರಣಿಗಳು ದೊಡ್ಡ ವ್ಯಾಪಾರಸ್ಥರು ಧನ ದವಸ ಧಾನವಾಗಿ ನೀಡಿದರು. ಆದರೆ ಶ್ರೀಗಳು ಆ ಅನಾಥ ಬಾಲಕಿಯರಿಬ್ಬರನ್ನು ಶ್ರೀ ಮಠಕ್ಕೆ ಕರೆದುಕೊಂಡು ಬಂದು ಅಕ್ಕ ಮಾಹಾದೇವಿ ಅಕ್ಕ ನಾಗಮ್ಮ ವೆಂದು ನಾಮಕರಣ ಮಾಡಿದರು. ಶ್ರೀ ಮಠದಲ್ಲಿಯೇ ವಿದ್ಯಾಭ್ಯಾಸವನ್ನು ಕೊಡಿಸುತ್ತಿದ್ದಾರೆ. ಬೀದರ ನಗರದ ದೊಡ್ಡ ವ್ಯಾಪಾರಸ್ಥರಾದ ಮಾನ್ಯ ಶ್ರೀ ಮಡಿವಾಳಪ್ಪ ಮುದ್ದಣ್ಣನವರು ಅನಾಥ ಬಾಲಕಿಯರಿಬ್ಬರಿಗೆ ಪ್ರತಿ ವರ್ಷ ಹೆಣ್ಣು ಮಕ್ಕಳ (ಪಂಚಮಿ) ಹಬ್ಬಕ್ಕೆ ಎರಡೆರಡು ಜತೆ ವಸ್ತ್ರ(ಬಟ್ಟೆಯನ್ನು) ಕೊಟ್ಟು ಆನಂದಿಸಿ ಹಾರೈಸುತ್ತಾರೆ. ಈ ಬಾಲಕಿಯರಿಬ್ಬರು ಶರಣ ಶರಣೆಯರ ನಡೆ – ನುಡಿಗಳನ್ನು ಚಾಚು ತಪ್ಪದೆ ನಡೆದಿಕೊಂಡು ಬರುತ್ತಿದ್ದಾರೆ. ಸುಮಾರು ಹನ್ನೆರಡು ಮತ್ತು ಹದಿಮೂರು ವರ್ಷದ ಬಾಲಕಿಯರಿದ್ದಾರೆ. ಈ ಅನಾಥ ಮಕ್ಕಳ ಜತೆ, ಇನ್ನು ಇಪ್ಪತ್ತೆರಡು ಬಾಲಕ ಬಾಲಕಿಯರು ಇದ್ದಾರೆ.

ಬೀದರ ನಗರದ ಶ್ರೀ ಸಿದ್ಧಾರೂಢ ಮಠವು ೧೯೮೯ ರಲ್ಲಿ " ಶ್ರೀ ಮತಿ ಫಕಿರಮ್ಮ ಅನಾಥ ಬಾಲಕರಾಶ್ರಮ" ವನ್ನು ಸ್ಥಾಪಿಸಿದ್ದಾರೆ. ಈ ಆಶ್ರಮದಲ್ಲಿ ಸುಮಾರು ಐವತ್ತಕ್ಕೂ ಹೆಚ್ಚು ಅನಾಥ ಮಕ್ಕಳ ಪಾಲನೆ ಪೋಷಣೆ ಮಾಡುತ್ತಿದ್ದಾರೆ. ಪ್ರತಿ ದಿವಸ ಎರಡು ಸಮಯ ಊಟ ಕೊಟ್ಟು ವಿಧ್ಯಾಭ್ಯಾಸವನ್ನು ಕೊಡಿಸುತ್ತಾರೆ. ವಸತಿ ಸೌಕರ್ಯಗಳು ಉತ್ತಮ ರೀತಿಯಲ್ಲಿ ಇದೆ. ಹಾರಕೂಡ ಶ್ರೀ ಷ. ಬ್ರ. ಚನ್ನವೀರ ಶಿವಾಚಾರ್ಯ ಸ್ವಾಮಿಗಳು ಅನಾಥ ಬಾಲಕರ ಕಡೆ ಹೆಚ್ಚು ಗಮನವನ್ನು ಹರಿಸಿದ್ದಾರೆ, ಚಿಕ್ಕ ಅನಾಥ ಬಾಲಕ ಬಾಲಕಿಯರನ್ನು ಕಂಡರೆ ಶ್ರೀ ಮಠಕ್ಕೆ ಕರೆದುಕೊಂಡು ಬರುತ್ತಾರೆ. ಅವರಿಗೆ ಒಳ್ಳೆಯ ರೀತಿಯ ವಿಧ್ಯಾಭ್ಯಾಸ ಜತೆಗೆ ಅವಶ್ಯಕ ಸೌಕರ್ಯಗಳನ್ನು ಏರ್ಪಡಿಸುತ್ತಿದ್ದಾರೆ.

ಇತ್ತೀಚೆಗೆ ನಿಡುವಂಚಾ ಗ್ರಾಮದ ಚೌಕಿ ವಿರಕ್ತ ಮಠವು ಅನಾಥಾಶ್ರಮವನ್ನು ಪ್ರಾರಂಭಿಸಿದೆ. ಇವರು ಹತ್ತಾರು ಅನಾಥ ಮಕ್ಕಳನ್ನು ರಕ್ಷಿಸಿದ್ದಾರೆ. ಶ್ರೀ ಮಠದಲ್ಲಿ ಪೂಜ್ಯರಾದ ಗುರುಮಾತೆ

ಮೈತ್ರಾದೇವಿಯವರ ನೇತೃತ್ವದಲ್ಲಿ ಈ ಕಾರ್ಯವನ್ನು ಸುವ್ಯವಸ್ಥಿತ ರೀತಿಯಲ್ಲಿ ನಡೆಸಿಕೊಂಡು ಬರಲಾಗುತ್ತಿದೆ. ಚಾಂಬೋಳ ಹಿರೇಮಠದ ಶ್ರೀ ರುದ್ರಮುನಿ ಪಟ್ಟದ್ದೇವರು "ಶ್ರೀ ರುದ್ರಮುನಿ ಶಿಕ್ಷಣ ಸಂಸ್ಥೆ" ಯನ್ನು ತೆರೆದು ಅದರಡಿಯಲ್ಲಿ ಅನಾಥಾಶ್ರಮವನ್ನು ಪ್ರಾರಂಭಿಸಿದ್ದಾರೆ. ಸುಮಾರು ಹದಿನೈದು ಚಿಕ್ಕ ಚಿಕ್ಕ ಅನಾಥ ಬಾಲಕ ಬಾಲಕಿಯರನ್ನು ಪಾಲನೆ ಪೋಷಣೆ ರಕ್ಷಣೆಗಳಲ್ಲಿ ತೊಡಗಿದ್ದಾರೆ. . ಶ್ರೀ ಮಠಕ್ಕೆ ಬಂದ ಅನಾಥರ ಸಲುವಾಗಿ ವಿಶ್ರಾಂತಿಯನ್ನು ಪಡೆಯಲು ಅಥವಾ ಇಲ್ಲಿಯೇ ತಂಗಲು ಅವರಿಗೆ ಅನಾಥ ವಸತಿ ನಿಲಯವನ್ನು ಸ್ಥಾಪಿಸಿದ್ದಾರೆ.

ಹೀಗೆ ಹೈದ್ರಾಬಾದ – ಕರ್ನಾಟಕದನಾನ ಮಠಗಳು ಅನಾಥಾಶ್ರಮವನ್ನು ತೆರೆದು ಅನಾಥ ಸೇವೆಯನ್ನು ಸಲ್ಲಿಸುತ್ತಿವೆ.

೨.೩. ದಾಸೋಹ (ಅನ್ನಛತ್ರ)

೧೨ನೇ ಶತಮಾನದಲ್ಲಿ ಶಿವಶರಣರು ಸಮಾನತೆಯನ್ನು ಸಾರಲು ಕ್ರಾಂತಿಯೆಂಬ ಅಸ್ತ್ರವನ್ನು ಬಳಸಿದರು. ಸಮಾಜದ ಶೋಷಣೆ ಉಚ್ಚ ನೀಚ, ಅಹಂಕಾರ, ಬಡವ, ಬಲ್ಲಿದ, ಜಾತಿ, ಮತ ... ಗಳು ಬೆಳೆದು ಸಾಮಾಜಿಕ ಅಶಾಂತಿಗೆ ಕಾರಣವಾಗುತ್ತಿರುವ ಸಂದರ್ಭದಲ್ಲಿ, ಶಿವ ಶರಣರು ಅನುಭವ ಮಂಟಪದ ಚರ್ಚೆಯಲ್ಲಿ ತೊಡಗಿ "ಕಾಯಕ" ಎನ್ನುವ ತತ್ವವನ್ನು ಜಾರಿಗೆ ತಂದರು. ಪ್ರತಿಯೊಬ್ಬ ವ್ಯಕ್ತಿ "ಕಾಯಕ" ಕ್ಕೆ ಹೆಚ್ಚಿನ ಮಹತ್ವ ಕೊಟ್ಟರು. ಕಾಯಕದಿಂದ ಸಂಪಾದಿಸಿದ ಹಣವನ್ನು "ದಾಸೋಹ" ಮಾಡಲು ಸೂಚಿಸಿದರು. ಕಾಯಕ ತತ್ವದ ಮೂಲಕ ವ್ಯಕ್ತಿಗತ ವಿಕಾಸಕ್ಕೆ ದಾರಿ ಮಾಡಿಕೊಟ್ಟ ಶರಣರು ದಾಸೋಹ ತತ್ವದ ಮೂಲಕ ಸಮಷ್ಠಿ ಹಿತ ಕಾಪಾಡಲು ಪರಿಶ್ರಮಿಸಿದರು. ಅವರ ಉದ್ದೇಶ ಪ್ರತಿಯೊಬ್ಬ ವ್ಯಕ್ತಿ ಸ್ವಾವಲಂಬನೆಯಾಗಿರುವುದಲ್ಲದೆ, ಆರ್ಥಿಕ ಸಮಾನತೆ ನೆಲೆಗೊಳ್ಳಿಸಿಕೊಳ್ಳಬೇಕೆಂಬುದು ಅಧ್ಯಾತಿಕ ಮಾರ್ಗದಲ್ಲಿ ಜನರನ್ನು ಕೊಂಡೊಯ್ದು ಆದರ್ಶ ಜೀವನಕ್ಕೆ ತೊಡಗಿಸುವಂಥದಾಗಿತ್ತು. ಅಲ್ಲದೆ ಸಮಾಜದಲ್ಲಿ ಸಮಾನತೆಯನ್ನು ಸಾರುವ ಮುಖ್ಯ ಉದ್ದೇಶವಾಗಿತ್ತು.

"ದಾಸೋಹ" – ಎನ್ನುವ ಪದದ ಮೂಲ ಸಂಸ್ಕೃತದಲ್ಲಿ ದೊರೆಯುತ್ತದೆ. "ಧಾನ" "ಧರ್ಮ" ಹಾಗೂ "ದಾಸ" ಭಾವದಿಂದ ಗುರುಲಿಂಗ ಜಂಗಮಕ್ಕೆ ನಡೆಸುವ ಅರ್ಪಣೆಯನ್ನು ಶರಣರು ದಾಸೋಹವೆಂದು ಕರೆದಿದ್ದರು. ಸಮಾಜದ ಪೋಷಣೆಗೆಂದು ನೀಡುವುದೇ ದಾಸೋಹ. ಕಾಯಕದ ಫಲವೆ ದಾಸೋಹ. ಎಲ್ಲ ಧರ್ಮಗಳ ಮರ್ಮ ದಾಸೋಹ, ನಿರಹಂಕಾರದಿಂದ ಮಾಡುವುದೇ ದಾಸೋಹ;

ಕಾಯಕದಿಂದ ಮಾಡುವುದೇ ದಾಸೋಹ. ಭಕ್ತಿಯಿಂದ ಮಾಡುವುದೇ ದಾಸೋಹ, ಸಕಲರಿಗೆ ಶರಣೆಂಬುದೆ ದಾಸೋಹ. ಹಂಚಿ ತಿನ್ನುವುದೇ ದಾಸೋಹ. ಎಂಬರ್ಥಗಳಿವೆ.

ದಾಸೋಹ ತತ್ವಕ್ಕೂ ,ಕಾಯಕ ಸಿದ್ಧಾಂತಕ್ಕೂ ನಿಕಟವಾದ ಸಂಬಂಧವಿದೆ. ಕಾಯಕದಲ್ಲಿ ನಿರತರಾಗಿ ಜಾತಿಯತೆಯನ್ನು ತೊಡೆದು ಹಾಕಿದರು. ಶರಣರಿಗೆ ಕಾಯಕ ಕೀಳಾಗಿರಲಿಲ್ಲ. ಅದು ಅಭಿಮಾನದ ಸಂಕೇತವಾಗಿತ್ತು. ಆದ್ದರಿಂದಲೇ ತಮ್ಮ ಹೆಸರಿನ ಹಿಂದೆ ತಮ್ಮ ತಮ್ಮ ಕಾಯಕವನ್ನು ಅಂಟಿಸಿಕೊಂಡಿದ್ದನ್ನು ಕಾಣುತ್ತೇವೆ. ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ, ಡೋಹರ ಕಕ್ಕಯ್ಯ, ನೂಲಿಯ ಚಂದಯ್ಯ, ಬಾಚಿ ಕಾಯಕದ ಬಸವಣ್ಣ, ಮೇದಾರ ಕೇತಯ್ಯ, ಹಡಪದ ಅಪ್ಪಣ್ಣ, ತುರುಗಾಯಿ ರಾಮಣ್ಣ, ಆಯ್ದಕ್ಕಿ ಮಾರಯ್ಯ, ಆಯ್ದಕ್ಕಿ ಲಕ್ಕಮ್ಮಾ. . . . . . ಹೀಗೆ ಮುಂತಾದ ಜಾತಿಯ ಸಂಕೇತಗಳಾಗಿದ್ದ ಕುಲ ಕಸುಬುಗಳು ಶರಣರ ದೃಷ್ಟಿಯಲ್ಲಿ ಸತ್ಯ ಶುದ್ಧ ಕಾಯಕವಾಗಿ ಕಂಡವು. ಇಂಥ ಶರಣರ ಕಾಯಕದಿಂದ ಬಂದ ಆದಾಯದಲ್ಲಿ ತಮ್ಮ ಜೀವನಕ್ಕೆ ಬೇಕಾದಷ್ಟನ್ನು ಉಪಯೋಗಿಸಿ (ಊಟ ಮಾಡಿ) ಉಳಿದದನ್ನು ಪರರಿಗೆ ಹಂಚುತಿದ್ದರು.

ಹಗ್ಗ ಹೊಸೆದು ಕಣ್ಣಿ ಮಾಡಿ ಮಾರಿಬಂದ ಆದಾಯದಲ್ಲೇ ದೇಹಿಯೆಂದು ಬಂದವರಿಗು ನೀಡಿ ಉಳಿದದ್ದನ್ನು ಪ್ರಸಾದವೆಂದು ತಾನು ಸ್ವೀಕರಿಸಿ ನಿತ್ಯಾನಂದದಲ್ಲಿದ್ದ ಒಬ್ಬ ಬಡ ಕಾರ್ಮಿಕ ನೂಲಿಯ ಚಂದಯ್ಯ. ಅದರಂತೆ, ಆಯ್ದಕ್ಕಿ ಮಾರಯ್ಯ ಒಬ್ಬ ಜಂಗಮ ಅಲ್ಲದೆ ಮೋಳಿಗೆ ಮಾರಯ್ಯ ಪ್ರತಿನಿತ್ಯ ಕಾಡಿನಿಂದ ಸೌದೆಯನ್ನು ಕಡಿದು ತಂದು ಮಾರಾಟ ಮಾಡಿ ಬಂದ ಆದಾಯದಿಂದ ಜಂಗಮ ದಾಸೋಹ ಮಾಡುತ್ತಿದ್ದ. ಇತ ಶಿವ ಭಕ್ತನಾಗಿದ್ದನು. ಕಾಯಕದಿಂದ ಸಂಪತ್ತು ಆದಾಯ ಗಳಿಸುವುದಲ್ಲ. ಆದಾಯವೆಂದರೆ, ಕಾಯಕವೆಂದು ತಿಳಿದು ಅದರ ಮುಖಾಂತರ ದಾಸೋಹ ನಡೆಸುವುದು ಶರಣರ ನಿಲುವಾಗಿತ್ತು.

'' ದಾಸೋಹಕ್ಕಾಗಿ ಮಾಡುವ ಕೆಲಸವೇ ಕಾಯಕ
ತಾನಿಲ್ಲದೆ ಮನದಿಂದ ದೇವರನ್ನು ಧ್ಯಾನಿಸುವುದೇ ಮಂತ್ರ
ತಾನಿಲ್ಲದೆ ಕಾಯಕದಿಂದ ದೇವರಿಗೆ ಪ್ರಾರ್ಥಿಸುವ ಕೆಲಸವೆಲ್ಲ ಕಾಯಕವಾಯಿತು.
ಶ್ರದ್ಧೆ ಭಕ್ತಿಯಿಂದೆ ಕಾಯಕಮಾಡುವೊಡೇ
ಲಕ್ಷ್ಮಿ ತಾನಿಪ್ಪಳು ಎಲ್ಲಿ ನೋಡಿದಡಲ್ಲಿ ದಾಸೋಹ ಮಾಡುವಲ್ಲಿ
ಕಾಯಕದಿಂದ ಪಡಿದ ಪದಾರ್ಥಗಳು
ಅರ್ಪಿತಕ್ಕೆ ಯೋಗ್ಯವಾಗುವವಯ್ಯಾ
ತನ್ನ ಪಾಡಿಗಾಗಿ ಮಾಡುವುದು ಉಪಜೀವನ

ತನ್ನ ಪಾಡಿಗಲ್ಲದೆ ಪರಹಿತಾರ್ಥಮಾಡುವಲ್ಲಿ

ಲಿಂಗಾರ್ಪಿತವೆಂದು ಅರ್ಪಣೆಗೈಯುವುದೇ ಕಾಯಕ ದಾಸೋಹವಯ್ಯಾ

ಇದುವೇ ಕಾಯಕ ದಾಸೋಹ ಸುತ್ರವಾಯಿತು

ಮಾಹಾದಾಸೋಹಿ ಶರಣಬಸವಪ್ಪಾ''[೩೦]

ಕಾಯಕದ ಫಲವೇ ದಾಸೋಹ. ವ್ಯಕ್ತಿಯ ಉದ್ಧಾರ, ಆರ್ಥಿಕ ಭದ್ರತೆ ಸಾಮಾಜಿಕ ಪಿಡುಗುಗಳ ನಿವಾರಣೆಗೆ ಬಸವಾದಿ ಶರಣರು ಕಂಡು ಹಿಡಿದ ಮಂತ್ರವೇ ದಾಸೋಹವಾಗಿದೆ.

ಸಮಾಜದಲ್ಲಿ ಹಬ್ಬಿರುವ ಜಾತಿಯತೆಯನ್ನು ಕಡೆಗಣಿಸಲು ''ದಾಸೋಹ'' ಎನ್ನುವ ತತ್ವವನ್ನು ಜಾರಿಗೆ ಬಂತಿಲೆ. ಎದೆಯ ಮೇಲೆ ಲಿಂಗಧರಿಸಿದವರೆಲ್ಲರಿಗೂ ದಾಸೋಹದಲ್ಲಿ ಸ್ಥಾನ ದೊರಕಿಸಿಕೊಟ್ಟರು. ಸಹ ಪಂಕ್ತಿಭೋಜನಾ ವ್ಯವಸ್ಥೆ ಮಾಡಿದರು. ಇಲ್ಲಿ ಯಾವುದೆ ರೀತಿಯ ತಾರತಮ್ಯ ಭಾವನೆಗೆ ಅವಕಾಶಗಳಿರಲಿಲ್ಲ. ''ದಾಸಿಪುತ್ರನಾಗಲಿ, ವೇಶಾಪುತ್ರನಾಗಲಿ, ಶಿವದೀಕ್ಷೆಯಾದ ಬಳಿಕ ಸಾಕ್ಷಾತ್ ಶಿವನೆಂದು ವಂದಿಸಿ, ಪೂಜಿಸಿ, ಪ್ರಸಾದವ ಕೊಂಬುದೆ ಯೋಗ್ಯ.'' ಹೊಲೆಯುಂಟೇ ಲಿಂಗವಿದ್ದಲ್ಲಿ, ಕುಲವುಂಟೇ ಜಗಮವಿದ್ದಲ್ಲಿ, ಎಂಜಲುಂಟೆ ಪ್ರಸಾದವಿದ್ದಲ್ಲಿ ಎಂದು ಬಸವಣ್ಣನವರು ಹೇಳಿರುವಂತೆ ಲಿಂಗಧರಿಸಿದವರೆಲ್ಲರೂ ಪವಿತ್ರರು ಎಂದು ಹೇಳಿ ಜಾತಿ – ಮತ ಪಂಥ ಧರ್ಮದವರಿಗೂ ದಾಸೋಹದಲ್ಲಿ ಸಮಾನ ಅವಕಾಶ ಕಲ್ಪಿಸಿಕೊಟ್ಟರು.

'' ದಾಸೋಹಂ ಪ್ರಮಥಾ ಮೋಕ್ಷಂ ವದಂತೀತಿ ಸಂಸಯ

ಭೂರುದ್ರಾಣಂ ಜಂಗಮಾಣಂ ಷಟಸ್ಥಲ ಬ್ರಹ್ಮಣಾಂ ಪ್ರಿಯೇ''

ಚಿಲ್ಲಿದ ಅಕ್ಕಿಯನ್ನು ತಂದ ತನ್ನ ಪತಿಯನ್ನು ಲಕ್ಕಮ್ಮ. ''ಒಮ್ಮನವ ಮೀರಿ ಇಮ್ಮನವ ತಂದಿರಿ ಮಾರಯ್ಯ ಪ್ರಿಯಾ''ಈ ಸಕ್ಕಿಯಾಸೆ ನಿಮಗೆಕಯ್ಯ'' ಎಂದು ತರಾಟೆಗೆ ತೆಗೆದುಕೊಳ್ಳುತ್ತಾಳೆ.

ದಾಸೋಹ ಮಾಡಿದರೆ ತನ್ನ ಮನಸ್ಸಿಗೆ ನೆಮ್ಮದಿ ದೊರೆಯುತ್ತದೆ. ಮೋಕ್ಷ ಸಿಗುತ್ತದೆ. ತಾನು ಸಮಾಜದಲ್ಲಿ ಬದುಕಿದ್ದು ಸಾರ್ಥಕವಾಗುತ್ತದೆ. ವೀರಶೈವ ಧರ್ಮದ ತತ್ವಗಳಾದ ಷಟಸ್ಥಲದಲ್ಲಿ ಅವರಿಗೆ ಯೋಗ್ಯ ಸ್ಥಾನ ಮುಕ್ತಿ ದೊರೆಯುತ್ತದೆ ಎಂದು ಈ ಮೇಲಿನ ವಾಕ್ಯದಲ್ಲಿ ಕಂಡಕೊಳ್ಳಲಾಗಿದೆ.

ಶಿವಶರಣರ ಕಾಲದಲ್ಲಿ ಅಸಂಖ್ಯಾತ ಮಠಗಳಿಲ್ಲ ದಾಸೋಹ ನಡೆಸುವುದರಲ್ಲಿ ಪ್ರಸಿದ್ಧಿ ಪಡೆದವುಗಳಾಗಿದ್ದವೆಂದು ಶೂನ್ಯ ಸಂಪಾದನೆಕಾರರು ತಿಳಿಸುತ್ತಾರೆ. ''ಒಂದು ಸಾವಿರ ಜಂಗಮಕ್ಕೆ

ಆರೋಗಣೆಯ ಮಾಡಿಸುವ ದಾಸೋಹ ಮಠಗಳು, ಮೂವತ್ತೆರಡು ಸಾವಿರ, ನಿತ್ಯ ಐದನೂರು ಜಂಗಮಕ್ಕೆ ದಾಸೋಹ ಮಾಡುವ ಸತ್ಯ ಸದಾಚಾರಿ ಮಠಗಳು ಐವತ್ತೆಂಟು ಸಾವಿರ. ನಿತ್ಯ ಸಾವಿರದ ನೂರು ಜಂಗಮಕ್ಕೆ ದಾಸೋಹ ಮಾಡುವ ದಾಸೋಹ ಮಠಗಳು ಹನ್ನೊಂದು ಸಾವಿರ, ಎಂದು ಹೇಳಿ, ಇನ್ನೊಂದು ಕಡೆ, ಒಟ್ಟು ದಾಸೋಹ ಮಠಗಳು ಎರಡು ಲಕ್ಷ ಎಂಬತ್ತೈದು ಸಾವಿರದ ಏಳ ನೂರೆಪ್ಪತ್ತು. ದಾಸೋಹ ಮಠಗಳು '' – ಎಂದು ಹೇಳಿದ್ದಾರೆ. ದಾಸೋಹ ಎಂದರೆ ಶಿವಶರಣರು '' ಪ್ರಸಾದ '' ಎಂಬ ಶಬ್ದ ಬಳಸಿದ್ದಾರೆ. ಆದ್ದರಿಂದ ಇಂದಿಗೂ ಮಠಕ್ಕೆ ಬಂದ ಭಕ್ತರಿಗೆ '' ಪ್ರಸಾದ '' ತೆಗೆದುಕೊಳ್ಳಿ ಎಂದು ಸ್ವಾಮಿಗಳು ಹೇಳುವುದನ್ನು ಕಾಣುತ್ತೇವೆ. ಕಾಯಕವಲ್ಲದಿದ್ದರೂ ಯಾವುದೇ ಮೂಲದಿಂದ ಬಂದ ದವಸ ಧಾನ್ಯ ಹಾಗೂ ಆರ್ಥಿಕತೆಯನ್ನು ಮಠಾಧೀಶರು ಮಠಕ್ಕೆ ಬರುವ ಭಕ್ತರಿಗೆ ಅನ್ನ ನೀರು ಕೊಡುವುದರ ಮೂಲಕ ದಾಸೋಹ ಸೇವೆ ಮಾಡುವರು.

'' ಶಿಂಶುಮಾರ ಡಿಂಡಿಮಾರ ರೇಣುಕರ ಅಪ್ಪಣೆಯಂತೆ ಧರ್ಮಾರ್ಥಗಳನ್ನು ಕೊಡುವ ದಿವ್ಯ ದಾಸೋಹ ಮಠಗಳನ್ನು ಅಂದು ನಿರ್ಮಿಸಿದ್ದರು, ಡಿಂಡಿಮಾರನ ಮಹಾಮನೆಯಲ್ಲಿ ನಿತ್ಯ ಎರಡು ಲಕ್ಷ ಜನರು ಪ್ರಸಾದ ಸ್ವೀಕರಿಸುತ್ತಿದ್ದರು. ಡಿಂಡಿಮನ ಮಠಕ್ಕಿಂತ ಶತಮಾನದ ಮಠದ ದಾಸೋಹ ಇನ್ನು ಅತ್ಯಧಿಕವಾಗಿತ್ತು. ನಿತ್ಯ ಅನಂತ ಲಕ್ಷ ಜನರು ಪ್ರಸಾದ ಸ್ವೀಕರಿಸುತ್ತಿದ್ದರು''.[೫೦] ವೀರಶೈವ ಮಠಗಳು ದಾಸೋಹ ನಡೆಸುವದೆ ಮೂಲ ಉದ್ದೇಶವಾಗಿದೆ. ಅಂತೆಯೇ ಹೆಚ್ಚಾಗಿ ಮಠಗಳಲ್ಲಿ ದಾಸೋಹ ನಡೆಯುತ್ತಿರುವುದು ಕಂಡುಬರುತ್ತದೆ.

'' ಸೋಹಂ ಎಂಬುದು ಅಂತರಂಗದ ಮದ ನೋಡಯ್ಯಾ
ಶಿವೋಹಂ ಎಂಬುದು ಬಹಿರಂಗದ ಮದ ನೋಡಯ್ಯಾ
ಈ ದ್ವಂದ್ವವನಳಿದು ದಾಸೋಹಂ ಎಂದೆನಿಸಯ್ಯ
ಕಪಿಲ ಸಿದ್ಧ ಮಲ್ಲಿಕಾರ್ಜುನ್ '' [೫೨]

ಈ ಮೇಲಿನ ಸಿದ್ದರಾಮ ಶರಣರ ವಚನದಲ್ಲಿ '' ಸೋಹಂ '' – ಎಂದರೆ ನಾನೇ ಅವನು, ಎನ್ನುವಲ್ಲಿ ಒಂದು ತರಹದ ಮದವಿರುತ್ತದೆ. '' ಶಿವೋಹಂ '' ಎಂದರೆ, ನಾನೇ ಶಿವನು, ಎನ್ನುವಲ್ಲಿಯೂ ಆತನಿಗೆ ಒಂದು ರೀತಿಯ ಮದ ವಿರುತ್ತದೆ. ಜೀವ ಶಿವನಾಗುವುದು ತಪ್ಪಲ್ಲ. ಆದರೆ ಈ '' ಸೋಹಂ '' – '' ಶಿವೋಹಂ''

ಗಳೆಂಬ ಮದದ ದ್ವಂದ್ವಗಳು ಅಳಿದಾಗ, ದಾಸೋಹಂ ಭಾವ ಉತ್ಪತ್ತಿಯಾಗುತ್ತದೆ. ಈ ದಾಸೋಹಂ ಭಾವ ಪಕ್ವಗೊಂಡಾಗ ಶಿವೋಹಂ ಭಾವ ತಾನೇತಾನಾಗಿ ಬೆಳೆಯುವುದು.

ದಾಸೋಹ ಎಂಬ ಪದವು ಇಲ್ಲಿ '' ದಾಸನೆಂದರೆ ಏನೊಂದರಿಯದ, ಏನೊಂದನ್ನು ಆಚರಿಸಲು ಬಾರದ, ಯಾವ ಅನುಭವ ವಿಲ್ಲದ ಸೇವಕ, ಅಥವಾ ಆಳು ಎಂದರ್ಥವಲ್ಲ . ಸನ್ನಿಹಿತ ಸಂಬಂಧವುಳ್ಳವನೆಂದರ್ಥ. ಶಿವನೇ ತಾನಾಗಿದ್ದು ತನ್ನ ಉಪಾಸನೆಯಲ್ಲಿ ತಾನೇ ನಿರತನಾಗಿರುವುದು ಎಂದು ಅವರ ಅಭಿಪ್ರಾಯ''.[೫೨]

'' ಶರೀರಾದಿಪದಾರ್ಥಂ ಚದತ್ವಾ ದಾನಂ ಸಮರ್ಪಣಮ್
ಸಮರ್ಪ್ಯ ಸೋಃ ಹಮಸ್ಮೀತಿ ದಾಸೋಹಂ ಭಾವ ಉಚ್ಚತೇ''.[೫೪]

ಶರೀರಾಧಿ ಪದಾರ್ಥಗಳನ್ನು '' ದಾನ '' ಮಾಡುವುದು ದಾಸೋಹಂ ಭಾವ ಇಂಗಿತವಾಗಿದೆ. ಇಲ್ಲಿ ವ್ಯಕ್ತವಾದ ದಾನ ಪದವು ಮೇಲರಿಮೆಯ ಭಾವ ಭೇದಗಳಲ್ಲಿ ನಾನು ದಾನ ಮಾಡುವವ. ಅಹಮಿಕೆಯ ಸಂಕೇತ ಕಂಡು ಬರುವುದಿಲ್ಲ. ಕೊಡುವ ದಾನದಲ್ಲಿ ಸದುವಿನಯದ ಸಮರ್ಪಣ ಭಕ್ತಿ ಭಾವವಿದೆ. ಎಲ್ಲವನ್ನು ಕೊಟ್ಟ ಪರಮಾತ್ಮನಿಗೆ ಅರ್ಪಿಸುವುದೆಂದರೆ, ಒಟ್ಟಿಗೆ ದುಡಿಯುವ ದೌರ್ಬಲ್ಯವಲ್ಲ. ಅಲ್ಲದೆ ಭಯದಿಂದ ಕೊಡುವುದಲ್ಲ. ಪೂರ್ಣ ಸ್ವರೂಪಕ್ಕೆ, ಪರಿಪೂರ್ಣವಾಗುವುದಕ್ಕಾಗಿ ಈ ಅಪೂರ್ಣವಾಗುವುದನ್ನು ಸಮಾರ್ಪಣಭಾವದಿಂದ ಅರ್ಪಿಸುವುದೆಂದರ್ಥ. ಸಕಲ ವಿಸ್ತಾರದ ಜಂಗಮ ಲಿಂಗಕ್ಕೆ ತನ್ನನ್ನು ತಾನು ಅರ್ಪಿಸಿಕೊಂಡು ಬಸವಣ್ಣ ದಾಸೋಹಿಯಾದ. ಬಸವಣ್ಣನನ್ನು ಒಳಗೊಂಡವರು ಒಳಗೊಂಡಷ್ಟು ಬಸವಣ್ಣರಾದರು. ಆ ದಾಸೋಹಿಯನ್ನು ಒಳಗೊಂಡವರು ದಾಸೋಹಿಯಾದರು. ಬಸವಣ್ಣ ಪರಿಪೂರ್ಣ ದಾಸೋಹ, ದಾಸೋಹವೆಂಬುದು ಪರಿಪೂರ್ಣ ರೂಪ ತಾಳಿದ್ದು ಬಸವಣ್ಣನಿಂದ, ''ದಾಸೋಹಿಗೆ ದಾಸೋಹ ಭಾವ ಅಂತರಂಗ, ಬಹಿರಂಗ, ಅಣ್ಣನ ದಾಸೋಹಂಭಾವದಿಂದ ಮಾದರ ಚೆನ್ನಯ್ಯ ಅಪ್ಪನಾದ ಡೋಹರ ಕಕ್ಕಯ್ಯ ಬಪ್ಪನಾದ ಕಲ್ಯಾಣ ಮಾನವ ಕುಲ ಕಲ್ಯಾಣವೆನಿಸಿತು '. ,

'' ಅಯ್ಯಾ ನಿಮ್ಮ ಶರಣರ ದಾಸೋಹಕ್ಕೆ
ಎನ್ನ ತನು ಮನ ಧನ ವಲಸದಂತೆ ಮಾಡಯ್ಯ
ತನು ದಾಸೋಹಕ್ಕೆ ಉಬ್ಬುವಂತೆ ಮಾಡು
ಮನ ದಾಸೋಹಕ್ಕೆ ಲೀಯವಹಂತೆ ಮಾಡಯ್ಯ
ಧನ ದಾಸೋಹಕ್ಕೆ ಸವೆದು ನಿಮ್ಮ ಶರಣರ ಪ್ರಸಾದದಲ್ಲಿ
ನಿರಂತರ ಆಡಿ ಹಾಡಿ, ನೋಡಿ, ಕೂಡಿ, ಭಾವಿಸಿ ಸುಖಿಸಿ
ಪರಿಣಾಮಿಸುವಂತೆ ಮಾಡು, ಕೂಡಲ ಸಂಗಮ ದೇವಾ ''.[೫೫]

ಬಸವಣ್ಣನವರು ದಾಸೋಹತತ್ವದ ಅರ್ಪಣೆ ಭಾವವನ್ನು ವ್ಯಕ್ತ ಪಡಿಸಿದ್ದಾರೆ. ಎಲ್ಲವನ್ನು ಲಿಂಗಕ್ಕೆ ಅರ್ಪಿಸಬೇಕೆಂದು ಬಹಳ ವಿನಮ್ರತೆಯಿಂದ ಕೇಳಿಕೊಳ್ಳುವ ಶರಣರ ವಚನದಿಂದ ತಿಳಿದು ಬರುತ್ತದೆ. ತನ್ನ ತನು – ಮನ, ಧನ – ದಾಸೋಹಕ್ಕೆ ಸವೆಸುವಂತೆ ಅದರಿಂದ ನನಗೆ ತೃಪ್ತಿದೊರೆಯುತ್ತದೆ. ನನ್ನ ಆತ್ಮಕ್ಕೆ ಶಾಂತಿ ಸಿಗಬೇಕಾದರೆ, ನನ್ನದೆಲ್ಲವನ್ನು ದಾಸೋಹಕ್ಕೆ ಅರ್ಪಿತವಾಗುವಂತೆ ಮಾಡು ತಂದೆ ಯೆಂದು ಅಂಗಲಾಚಿ ಬೇಡಿಕೊಳ್ಳುತ್ತಾರೆ. ದಾಸೋಹ ಮಾಡುವಲ್ಲಿ ಕಿರಿಯರ ಕಿಂಕಲ ಭಾವ ಸದುವಿನಯ. ಹಿರಿಯರ ಗರುತ್ವಭಾವ ಮೇಳೈಸುವುದು ಅಗತ್ಯವಾಗಿರುತ್ತದೆ. ದಾಸೋಹವು ತಳೆದ ಧೃಡವಾದ ನಿಲುವು. ದಾಸೋಹಕ್ಕೆ ಸಂಪತ್ತು ಬೇಕಿಲ್ಲ. ಸತ್ಯಶುದ್ಧ ಕಾಯಕದಿಂದ ಬಂದುದನ್ನೆ ದಾಸೋಹಕ್ಕೆ ಸಾಕು.

"ಜನ್ಮ ಜನ್ಮಕ್ಕೆ ಹೋಗಲಿಯದೆ. ಸೋಹಂ ಎಂದೆನಿಸದೆ
ದಾಸೋಹಂ ಎಂದಿನಯ್ಯಾ
ಲಿಂಗ ಜಂಗಮ ಪ್ರಸಾದಕ ನಿಲವತೋರಿ
ಬದುಕಿಸಯ್ಯಾ ಕೂಡಲ ಸಂಗಮ ದೇವಾ ನಿಮ್ಮಧರ್ಮ".[೯೬]

ಈ ಜನ್ಮದಲ್ಲಿ ನಾನು, ನಂದು ಎಂದನಿಸದೆ ಎಲ್ಲವನ್ನು "ದಾಸೋಹ". ಜಂಗಮದು ಲಿಂಗದ್ದು ಎಂದೆನಿಸಿದರೆ ಸಾಕು. ನನ್ನದೆಂಬುದು ಏನಿಲ್ಲ. ಕೇವಲ ದಾಸೋಹವೇನನ್ನ ಪವಿತ್ರ ಭಾವನೆಯಾಗಿದೆ . ಜಂಗಮ ತೃಪ್ತಿಯಾದರೆ, ನಾನು ತೃಪ್ತಿಯಾದಂತೆ ಇವುಗಳಿಲ್ಲದಿದ್ದರೆ ನಾನು ಬದುಕುವುದಿಲ್ಲ ಎಂದು ಬಸವಣ್ಣನವರು ಹೇಳುತ್ತಾರೆ. ದಾಸೋಹ ಎಂದರೆ ಸ್ವೀಕರಿಸುವುದು ತಮ್ಮ ಹಕ್ಕು ಎಂಬ ಭಾವನೆಯನ್ನು ತಳೆಯಲು ಕಾರಣವಾಗಬೇಕು. ದಾಸೋಹವು ಪರೋಪ ಜೀವನಕ್ಕೆ ಕಾರಣವಾಗಬೇಕೇ ಹೋರತು ಅದು ತನದಾಗಬಾರದೆಂದು ಅವರ ನಿಲುವಾಗಿತ್ತು.

ಶರಣರ ದೃಷ್ಟಿಯಲ್ಲಿ ಕಾಯಕಕ್ಕೆ ಎರಡು ಮುಖಗಳಿವೆ. ಒಂದು ಸಂಪಾದನೆ ಇನ್ನೊಂದು ಆ ಕಾಯಕದಿಂದ ಸಂಪಾದಿಸಿದ ಹಣದಿಂದ ದಾಸೋಹ ಮಾಡುವುದು. ಸಮಾಜಕ್ಕೆ ಹೊರೆಯಾಗಿ ಪರೋಪಜೀವಿಯಾಗಿ ಜೀವನ ನಡೆಸುವುದನ್ನು ಹಿಂಗಳೆದ ವಚನಕಾರರು ದುಡಿದು ತಿನ್ನುವ ರೀತಿಗೆ ಪ್ರಾದಾನ್ಯತೆ ಎತ್ತರು. ಎಲ್ಲರೂ ಕಾಯಕವನ್ನು ಅವಲಂಬಿಸಿಯೇ ಜೀವಸಬೇಕೆಂಬುದು ಶರಣ ನಿಲುವಾಗಿತ್ತು. ಕಾಯಕದಿಂದ ಸಂಪಾದನೆ ದಾಸೋಹ ಮಾಡಿದರೆ ಶ್ರಮ ಸಾರ್ಥಕವಾಗುತ್ತದೆಯೆಂದು ಅವರು ನಂಬಿದರು. ಆದ್ದರಿಂದ ಅಂದು ಎಲ್ಲ ಶರಣರು ತಮ್ಮ ತಮ್ಮ ಕಾಯಕದಲ್ಲಿ ನಿಂತರಾಗಿದ್ದು ಕಂಡು ಬರುತ್ತದೆ.

" ದಾಸೋಹ ತತ್ವದ ತಾಯಿ ಬೇರು ಕಾಯಕ ಶುದ್ಧಿಯಲ್ಲಿದೆ. ಕಾಯಕ ಸಿದ್ಧಿಯ ಮೂಲ ದಾಸೋಹ ತತ್ವದ ಆಚರಣೆಯಲ್ಲಿದೆ. ಕಾಯಕತತ್ವ, ದಾಸೋಹ, ತತ್ವ – ಒಂದನ್ನು ಬಿಟ್ಟು ಒಂದಿಲ್ಲ. ಒಂದಕ್ಕೊಂದು ಪೂರಕವಾಗಿವೆ. ಪೋಷಕವಾಗಿವೆ. ಹೀಗೆ ಕಾಯಕ ಶುದ್ಧಿ ಕರ್ತವ್ಯ ಪ್ರಜ್ಞೆ ನಿರ್ವಂಚನೆಯ ಸಮರ್ಪಣೆ, ಜನತಾ ಜಂಗಮ ಸೇವೆ ಕ್ಷೇಮಕರನಾದುದೆಲ್ಲವೂ ದಾಸೋಹ ತತ್ವದಲ್ಲಿ ಅಡಕವಾಗಿದೆ". [೫೭] ಶರಣರ ದೃಷ್ಟಿಯಲ್ಲಿ " ಕಾಯಕ " ಹಾಗೂ " ದಾಸೋಹ " ಒಂದೇ ನಾಣ್ಯದ ಎರಡು ಮುಖಗಳು. ಕಾಯಕದಿಂದ ಸಂಪಾದಿಸಿ ದಾಸೋಹಕ್ಕೆ ಖರ್ಚು ಮಾಡಬೇಕೆಂದು ಶರಣ ನಿಲುವು. " ಮರದ ಬೇರಿಗೆ ನೀರೆರೆದರೆ, ಮೇಲೆ ಪಲ್ಲವಿಸಿ, ಹೂವೂ ಅರಳುವಂತೆ,ಅಳಿವಿಲ್ಲದ ಅರಿವಿರುವ ಜಂಗಮಕ್ಕೆ ದಾಸೋಹವ ಮಾಡಿದರೆ, ಜಗಕ್ಕೆ ತೃಪ್ತಿಯಾಗುವುದು. ಆ ತೃಪ್ತಿಯೇ ಲಿಂಗದಲ್ಲಿ ನೆಲೆಯಾಗಿ ಶಿವನ ಸಂತೃಪ್ತನಾಗುತ್ತಾನೆ. ಅಂತೆಯೇ ಜಂಗಮವೇ ಲಿಂಗಬಾಯಿ (ಬೇರು) ದಾಸೋಹದಿಂದಾಗಿ ಎಲ್ಲವು ಸೊಮ್ಮು ಶಿವನಿಗೆ ಸಲ್ಲುವುದರಿಂದ ಯಾವುದುಕೆಡಂದು"[೫೮] – ಎಂದು ಹೇಳಿದ್ದಾರೆ. ದಾಸೋಹ ಮಾಡುವುದರಿಂದ ಕಾಯಕದ ಸಾರ್ಥಕತೆಯಾಗುತ್ತದೆ. ಅದ್ದರಿಂದ ಅವನಿಗೆ ಮುಕ್ತಿ ದೊರೆಯುತ್ತದೆ. ಇದರಿಂದ ಅವನ ಪಾಪ ಕರ್ಮಗಳೆಲ್ಲ ನೆಸಿಸಿ ಹೋಗಿ ಲಿಂಗಾಂಗದಲ್ಲಿ ಬೆರೆಯುತ್ತಾನೆಂದು ಅವನ ಭಾವನೆಯಾಗಿತ್ತು.

" ತನ್ನಗಳಿಕೆಯಲ್ಲಿ ತನ್ನ ಅವಶ್ಯಕತೆಗೆ ಮೀರಿ ಉಳಿದಿದ್ದನ್ನು ದಾಸೋಹದಲ್ಲಿ ವಿನಿಯೋಗಿಸಬೇಕೆಂದು ವಚನಕಾರರು ನಿಯಮಿಸಿದರು. ಅ ನಿಯಮದ ಹಿಂದೆಯೂ ಒಂದು ತಾತ್ವಿಕ ಕಾರಣವಿದೆ ಎನಿಸುತ್ತದೆ. ಸಮಾಜದ ಎಲ್ಲರೂ ಉತ್ಪನ್ನ ಮಾಡುವ ವೃತ್ತಿಯನ್ನು ಅವಲಂಬಿಸಲು ಸಾಧ್ಯವಿಲ್ಲ. ಕೆಲವರು ಸಮಾಜ ಶಿಕ್ಷಣದಂತಹ ಕಾರ್ಯದಲ್ಲಿ ತೊಡಗಬಹುದು. ಅವರ ಪಾಲಿನ ಉತ್ಪನ್ನವನ್ನು ಶ್ರಮಜೀವಿಗಳ ಮಾಡಬೇಕಾಗುತ್ತದೆ. ಬುದ್ಧಿ ಜೀವಿಗಳು ಮಾನಸಿಕ ಶ್ರಮದಿಂದ ಸಮಾಜಕ್ಕೆ ಬೇಕಾದವರಾಗಿರಬಹುದು. ಅವರು ದೇಹ ಶ್ರಮದಿಂದ ಗಳಿಸದಿದ್ದರೂ " ಕಾಯಕ " ಎಂಬುದು ದೇಹ ಸಂಬಂಧವಾದ ಅರ್ಥ ಸೂಚಿಸಿದರೂ, ಮಾನಸಿಕ ಶ್ರಮ ವನ್ನು ಶರಣರು ಕಾಯಕವೆಂದೇ ಕರೆದರು."[೫೯] ಹಲವಾರು ರೀತಿಯ ಕಾಯಕ ದಿಂದ ಗಳಿಸಿದ ಹಣವನ್ನು ದಾಸೋಹಕ್ಕೊಪ್ಪಿಸಬೇಕು. ಅದು ಅವರ ಅದ್ಯ ಕರ್ತವ್ಯವಾಗಿದೆ.

ದಾಸೋಹದಲ್ಲಿ ತ್ರಿವಿಧ ದಾಸೋಹ ವೆಂದು ಶರಣರು ಭಾಗಿಸಿದ್ದಾರೆ. ಅವು ಯಾವುದೆಂದರೆ, ವೀರಶೈವ ಭಕ್ತನು ತನು, ಮನ, ಧನ, ಗಳನ್ನು ಗುರು, ಲಿಂಗ, ಜಂಗಮ, ಗಳಿಗೆ ಸೆವೆಸುದೇ "ತ್ರಿವಿಧ

ದಾಸೋಹ'' ವಾಗಿದೆ. ಅದು ಕಾಯಕದಿಂದ ಬಂದಿರಬೇಕು. ತ್ರಿವಿಧ ದಾಸೋಹದ ತತ್ವವನ್ನು ಬಸವಣ್ಣನವರ ಒಂದು ವಚನದಲ್ಲಿ ನೋಡಬೇಕು.

''ತನುವಿಡಿದು ದಾಸೋಹ ಮಾಡಿ, ಗುರು ಪ್ರಸಾದಿಯಾದ ಬಸವಣ್ಣ
ಮನ ವಿಡಿದು ದಾಸೋಹ ಮಾಡಿ ಲಿಂಗ ಪ್ರಸಾದಿಯಾದ ಬಸವಣ್ಣ
ಧನವಿಡಿದು ದಾಸೋಹ ಮಾಡಿ ಜಂಗಮ ಪ್ರಸಾದಿಯಾದ ಬಸವಣ್ಣ''
ದಾಸೋಹ ಎಂದರೆ, ಅರ್ಪಿಸುವುದೆಂದು ತಿಳಿಸಿದ್ದಾರೆ.
'' ಲಕ್ಷಣಾವುದು ದಾರಿಯ ಹೋಗಿ
ಭಕ್ತನು ಭಕ್ತನ ಕಾಂಬುದು ಸದಾಚಾರ
ಅಲ್ಲಿ ಕೂಡಿ ದಾಸೋಹವ ಮಾಡಿದಡೆ
ಕೂಡಿಕೊಂಬನು ನಮ್ಮ ಕೂಡಲ ಸಂಗಮದೇವ'' [೬೦]

ಈ ಮೇಲಿನ ವಚನದ ತಾತ್ಪರ್ಯವೆನೆಂದರೆ ಭಕ್ತ ಭಕ್ತರಲ್ಲಿ ಬೆರೆದು ಭಕ್ತಿ ಭಕ್ತಿಯಲ್ಲಿ ಮೇಳವಿಸಿ. ಒಬ್ಬರನೊಬ್ಬರು ಅರಿತುಕೊಳ್ಳುವುದು ಸದಾಚಾರ. ಮೇಳವಿಸದ ಭಕ್ತಿಯನ್ನು ಸಂಗಮನಿಗೆ ಅಥವಾ ಲಿಂಗಕ್ಕೆ ಅರ್ಪಿಸುವುದೆ '' ದಾಸೋಹ '' ಎಂದರು. ಭಕ್ತಿರಸ ಕೊಟ್ಟ ದಾಸೋಹದ ಇನ್ನೊಂದು ಗುಣಧರ್ಮವಾಗಿದೆ.

ಹೀಗೆ ದಾಸೋಹದ ಅರ್ಥ, ಸ್ವರೂಪ, ಮಹತ್ವತೆಯನ್ನು ಅರಿತುಕೊಳ್ಳಲಾಗಿದೆ. ಹೈದ್ರಾಬಾದ – ಕರ್ನಾಟಕ ವೀರಶೈವ ಮಠಗಳು ದಾಸೋಹದಲ್ಲಿ ತಮ್ಮ ಪಾತ್ರವಹಿಸುತ್ತಿವೆ. ಕಲಬುರ್ಗಿ ಶ್ರೀ ಶರಣ ಬಸವೇಶ್ವರ ಮಠವು '' ದಾಸೋಹ '' ಮಠವೆಂದೇ ಪ್ರಖ್ಯಾತಿ ಪಡೆದುಕೊಂಡಿದೆ. ಪೂರ್ವ ಪೀಠಾಧೀಶರಾದ ಪೂಜ್ಯ ಶ್ರೀ ದೊಡ್ಡಪ್ಪ ಅಪ್ಪ ನವರು ತಮ್ಮ ಸ್ವಂತ ಒಕ್ಕಲುತನ ಹಾಗೂ ವ್ಯಾಪಾರಗಳ ಕಾಯದಿಂದ ದಾಸೋಹಕ್ಕಾಗಿ ವಿನಿಯೋಗಿಸುತ್ತಿದ್ದರು. '' ಆರಂಭ ಮಾಡುವೆನಯ್ಯ ಆನು ಗುರು – ಲಿಂಗ – ಜಂಗಮ ಪೂಜೆಗೆಂದು '' – ಎನ್ನುವಂತೆ ಶ್ರಮ ಪಟ್ಟು ದುಡಿದು ಸಂಪಾದಿಸಿದ ಭತ್ತ ದವಸ ದಾನ್ಯಗಳನೆಲ್ಲ ತನ್ನ ಸುಖಗಳಿಗಲ್ಲದೆ, ಪರರ ಸುಖ ಸಂತೋಷಗಳಿಗೆ ದಾಸೋಹದ ಮೂಲಕ ಅರ್ಪಿಸುತ್ತಿದ್ದರು.

ಶರಣ ಬಸವಪ್ಪನವರು ತಮ್ಮ ಹೊಲಕ್ಕೆ ಬೆಲಿ ಇಕ್ಕಲಿಲ್ಲ, ಹಕ್ಕಿ ಹೊಡೆಯಲಿಲ್ಲ. ಪಶು – ಪಕ್ಷಿಗಳಿಗುಂಟಾದ ತೃಪ್ತಿ ಶಿವಲಿಂಗಕ್ಕೆ ತೃಪ್ತಿ. ಶರಣರ ತೃಪ್ತಿ. ಸಕಲ ಜೀವಾತ್ಮಕ ಬಂದುವಾಗಿ ದಾಸೋಹದಲ್ಲಿ ಬೆರೆತುಕೊಂಡಿದ್ದರು. ಇಡೀ ಕರ್ನಾಟಕಾಂಧ್ರ, ಮಹಾರಾಷ್ಟ್ರಗಳಿಗೆ ''ದಾಸೋಹ ಪೀಠ'' (ಮಠ)ವೆಂದೇ ಪ್ರಸಿದ್ಧಿ ಪಡೆದುಕೊಂಡಿತ್ತು. ದೊಡಪ್ಪ ಅಪ್ಪ ಅವರು ಶಿವನಿಗೆ ತನ್ನನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡಿದ್ದರು.

ಶಿವನಿಗಾಗಿಯೆ ಕೃಷಿ ಕಾಯಕ ಮಾಡಿದರು. ಶಿವಾಭಾವದಿಂದ ಭಕ್ತರಿಗೆ ನೀಡಿದರು. ಅದುವೆ ಅವರ ದೃಷ್ಟಿಯಲ್ಲಿ ದಾಸೋಹವಾಯಿತು. ಶಿವನಿಂದ ಬಂದಿದೆಂದು, ಪಡೆದದ್ದು ಪ್ರಸಾದವೆಂದರು. ನಿಸರ್ಗದ ಕ್ರಿಯೆಯಲ್ಲಿ ಅವರು ಕಂಡದ್ದು ಶಿವದರ್ಶನ. ಬೆಳಗಾಗುವುದು ಇಷ್ಟಲಿಂಗ ಪೂಜೆಗೆಂದು ಮಿಸಲಾಗಿಟ್ಟರು. ಮದ್ಯಾಹ್ನ ವಾಗವುದು ಗುರುಲಿಂಗ ಜಂಗಮ ದಾಸೋಹಕ್ಕೆಂದು ಅರಿದರು. ರಾತ್ರಿಯಾದರೆ ಇಷ್ಟಲಿಂಗ ಪೂಜೆ ಗುರುಲಿಂಗ ಜಂಗಮ ದಾಸೋಹಕ್ಕೆಂದು ಮಾಡುವುದು,ಶಿವ ವಿಶ್ರಾಂತಿ ಪಡೆಯಲೆಂದು ಭಾವಿಸಿದರು.

ಒಂದು ನೂರು ಫೀಟ ಅಗಲ ಇನ್ನೂರು ಫೀಟ ಉದ್ದವಾದ ಇಪ್ಪತ್ತೆರಡು ಕಮಾನಗಳುಳ್ಳ ಭವ್ಯ " ದಾಸೋಹ ಮಂಟಪ " ವನ್ನು ನೀರ್ಮಿಸಿದರು. ನಾಲ್ಕು ಕಡೆ ಅಗಲವಾದ ಪಡಸಾಲೆಯನ್ನು ಹೊಂದಿದೆ. ದಾಸೋಹ ಮಂಟಪದ ಒಳಗೆ ಸುಮಾರು ಮೂವತ್ತು ನೀರಿನ ನಳವನ್ನು ಸ್ಥಾಪಿಸಿ ಭಕ್ತರಿಗೆ ಯಾವುದೇ ರೀತಿಯ ತೊಂದರೆಯಾಗಂತೆ ನೋಡಿಕೊಂಡರು. ಗುಲಬರ್ಗಾ ನಗರ ಹಾಗೂ ಸುತ್ತ ಮುತ್ತ ಸಾವಿರಾರು ಗ್ರಾಮದ ಜನರು ಬಂದು ಪ್ರತಿನಿತ್ಯ ದಾಸೋಹದಲ್ಲಿ ಪ್ರಸಾದ ತೆಗೆದುಕೊಂಡು ಹೋಗುತಿದ್ದರು. ಭಕ್ತರಿಗೆ ಹಾಲು ಮೊಸರು , ತುಪ್ಪ ಬೇಕೆಂಬ ಉದ್ದೇಶದಿಂದ, ಅಪ್ಪಗಳ ಮಠದಲ್ಲಿಯೆ ಆಕಳು, ಎಮ್ಮೆ, ಹಸುಗಳನ್ನು ಇಟ್ಟುಕೊಂಡಿದ್ದರು. ಹಸುವಿನಿಂದ ಕರೆದ ಹಾಲು ಮೊಸರುಗಳೆಲ್ಲವು ಗುರು – ಲಿಂಗ – ಜಂಗಮಕ್ಕೆ ಅರ್ಪಿಸಿ ಸಂತೋಷಪಡುತ್ತಿದ್ದರು. ಶ್ರೀಮಠದಲ್ಲಿ ಬಿಳಿ ಜೋಳದ ರೋಟ್ಟಿ, ತೋಗರಿ ಬೇಳೆ, ಅನ್ನ , ಮೊಸರು, ತುಪ್ಪ, ಸಜ್ಜಿಗೆ, . . . . . . ಮುಂತಾದ ರೀತಿಯ ಪದಾರ್ಥಗಳು ದಾಸೋಹದಲ್ಲಿ ದೊರೆಯುತ್ತಿದ್ದವು. ಈ ಮಠದಲ್ಲಿ ಯಾವುದೇ ಜಾತಿ, ಮತ, ಪಂಥಗಳಿಲ್ಲದೇ ದಾಸೋಹದಲ್ಲಿ ಪ್ರಸಾದವನ್ನು ತೆಗೆದುಕೊಂಡು ಹೋಗುತ್ತಿದ್ದರು. ಒಟ್ಟಾರೆಯಾಗಿ ದಾಸೋಹವು ಧಾರ್ಮಿಕ, ಸಾಮಾಜಿಕ, ಅರ್ಥಿಕ ರೀತಿಯಲ್ಲಿ ಸಮಾನತೆಯನ್ನು ಕಾಣುವುದಾಗಿದೆ. ಯಾರು ಮೇಲಲ್ಲ, ಯಾರು ಕೀಳಲ್ಲ, ಎಲ್ಲರು ಸರಿಸಮಾನರು ಎಂಬ ಸಂಕೇತವನ್ನು ಹಾಕಿಕೊಡುತ್ತಿದ್ದರೂ ಸಹ ಪಂಕ್ತಿ ಭೋಜನವನ್ನು ನೀಡಿದರಿಂದ ಮನಸ್ಸಿನಲ್ಲಿರುವ ಭಾವನೆಯ ಪ್ರತಿಕವಾದ ವಿಶ್ವಾಸ ಬೆಳೆಯುತ್ತಿದೆಂದು ಶರಣರು ನಂಬಿದರು.

ಪ್ರಪಂಚದಲ್ಲಿ ಅನ್ನದಾನಕಿಂತ ಶ್ರೇಷ್ಠಧಾನ ಮತ್ತೊಂದಿಲ್ಲ. ಅದನ್ನು ಮಿರಿಸುವ ವಸ್ತುಗಳೆಂದರೆ, ಮಾನವನಿಗೆ ಅತ್ಯವಶ್ಯವಾದುದು ಗಾಳಿ, ನೀರು, ಅನ್ನವನ್ನು ಕುರಿತು ಸರ್ವಜ್ಞ ಕವಿ ಹೀಗೆ ಹೆಳುತ್ತಾನೆ.

" ಅನ್ನದೇವರ ಮುಂದೆ, ಇನ್ನೂ ದೇವರು ಉಂಟೆ,  
ಅನ್ನ ಉಂಟಾದ ರುಣಲುಂಟು, ಜಗದೊಳಗೆ  
ಅನ್ನವೇ ದೈವ ಸರ್ವಜ್ಞ" [೬೧]

ಅನ್ನವು ಜಗತ್ತಿನ ಮಾನವ ಪ್ರಾಣರಕ್ಷಕ ಎಂಬ ನೈಜವಾಣಿಯನ್ನು ಕವಿ ತನ್ನ ತ್ರಿಪದಿಯ ವಚನದಲ್ಲಿ "ಅನ್ನವೇ ಜೀವ". ಮಾನವ ಬದುಕಬೇಕಾದರೆ, ಅನ್ನವೇ ಆಧಾರ. ಇದಕ್ಕೆ " ಅನ್ನಂ ಬ್ರಹ್ಮಂ " ವೆಂಬುದು ತಿಳಿದು ಬರುತ್ತದೆ. ಹಸಿದ ಮಾನವನಿಗೆ ಅನ್ನವನ್ನಿಟ್ಟರೆ ಕೋಟಿ ಪುಣ್ಯ ಲಭಿಸುತ್ತದೆಂಬ ಮಾತಿದೆ. ಆದಕಾರಣ ಇಲ್ಲಿ ವೀರಶೈವ ಮಠಗಳಲ್ಲಿ ಮೇಲು – ಕೀಳೆಂಬ ಭೇದ – ಭಾವಗಳಿಲ್ಲದೆ ಎಲ್ಲರಿಗೂ ಸಮಾನ ದೃಷ್ಟಿಯಿಂದ ಕಾಣುತ್ತಾರೆ. ಮಠಕ್ಕೆ ಆಗಮಿಸಿದ ಪ್ರತಿಯೊಬ್ಬ ಭಕ್ತರಿಗೆ ಅನ್ನದಾಸೋಹದಿಂದ ತೃಪ್ತಿಪಡಿಸುವ ಮಠವಾಗಿರುತ್ತದೆ.

೧೯೭೨ ರಲ್ಲಿ ಕರ್ನಾಟಕ, ಆಂದ್ರ ಪ್ರದೇಶ ಹಾಗೂ ಮಾಹಾರಾಷ್ಟ್ರಗಳಲ್ಲಿ ಮಳೆ ಬಾರದೆ ಬೆಳೆಗಳೆಲ್ಲ ಸುಟ್ಟು ಹೋಗಿ ಜನರು ಆತ್ಮ ಹತ್ಯೆಗೊಳಗಾದಾಗ ಸರಕಾರು "ಬರಗಾಲ" ವೆಂದು ಘೋಷಣೆ ಮಾಡಿದ್ದಾಗ ಈ ಮಠದಲ್ಲಿ ಅನ್ನದ ಗಂಜಿಯನ್ನು ಜನರಿಗೆ ವಣಬಡಿಸಿದ ಕೀರ್ತಿ ಲಿಂಗೈಕ್ಯ ಡಾ: ಚನ್ನಬಸವ ಪಟ್ಟದ್ದೇವರಿಗೆ ಸೇರಿರುತ್ತದೆ. ಪ್ರತಿ ದೀವಸ ನೂರಾರು ಭಕ್ತರಿಗೆ ಅನ್ನದ ಗಂಜಿಕೊಟ್ಟು ತೃಪ್ತಿ ಪಡಿಸಿದ್ದರು.

" ತನುವನು ಗುರು ಸೇವೆಯಲ್ಲಿ ಸವೆಸಿ,<br>
ಮನವನು ಲಿಂಗಪೂಜೆಯಲ್ಲಿ ಸೆವೆಸಿ<br>
ಧನವನು ಜಂಗಮ ದಾಸೋಹದಲ್ಲಿ ಸೆವೆಸಿ,<br>
ತನದೆಲ್ಲವನ್ನು ಸಮಾಜಕ್ಕೆ ಸವೆಸಿ,<br>
ನಿರಂಜನ ಜಂಗಮ ಮೂರ್ತಿಯಾಗಿ ಬೆಳೆಗಿಸಿದೆ"[೨]

ಭಾಲ್ಕಿ ಹಿರೇಮಠದ ಷತಾಯುಷಿ ಲಿಂಗೈಕ್ಯ ಡಾ: ಚನ್ನಬಸವ ಪಟ್ಟದ್ದೇವರ ಜೀವನದಲ್ಲಿ ಮಾಡಿದ ಸಾಮಾಜಿಕ ಸಾಧನೆಯನ್ನು ಕುರಿತು ಡಾ: ಅನ್ನದಾನಯ್ಯಾ ಪುರಾಣಿರವರು ಬರೆದ ವಚನ ತುಂಬಾ ಹೊಲುತ್ತದೆ. ಇದೇ ತನ್ನ ಜೀವನವನ್ನೆಲ್ಲ ಗುರು, ಲಿಂಗ, ಜಂಗಮ ದಾಸೋಹಗಳಲ್ಲಿ ಬೆರೆಸಿಕೊಂಡಿರುವ ಶ್ರೀಗಳ ಸಾಧನೆ ಹಚ್ಚ ಹಸಿರಾಗಿದೆ. ಶ್ರೀ ಮಠದಲ್ಲಿಯೇ ಅನ್ನದಾಸೋಹವು ನೂತನ ಪೀಠಾಧೀಶರಾದ ಪೂಜ್ಯ ಶ್ರೀ ಬಸವಲಿಂಗ ಪಟ್ಟದ್ದೇವರು ಸತತವಾಗಿ ಮುಂದುವರೆಸಿಕೊಂಡು ಬರುತ್ತಿದ್ದಾರೆ.

ಹುಲಸೂರ ಶ್ರೀಗುರು ಬಸವೇಶ್ವರ ಸಂಸ್ಥಾನ ಮಠವು ಅನ್ನದಾಸೋಹಕ್ಕೆ ಮುಡುಪಾಗಿದೆ. ಮಠಕ್ಕೆ ಬಂದ ಭಕ್ತರು ಮೊದಲು ಅನ್ನ ಪ್ರಸಾದ ಮಾಡಿದರೆ ಪೂಜ್ಯ ಶ್ರೀ ಶಿವಾನಂದ ಮಹಾಸ್ವಾಮಿಜಿಯವರಿಗೆ ಸಂತೋಷ. ಅನ್ನ ಪ್ರಸಾದವನ್ನು ಸ್ವೀಕರಿಸಿದ ನಂತರ ಮುಂದಿನ ಮಾತು ಕತೆಗಳೆಲ್ಲವು ಎಂದು ಹೇಳುವರು.

ಹಾರಕೂಡ ಶ್ರೀ ಬೃಹನ್ಮಠ ಅನ್ನದಾಸೋಹಕ್ಕೆ ಹೆಚ್ಚಿನ ಗಮನ ಕೊಡುತ್ತಿದೆ. ಮಠಕ್ಕೆ ಆಗಮಿಸಿದ ಭಕ್ತರಿಗೆ ಮೊಟ್ಟ ಮೊದಲು ಅನ್ನ ಪ್ರಸಾದ ಮಾಡುವ ಸಂಪ್ರದಾಯ ಬೆಳೆದುಕೊಂಡು ಬಂದಿದೆ. ಭಾತಂಬ್ರಾ ವಿರಕ್ತ ಮಠವು ಅನ್ನ ದಾಸೋಹಕ್ಕೆ ಗಮನ ಕೊಡುತ್ತಿಲ್ಲ. ಅಲ್ಲಿ ಯಾವುದೇ ರೀತಿಯ ಅನ್ನ ಪ್ರಸಾದ ದಾಸೋಹಗಳಾಗಲಿ ದೊರೆಯುವುದಿಲ್ಲ. ಬಹಳ ಧೂರದಿಂದ ಬಂದ ಭಕ್ತರಿಗೂ ಅನ್ನದಾಸೋಹ ವಿಲ್ಲವೆಂದು ತಿಳಿದುಬಂದಿದೆ. ಇಡೀ ರಾಜ್ಯಕ್ಕೆ ಹೆಸರುವಾಸಿಯಾದ ಗುಲಬರ್ಗಾ ಶ್ರೀ ಶರಣಬಸವಪ್ಪಾ ಅಪ್ಪನವರ ಮಠವು "ದಾಸೋಹ" ಮಠವೆಂದೆ ಪ್ರಸಿದ್ಧಿ ಪಡೆದ ದಾಸೋಹ ಮಠವಾಗಿದೆ. ಇತ್ತೀಚಿಗೆ ದಾಸೋಹದ ಕಡೆ ಗಮನವನ್ನು ಕಡಿಮೆ ಮಾಡಿ ಶೈಕ್ಷಣಿಕ ಕ್ಷೇತ್ರದಲ್ಲಿ ಪ್ರಗತಿಯನ್ನು ಸಾಧಿಸುತ್ತಿದೆ. ನಾಲವಾರ ಗ್ರಾಮದ ಶ್ರೀ ಕೋರಿ ಸಿದ್ದೇಶ್ವರ ಸಂಸ್ಥಾನ ಮಠದಲ್ಲಿ ಅನ್ನದಾಸೋಹವು ಸತತವಾಗಿ ನಡೆಸಿಕೊಂಡು ಬರುತ್ತಿದ್ದಾರೆ.

ಭರತನೂರ ವಿರಕ್ತ ಮಠವು ದಾಸೋಹಕ್ಕೆ ಪಾತ್ರವಾಗಿದೆ. ಮಠಕ್ಕೆ ಬಂದ ಭಕ್ತರನ್ನು ಅನ್ನದಾಸೋಹ ಮುಖಾಂತರ ತೃಪ್ತಿ ಪಡಿಸುತ್ತಾರೆ. ಸುಲೇಪೇಟೆಯ ವಿರಕ್ತ ಮಠ, ಖಜುರಿ ವಿರಕ್ತ ಮಠ ರುದ್ದನೂರು ವಿರಕ್ತ ಮಠ, ಚಿಣಮಗೇರಿ ಹಿರೇಮಠ,ಗಳು ಸಹ ಅನ್ನದಾಸೋಹದ ಕಡೆಗೆ ಹೆಚ್ಚು ಗಮನವನ್ನು ಹರಿಸುತ್ತಿವೆ. ಸೊನ್ನದ ವಿರಕ್ತ ಮಠವು ಬಡ ವಿಧ್ಯಾರ್ಥಿಗಳಿಗಾಗಿ ಒಂದು ಬೋರ್ಡಿಂಗ ಶಾಲೆಯನ್ನು ತೆರೆದು ಅದರಡಿಯಲ್ಲಿ ಸುಮಾರು ನಲವತ್ತಕ್ಕೂ ಹೆಚ್ಚು ವಿಧ್ಯಾರ್ಥಿಗಳಿಗೆ ಊಟದ ವ್ಯವಸ್ಥೆಯನ್ನು ಮಾಡಲಾಗಿದೆ. ಅಲ್ಲದೆ ಮಠಕ್ಕೆ ಬಂದ ಭಕ್ತರಿಗೂ ಅನ್ನದಾಸೋಹ ವ್ಯವಸ್ಥೆ ಸತತವಾಗಿ ನಡೆಸಿಕೊಂಡು ಬರುತ್ತಿದ್ದಾರೆ.

ಜೇವರ್ಗಿಯ ವಿರಕ್ತ ಮಠವು ರಾಮಕೋಡದ ಹಿರೇಮಠವು, ಪಾಳಾದ ಹಿರೇಮಠ,ಗಳಲ್ಲಿ ದಾಸೋಹ ನಡೆಯುತ್ತದೆ. ಹೆಚ್ಚಾಗಿ ಪ್ರತಿಯೊಂದು ಮಠಗಳಲ್ಲಿ ಹೆಚ್ಚು ಕಡಿಮೆ ಅನ್ನದಾಸೋಹ ಇದ್ದೆ ಇರುತ್ತದೆಂದು ನನ್ನ ಅಭಿಪ್ರಾಯವಾಗಿದೆ.

೧.೪. ಪ್ರತಿಭಾ ಪುರಸ್ಕಾರ

ದೇಶದ ಅಭಿಮಾನಕ್ಕಾಗಿ, ನಾಡು ನುಡಿಗಳ ರಕ್ಷಣೆಗಾಗಿ ಹೋರಾಡಿದ, ಇಲ್ಲವೆ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಸಾಹಿತ್ಯಿಕ ರಾಜಕೀಯ ಕ್ಷೇತ್ರಗಳಲ್ಲಿ ಗಣನೀಯವಾದ ಸೇವೆ ಸಲ್ಲಿಸಿದ ಪ್ರತಿಭಾವಂತರಿಗೆ ವೀರಶೈವ ಮಠಗಳು ಸನ್ಮಾನದಿಂದ ಸತ್ಕರಿಸುತ್ತಾರೆ. ಮುಂದೆ ತಮ್ಮ ಕಾರ್ಯ ಪ್ರಗತಿಶಿಲವಾಗಲೆಂದು ಹುರಿದುಂಬಿಸುತ್ತಾರೆ. ಸಾಹಿತ್ಯ ಕ್ಷೇತ್ರದಲ್ಲಿ ಅಪಾರ ಸೇವೆ ಸಲ್ಲಿಸಿದ ಹಿರಿಯ

ಸಾಹಿತಿಗಳಾದ ಲಿಂಗೈಕ್ಯ ಶ್ರೀ ಹ. ಮಾ. ನಾಯಕ. ಡಾ: ಎಂ. ಎಂ. ಕಲಬುರ್ಗಿ ಡಾ: ಚನ್ನವೀರ ಕಣವಿ ಡಾ: ಸಾ. ಶಿ. ಮರುಳಯ್ಯಾ ಡಾ: ಹಿರೇಮಲ್ಲೂರ ಈಶ್ವರನ್ ಡಾ: ಶಂತರಸ ರಾಯಚೂರ ಡಾ: ಜಿ. ಎಸ್. ಸಿದ್ದಲಿಂಗಮ್ಮ ಡಾ: ಎಲ್. ಬಸವರಾಜು ಡಾ: ಎಂ. ಎಸ್. ಲಠ್ಠೆ ಡಾ: ಬಸವರಾಜ ಸಬರದ .. . . ಹೀಗೆ ಮುಂತಾದ ಸಾಹಿತಿಗಳಿಗೆ ಭಾಲ್ಕಿ ಹಿರೇಮಠವು ಸತ್ಕರಿಸಿ ಗೌರವಿಸಿದೆ.

ಹುಲಸೂರು ಶ್ರೀ ಗುರು ಬಸವೇಶ್ವರ ಮಠ, ಹಾರಕೂಡ ಬೃಹನ್ಮಠ . . . . ಗಳು ತಮ್ಮ ತಮ್ಮ ಮಿತಿಯಲ್ಲಿ ಪ್ರತಿಭಾವಂತರಿಗೆ ಸತ್ಕರಿಸಿ ಗೌರವಿಸುತ್ತಿವೆ. ಇದರಿಂದ ಜನರ ಭಾವನೆ ಪ್ರತಿಭೆಗಳು ಬೆಳೆಯಲು ಪ್ರೇರಣೆಯ ಶಕ್ತಿಗಳಾಗಿವೆ. ಮಠಾಧೀಶರು ಇತ್ತೀಚೀಗೆ ರಾಜಕೀಯ ಮುಖಂಡರನ್ನು ಆಮಂತ್ರಿಸಿ ಸತ್ಕರಿಸುತ್ತಿರುವುದು ಹೆಚ್ಚಾಗಿ ಕಂಡು ಬರುತ್ತಿದೆ. ಯಾವುದೇ ವರ್ಗದ ಮಠವಿರಲಿ ಅಲ್ಲಿ ಯಾವುದೇ ಸ್ಮರಣೋತ್ಸವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಾಗ ರಾಜಕಾರಣಿಯರನ್ನೇ ಹೆಚ್ಚಾಗಿ ಕಂಡು ಬರುತ್ತಾರೆ. ಏಕೆಂದರೆ ಸಾಹಿತಿಗಳಿಂದ ಯಾವುದೇ ರೀತಿಯ ಧನ ಸಹಾಯ ಕೊಡುವುದಿಲ್ಲ, ರಾಜಕಾರಣಿಗಳು ಬೇಕಾದಷ್ಟು ಧನ ಸಹಾಯವನ್ನು ಮಠಕ್ಕೆ ಕೊಡುತ್ತಾರೆ. ಇದರಿಂದ ಮಠಾಧೀಶರು ಸಾಹಿತಿಗಳಿಗಿಂತ ರಾಜಕಾರಣಿಯರಿಗೆ ಹೆಚ್ಚು ಗೌರವವಾದ ಸ್ಥಾನವನ್ನು ಕೊಡುತ್ತಿರುವುದು ಕಂಡು ಬರುತ್ತದೆ.

ಗುಲಬರ್ಗಾದ ಶರಣ ಬಸವಪ್ಪ ಅಪ್ಪನವರ ದಾಸೋಹ ಮಠವು ಹಾಗೂ ಸಾಲವಾರ ಗ್ರಾಮದ ಶ್ರೀ ಕೋರಿಸಿದ್ದೇಶ್ವರ ಮಠವು ಪ್ರಮುಖವಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ನಾಡಿಗಾಗಿ ದೇಶಕ್ಕಾಗಿ ದುಡಿದ ವ್ಯಕ್ತಿಯನ್ನು ಗುರುತಿಸಿ ಅವರಿಗೆ ಸನ್ಮಾನದಿಂದ ಗೌರವಿಸುತ್ತಿವೆ.

ರಾಯಚೂರು ಜಿಲ್ಲೆಯ ಜಾಲಹಳ್ಳಿ ಜಯಶಾಂಲಿಂಗೇಶ್ವರ ಸಂಸ್ಥಾನ ಮಠದಲ್ಲಿ ಪ್ರತಿ ವರ್ಷ ಭಾದ್ರಪದ ಶುದ್ಧ ಪ್ರತಿಪದೆಯಿಂದು ಶ್ರಾಮಣ ಮಾಸದ ನಿಮಿತ್ಯ ದೊಡ್ಡ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾರೆ. ಈ ಸಂಧರ್ಬದಲ್ಲಿ ಪ್ರತಿಭಾವಂತರಿಗೆ ಪುರಸ್ಕರಿಸಿ, ಸತ್ಕರಿಸುತ್ತಾರೆ. ಅದೇ ರೀತಿ ಮಾನವಿ ಗ್ರಾಮದ ಕಲ್ಮಠ, ನವಿಲಕಲ್ಲು ಹಿರೇಮಠ, ದೇವರ ಭೂಪೂರ , ಗುರುಗುಂಟ ತೋಪಿನ ಕಟ್ಟಿ ಸಂಸ್ಥಾನ ಮಠ ಗಬ್ಬೂರ ಸಾವಿರ ದೇವರ ಮಠ .. . . . ಮುಂತಾದ ವೀರಶೈವ ಮಠಗಳಲ್ಲಿ ವರ್ಷಕ್ಕೊಮ್ಮೆ ಸಾಂಸ್ಕೃತಿಕ ಕಾರ್ಯಕ್ರಮ ಜರಗುತ್ತವೆ. ಈ ಸಂಧರ್ಬದಲ್ಲಿ ಪ್ರತಿಭಾವಂತರಿಗೆ ಪುರಸ್ಕರಿಸಿ, ಸತ್ಕರಿಸುವ ಸಂಪ್ರದಾಯವಿದೆ.

## ೩. ಶೈಕ್ಷಣಿಕ ಕೊಡುಗೆ

ವೀರಶೈವ ಮಠಗಳಿಗೂ ಶಿಕ್ಷಣಕ್ಕೂ ನಿಕಟವಾದ ಸಂಬಂಧವಿದೆ. ಆ ದೃಷ್ಟಿಯಲ್ಲಿಯೇ ಅಮರ ಸಿಂಹನು, ಹೇಳುವಂತೆ ಮಠಗಳು ವಿಧ್ಯಾರ್ಥಿಗಳ ವಾಸಸ್ಥಳ ಅಥವಾ ವಿಧ್ಯಾರ್ಥಿಗಳ ಕುಠಿರ, ವೆಂದು ಹೇಳಿದ್ದಾನೆ. ವೀರಶೈವ ಮಠಗಳು ಮೊಟ್ಟ ಮೊದಲು ಧರ್ಮ ಪ್ರಸಾರದಲ್ಲಿ ನಿರತವಾಗಿದ್ದವು. ನಂತರ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ಕೊಡುತ್ತಾ ಬಂದಿರುವುದು ತಿಳಿದು ಬರುತ್ತದೆ. ''ಶಾಲೆಯೆಂದರೆ ಒಂದು ಕಾಲದಲ್ಲಿ ಅಯ್ಯನವರ ಮಠವೇ ಆಗಿತ್ತು. ಅಲ್ಲಿ ವ್ಯವಹಾರಕ್ಕೆ ಬೇಕಾದಷ್ಟು ಭಾಷೆ ಮತ್ತು ಗಣಿತಗಳನ್ನು ತಪ್ಪದೆ ಕಲಿಸಲಾಗುತ್ತಿತ್ತು. ಲೌಕಿಕ ಮತ್ತು ಪಾರಮಾರ್ಥಿಕ ವಿದ್ಯೆಗಳೆರಡನ್ನು ಕೊಡಲಾಗುತ್ತಿತು. ಅವುಗಳಲ್ಲಿ ಸಂಸ್ಕೃತ ಆಯುರ್ವೆದ, ವೈಧಿಕ ಜ್ಯೋತಿಷ ವಿಧ್ಯೆಗಳನ್ನು ಕಲಿಸಿ ಸಮಾಜಕ್ಕೆ ಉಪಯೋಗ ಬಳುವ ವ್ಯಕ್ತಿಯನ್ನಾಗಿ ಸೇವಕರನ್ನಾಗಿ ತಯ್ಯಾರಿಸುತ್ತಿದ್ದರು. ವೀರಶೈವರಲ್ಲಿ ಸಂಸ್ಕೃತವನ್ನು ಇಲ್ಲಿಯವರೆಗೆ ಸಂರಕ್ಷಿಸಿಕೊಂಡು ಬಂದ ಕೀರ್ತಿ ಈ ಮಠಗಳಿಗೆ ಸಲ್ಲಬೇಕು. ಆಯುರ್ವೆದ ರಚನೆ ಪಂಚಾಂಗ, ನಿರ್ಮಾಣ ಮತ್ತು ಬಳಕೆಗಳನ್ನು ಪ್ರಚೂರಗೊಳಿಸಿ ಸಮಾಜಕ್ಕೆ ಎಲ್ಲಿಯಾ ಅಡೆ – ತಡೆಯಾಗದಂತೆ ಮಠಗಳು ಆಸರೆಯಾಗಿ ದಿಗ್ದರ್ಶಿಯಾಗಿ ಇಂದಿಗೂ ನಿಂತಿವೆ. ಮಠಗಳಿಂದ ನಡೆಯುವ ಇಂದಿನ ಶಿಕ್ಷಣ ಪ್ರಸಾರವಂತು ಕಣ್ಣು ಕುಕ್ಕಿಸುವಂಥದು''.[೬೩] ಮಠಗಳಿಂದ ಸಾರ್ವಜನಿಕರಿಗೆ ಶಿಕ್ಷಣ ಕಲಿಯಲು ಅನುಕೂಲಯಾಗಿತೆಂದು ತಿಳಿದು ಬರುತ್ತದೆ.

''ಓದಿಸುವ ಬೀದರಹಳ್ಳಿಯ ಮಠದಲ್ಲಿ ಕುಳಿತು ಮುಗಿಯ ಬರಹದ ಮಲ್ಲಪ್ಪ ದೇವರ ಹಸ್ತಾಂತರ''[೬೪] ಎಂದು ಮಠಗಳಲ್ಲಿನ ಹಸ್ತ ಪ್ರತಿಯಿಂದ ತಿಳಿದು ಬರುತ್ತದೆ. ''ಲಿಂಗಾಯತ ಮಠಗಳಲ್ಲಿ ವಾಸವಾಗಿದ್ದುಕೊಂಡು ಜನತೆ ಹಬ್ಬ ಹುಣ್ಣಿವೆ ಹಾಗೂ ಜನ್ಮ ಸಂಸ್ಕಾರಗಳು ನಡೆಯುವ ಕಾಲದಲ್ಲಿಯಾ ಆಕಾಶ ವಾಣಿಯವರು ತಮ್ಮದೈನಂದಿನ ಕಾರ್ಯಕ್ರಮದಲ್ಲಿಯ ವಚನಗಳನ್ನು ಸಂಗಿತಕ್ಕೆ ಅಳವಡಿಸಿಕೊಂಡು ಹಾಡುವುದರಿಂದ ಶರಣ ಸಾಹಿತ್ಯದಂತೆ ಲಿಂಗಾಯತರ ಒಟ್ಟು ಸಂಸ್ಕೃತಿಯ ಏನಿತೆಂದರೂ ಎಂಟುನೂರು ವರ್ಷಗಳ ಪರ್ಯಾಂತ ಜೀವಂತವಾಗಿ ಬೆಳೆಯುವುದಕ್ಕೆ ಸಾಧ್ಯವಾಗಿದೆ''[೬೫] ಪ್ರಾಚೀನ ಕಾಲದಲ್ಲಿ ವೀರಶೈವ ಮಠಗಳಲ್ಲಿ ಹೆಚ್ಚಾಗಿ ಓದಿಸುವ ಮಠಗಳೆಂದೇ ಪ್ರಖ್ಯಾತಿ ಪಡಿದಿದ್ದವು.

ಮಠಗಳ ಪ್ರಮುಖ ಪ್ರಕಾರಗಳಲ್ಲಿ ಒಂದಾದ ಓದಿಸುವ ಮಠಕ್ಕೆ ಹೆಚ್ಚಿನ ಪ್ರಾಶಸ್ಯ ಕೊಡಲಾಗಿತ್ತು. ಸಾಲಿ ಮಠಗಳಲ್ಲಿ ಕೈಗಾರಿಕಾ ಕೆಲಸಗಳು ಹೆಚ್ಚಾಗಿ ಆಸಕ್ತ ವಹಿಸುತ್ತಿದ್ದವು. ಆದರೆ ಈ ಮಠಗಳಲ್ಲಿ ಕೇವಲ ಅಧ್ಯಯನ ಅಧ್ಯಪನಗಳೇ ಕಲಿಸುತ್ತಿದ್ದರು. ಓದಿಸುವ ಮಠಗಳಲ್ಲಿ ಯಾವುದೇ ಕೈ ಕೆಲಸಗಳಿರಲಿಲ್ಲ ಓದು ಬರಹ

ಇಲ್ಲಿ ಕಲಿಸಲಾಗುತಿತ್ತು. ಸಾಲಿ ಮಠದಲ್ಲಿ ಅಧ್ಯಯನ ಮುಗಿಸಿದ ನಂತರ ಅನೇಕ ವಿಧ್ಯಾರ್ಥಿಗಳು ಈ ಮಠಗಳಲ್ಲಿ ಇತರ ವಿಷಯಗಳ ಜತೆಗೆ ಸಾಹಿತ್ಯಾಭ್ಯಾಸವನ್ನು ಮಾಡುತ್ತಿದ್ದರು. "ಕ್ರಿ. ಶ. ಹತ್ತೊಂಬತ್ತನೆಯ ಶತಮಾನದ ಕೊನೆಗೆ ಓದಿಸುವ ಮಠಗಳು ಸಂಸ್ಕೃತ ಪಾಠ ಶಾಲೆಗಳಾಗಿ ಪರಿವರ್ತವಾದುವು, ಓದಿಸಲು ಮಠಗಳನ್ನು ಈಗ ಉದಾಸಿ ಮಠಗಳೆಂದು ಕರೆಯಲಾಗುತ್ತದೆ. ಗ್ರಾಮಿಣ ಪ್ರದೇಶದಲ್ಲಿ ಅನೇಕ ಹಿರೇಮಠಗಳು ಓದಿಸುವ ಮಠಗಳಂತೆ ಕಾರ್ಯ ಮಾಡಿದವು ".[೬೬] ವೀರಶೈವ ಮಠಗಳಲ್ಲಿ ನೂರೊಂದು ಕಾಯಕಗಳು ಭೋದಿಸಲ್ಪಡುತ್ತಿದ್ದರೆಂದು ಸಂಪ್ರದಾಯವಿದೆ. ವ್ಯವಸಾಯಕ್ಕೆ ಸಂಬಂಧಿಸಿದಂತೆ ಹಲವಾರು ವೃತಿಗಳು ಶಿಕ್ಷಣವು ವೀರಶೈವ ಮಠಗಳಲ್ಲಿ ದೊರಕುತಿತ್ತು. ಕೃಷಿ ಜ್ಞಾನ ಪ್ರದಿಪೀಕೆ ಎಂಬ ತಾಳೆಗರಿಯ ಗ್ರಂಥವು ಈ ವಿಚಾರವನ್ನು ಸಮರ್ಥಿಸುತ್ತವೆ. ಸಾಲಿ ಮಠವು ಕರ್ನಾಟಕದ ವಿವಿಧ ಪ್ರವೇಶಗಳಲ್ಲಿ ವ್ಯಾಪಕವಾಗಿ ಹರಡಿಸಿದ್ದದ್ದು ತಿಳಿದು ಬರುತ್ತದೆ".[೬೭] ವೀರಶೈವ ಮಠಗಳು ಸಾರ್ವಜನಿಕವಾಗಿ ಶೈಕ್ಷಣಿಕವಾಗಿ ಶ್ರಮಿಸುತ್ತಿದದ್ದು, ಮಠಗಳಲ್ಲಿ ಜಾತಿ – ಮತ ಭೇದ – ಭಾವನೆಗಳಿಲ್ಲದೆ ಎಲ್ಲರಿಗೂ ಸಮಾನ ಅವಕಾಶ ಕಲ್ಪಿಸಿಕೊಡುತ್ತಿದ್ದರು.

ಆಧುನಿಕ ಕಾಲದಲ್ಲಿ ಮಠವೆಂದರೆ ಒಂದು ಧಾರ್ಮಿಕ ಸಂಸ್ಥೆಯಾಗಿತ್ತು. ಧಾರ್ಮಿಕ ಶಿಕ್ಷಣ ಚಟುವಟಿಕೆಗಳಿಗೆ ಮಾತ್ರ ಅದು ಸಿಮಿತವಾಗಿದೆ. ಆದರೆ ಮಧ್ಯ ಕಾಲದಲ್ಲಿ ಮಠದ ವ್ಯಾಪ್ತಿ ವಿಶಾಲವಾಗಿದೆ. ಯಾವುದಾದರೊಂದು ದೇವಾಲಯಕ್ಕೆ ಹೊಂದಿಕೊಂಡು ಧರ್ಮ ಸಂಸ್ಕೃತಿ ಹಾಗೂ ಶೈಕ್ಷಣಿಕ ಕೇದ್ರವಾಗಿತ್ತು. "ಮಠವೆಂದರೆ ಧಾರ್ಮಿಕ ಹಾಗೂ ಶೈಕ್ಷಣಿಕ ಸಂಸ್ಥೆ ಎಂಬುದು ಸಾಮಾನ್ಯವಾಗಿತ್ತು. ಕ್ರಿ. ಶ. ೬ನೇ ಶತಕದಿಂದಲೇ ಶಿಕ್ಷಣ ಕ್ಷೇತ್ರದಲ್ಲಿ ಕಾಣಿಸಿಕೊಂಡ ಮಠಗಳು ಕ್ರಿ. ಶ. ೧೦ ರಿಂದ ೧೨ ನೇ ಶತಕದ ಅವಧಿಯಲ್ಲಿ ಕಾಳಾ ಮುಖ ಶೈವ ಮತದ ಉಚ್ಛ್ರಾಯ ಕಾಲದಲ್ಲಿ ಹೆಚ್ಚಿನ ಮಹತ್ವ ಪಡೆದವು".[೬೮] ಹಾಗೆಯೇ ಹೈದ್ರಾಬಾದ ಕರ್ನಾಟಕ ವ್ಯಾಪ್ತಿಯಲ್ಲಿ ಬರುವ ವೀರಶೈವ ಮಠಗಳು ಸಹ ಶೈಕ್ಷಣಿಕ ಪ್ರಗತಿಯಲ್ಲಿ ಹಿಂದೆ ಬಿದ್ದಿಲ್ಲ. ಮಠಗಳ ಕೊಡುಗೆ ಅಪಾರವಾಗಿದೆ.ಅವಿಸ್ಮರಣಿಯವಾಗಿದೆ. ಅದರೆ ಇತ್ತೀಚಿನ ಮಠಾಧಿಪತಿಗಳು ಶೈಕ್ಷಣಿಕ ಸೇವೆಯ ಜತೆಗೆ ಹಣ ಸಂಪಾದನೆ ಮಾಡಲು ತೊಡಗಿರುವುದು ಗೋಚರಿಸುತ್ತದೆ.

ಪ್ರಾಚೀನ ಕಾಲದಲ್ಲಿ ಸಾಲಿ ಮಠಗಳು ಓದಿಸುವ ಮಠಗಳು, ಹಾಗೂ ವಿರಕ್ತ ಮಠಗಳೆಂಬ ಮೂರು ಪ್ರಕಾರದ ವೀರಶೈವ ಮಠಗಳು ಆಸಕ್ತಿ ವಹಿಸಿ ಶಿಕ್ಷಣ ಪ್ರಸಾರ ಮಾಡಿದ್ದವು. ಈ ಮಠಗಳು ಮೂಲ ಉದ್ದೇಶ . ಶಾಲೆಯನ್ನು ತೆರೆದು ಶಿಕ್ಷಣ ಕೊಡಿಸುವದಾಗಿತು. "ಆ ಕಾಲದಲ್ಲಿ ಮಠಗಳೇ ಶಾಲೆಗಳಾಗಿದ್ದವು.

ಅಥವಾ ಶಾಲೆಗಳೆಲ್ಲ ಮಠದೊಳಗೆ ನಡೆಯುತ್ತಿದ್ದವು. ಇಂದಿಗೂ ಎಷ್ಟೋ ಮಠಗಳಿಗೆ ಸಾಲಿ ಮಠ, ಓದಿಸುವ ಮಠ ವೆಂದು ಹೆಸರಿಸಿರುವುದು ಗಮನಾರ್ಹ- ಡೆಪ್ಯೂಟಿ ಚನ್ನಬಸಪ್ಪನವರ ಪ್ರಾಥಮಿಕ ವಿಧ್ಯಾಭ್ಯಾಸವು ಧಾರವಾಡದ ಸಾಲಿಮಠ ಶಿವರುದ್ರಪ್ಪಯ್ಯನವರ ಹತ್ತಿರ ಅಯಿತ್ತೆಂದು ನೆನಪಿಸಿಕೊಳ್ಳಬಹುದು''.[೬] ಅಂದು ಮಠಗಳು ನಿಸ್ವಾರ್ಥತೆಯಿಂದ ಸೇವೆಯನ್ನು ಸಲ್ಲಿಸುತ್ತಿದ್ದವು. ಮಠಗಳ ಕಾಯಕವೇ ಶಿಕ್ಷಣ ಕೊಡಿಸುವದಾಗಿತ್ತು.

೩.೧. ಭಾಲ್ಕಿ

ಹೈದ್ರಾಬಾದ – ಕರ್ನಾಟಕ ಪ್ರದೇಶವು ನಿಜಾಮರ ಕಾಲದಲ್ಲಿ ಕೇವಲ ಉರ್ದು ಮತ್ತು ಆಂಗ್ಲ ಭಾಷೆಗಳಿಗೆ ಮನ್ನಣೆ ಇತ್ತು. ಅನ್ಯಭಾಷೆಗಳ ಶಿಕ್ಷಣಕ್ಕೆ ಅವಕಾಶ ಇದ್ದಿರಲಿಲ್ಲ. ಈ ಭಾಗದಲ್ಲಿ ಕನ್ನಡ ಬೇಕು. ಜನರಿಗೆ ಕನ್ನಡ ಭಾಷೆ ಕಲಿಸುವುದು ಅವಶ್ಯಕವಾಗಿದೆ ಎಂದು ದಿಟ್ಟ ಹೆಜ್ಜೆ ಇಟ್ಟ ಪ್ರಪ್ರಥಮ ಮಠವೆಂದರೆ ಭಾಲ್ಕಿ ಹಿರೇಮಠ. ಶಿವಯೋಗ ಮಂದಿರದ ಶಿಶುವಾದ ಶತಾಮಷಿ ಲಿಂಗೈಕ್ಯ ಶ್ರೀ ಮ. ಘ. ಚ. ಡಾ. ಚನ್ನಬಸವ ಪಟ್ಟದ್ದೇವರು ಕನ್ನಡ ಭಾಷೆಯ ಮೇಲೆ ಅಭಿಮಾನ ವುಳ್ಳವರಾಗಿದ್ದರು. ಆದ್ದರಿಂದ ಶ್ರೀಗಳು ಧೈರ್ಯದಿಂದ ''ಕೊಣೆಯ ಹೊರಗಡೆ ಉರ್ದು ಪಾಠ ಶಾಲೆ''ಯೆಂದು ಬೋರ್ಡು ಹಾಕಿ, ಒಳಗಡೆ ಕನ್ನಡ ಅಕ್ಷರ ಓದು ಬರಹ ಕಲಿಸುತ್ತಿದ್ದರು. ಇಂತಹ ಸಂದರ್ಭದಲ್ಲಿ ಅನೇಕ ಕಷ್ಟ ನಷ್ಟಗಳು ಬಂದೊದಗಿದವು. ಆದರೂ ಶ್ರೀಗಳು ಬಿಡಲಿಲ್ಲ, ಎದೆಯೊಡ್ಡಿ ಮುಂದೆ ನಡೆದರು, ಇಂತಹ ಗಂಭಿರ ಪರಿಸ್ಥಿತಿಯಲ್ಲಿ ಎದೆಮೆಟ್ಟಿ ಸಿಡಿದೆದ್ದು ನಿಂತು ಕನ್ನಡ ಕಲಿಸಿದರಿಂದ ಇಂದು ಬೀದರ ಜಿಲ್ಲೆಯಲ್ಲಲದೆ ಕರ್ನಾಟಕ ರಾಜ್ಯದಲ್ಲಿ ಕನ್ನಡದ ಬಾವುಟ ಹಾರುತ್ತಿದೆ.

ಬೀದರ ಜಿಲ್ಲೆಯಲ್ಲಿ ಪ್ರಥಮವಾಗಿ ೧೯೧೯ – ೨೦ ರಲ್ಲಿ ಉದಗೀರ ಶರಣಪ್ಪಾ ಅಪ್ಪ ಮಾಕಾನವರು ಕನ್ನಡದ ಶಿಕ್ಷಣದ ಬೀಜವನ್ನು ಬಿತ್ತಿದರು. ೧೯೨೮ ರಲ್ಲಿ ಗುರುಮಠಕಲ ಹಿರೇಮಠದ ಶಾಂತವೀರ ಮಹಾಸ್ವಾಮಿಗಳು ಬೀದರ ತಾಲೂಕಿನ ರಂಜೇರಿ ಗ್ರಾಮದಲೊಂದು ಕನ್ನಡ ಶಾಲೆಯೊಂದನ್ನು ಆರಂಭಿಸಿದರು. ಈ ಶಾಲೆಯ ನಾಲ್ಕೈದು ವರ್ಷಗಳ ಕಾಲ ನಡೆದು, ನಂತರ ಅನಿವಾರ್ಯ ಕಾರಣದಿಂದ ಈ ಶಾಲೆಯನ್ನು ಸ್ಥಗಿತಗೊಳಿಸಲಾಯಿತ್ತು. ನಂತರ ೧೯೩೮ ರಲ್ಲಿ ನಾರಾಯಣಖೇಡ ತಾಲೂಕಿನ ಮೋರ್ಗಿ ಗ್ರಾಮದಲ್ಲಿ ಭಾಲ್ಕಿ ಶ್ರೀಗಳು ಕನ್ನಡ ಶಾಲೆಯನ್ನು ಪ್ರಾರಂಭಿಸಿದರು. ಅಲ್ಲಿಯ ಜನರ ಮನೆಯ – ಬಾಗಿಲಿಗೆ

ಹೋಗಿ ತಮ್ಮ ಮಕ್ಕಳನ್ನು ಕನ್ನಡ ಶಿಕ್ಷಣ ಕಲಿಸಿರಿ ಎಂದು ಕೈ ಮುಗಿದು ಕೇಳಿಕೊಂಡರು. ಉಚಿತ ಪ್ರಸಾದ ಹಾಗೂ ವಸತಿ ಸೌಕರ್ಯಗಳನ್ನು ಮಾಡಿಕೊಟ್ಟರು. ವಿದ್ಯಾರ್ಥಿಗಳು ಕನ್ನಡಕ್ಕೆ ಪ್ರವೇಶ ತೆಗೆದುಕೊಂಡರು, ಶ್ರೀಗಳು ಪಣ ತೊಟ್ಟು ಕನ್ನಡ ಶಾಲೆಯನ್ನು ನಡೆಸಿದರು.

ಶ್ರೀಗಳು ೧೯೪೦ ರಲ್ಲಿ ದೇವಣಿ ಮತ್ತು ಮಾಂಜ್ರಾ ನದಿಗಳ ಸಂಗಮವಾದ ಕೂಡಲಸಂಗಮದಲ್ಲಿ ಮತ್ತೊಂದು ಕನ್ನಡ ಪಾಠ ಶಾಲೆಯನ್ನು ತೆರೆಯಲು ನಿರ್ಧರಿಸಿದರು. ಆ ನಿಟ್ಟಿನಲ್ಲಿ ''ಶಾಂತಿ ವರ್ಧಕ ಶಿಕ್ಷಣ ಸಂಸ್ಥೆ'' ಎಂಬ ಒಂದು ಸಂಸ್ಥೆಯ ಮುಖಾಂತರ ಶಾಲೆಯನ್ನು ಪ್ರಾರಂಭಿಸಿದರು. ಈ ಸಂಸ್ಥೆಯ ಮುಖಾಂತರ ಮುಷ್ಠಿ ಫಂಡ ಸಂಗ್ರಹಿಸಲು ಮುಂದಾದರು. ಮೋರಗಿ ಗ್ರಾಮದ ಸುತ್ತ ಮುತ್ತಲಿನ ಗ್ರಾಮಗಳಲ್ಲಿಯೂ ಪ್ರತಿಯೊಬ್ಬರ ಮನೆಯಲ್ಲಿ ಒಂದೊಂದು ಚೀಲ ಇಡಲಾಗಿತ್ತು. ಆ ಚೀಲದ ಮೇಲೆ ''ಶಾಂತಿ ವರ್ಧಕ ಶಿಕ್ಷಣ ಸಂಸ್ಥೆ'' ಎಂಬ ಹೆಸರು ಬರೆಯಲಾಗಿತ್ತು. ಈ ಮುಷ್ಠಿ ಫಂಡ ಆಧಾರದ ಸ್ಥಂಬಗಳೆಂದರೆ ಕೆಳಗೆ ಕಾಣಿಸಿದ ಮಹನೀಯರಾದ ನಾರಾಯಣಖೇಡ ಗ್ರಾಮದ ಶ್ರೀ ನಾಗಶೆಟ್ಟಿ ಶಟಕಾರ, ಶ್ರೀ ಸಂಗಶೆಟ್ಟಿ ಶಟಕಾರ, ಹೋಕರಾಣಿ ಗ್ರಾಮದ ಶ್ರೀ ಸಂಗಶೆಟ್ಟಿ ಗೌಡರು, ಮೊರಗಿ ಗ್ರಾಮದ ಶ್ರೀ ಸಿದ್ದಪ್ಪಾ ಚಪಟೆ ಈ ಮಹನೀಯರುಗಳಲ್ಲದೆ ಸುತ್ತಲಿನ ಏಳೆಂಟು ಹಳ್ಳಿಯವರು ಮುಷ್ಠಿ ಫಂಡ ಯೋಜನೆಯಲ್ಲಿ ಸಕ್ರೀಯವಾಗಿ, ಧಾರಳವಾಗಿ ಸಹಕಾರ ಸಲ್ಲಿಸುತ್ತಿದ್ದರು. ''ಮುಷ್ಠಿ ಫಂಡಿನ ಜೊತೆಗೆ ವರ್ಷಕ್ಕೆ ರೂ. ೧೦೧ ರಂತೆ ಹತ್ತು ವರ್ಷದ ಚಂದಾ ಹಣವನ್ನು (ದಶಚಂದ) ಒಮ್ಮೆಲೆ ಕೊಟ್ಟು ಗುರುಕುಲ ಮಾದರಿಯ ಮೋರಗಿ ಗ್ರಾಮದ ಪಾಠ ಶಾಲೆಗೆ ತುಂಬ ನೇರವಾದವು''.[20] ಕನ್ನಡ ಬೆಳವಣಿಗೆಗಾಗಿ ಸತತ ಶ್ರಮಿಸುತ್ತಿರುವ ಭಾಲ್ಕಿ ಹಿರೇಮಠದ ಕೀರ್ತಿ ಬಾನೆತ್ತರಕ್ಕೆ ಬೆಳೆಯತೊಡಗಿದೆ.

ನೂರಾರು ಭಕ್ತರು ಕನ್ನಡದ ಅಭಿಮಾನ ಉಳ್ಳವರು ಶ್ರೀಗಳಿಗೆ ಸಹಾಯ ಸಹಕಾರವನ್ನು ನೀಡಿದರು. ಉದಗೀರ ಸಂಗ್ರಾಮಪ್ಪ ವಕೀಲರ ಸಲಹೆ ಮೇರೆಗೆ ಕೆಲಕಾಲ ಬೀದರ ನಗರದಲ್ಲಿ ಕನ್ನಡ ಶಾಲೆಯನ್ನು ನಡೆಸಿದರು. ಹೈದ್ರಾಬಾದ –ಕರ್ನಾಟಕ ವ್ಯಾಪ್ತಿಯ ಮೇಲೆ ಪೋಲಿಸ ಕಾರ್ಯಚರಣೆಗೆ ನಡೆಯಿತು. ಆಗ ಶ್ರೀಗಳು ಮಹಾರಾಷ್ಟ್ರದ ಸೋಲಾಪೂರದ ಗುಂಡೊಜಿ ಮಠದಲ್ಲಿ ಎಂಟು ತಿಂಗಳುಗಳ ಕಾಲ ಕನ್ನಡ ಪಾಠ ಶಾಲೆಯನ್ನು ನಡೆಸಿದರು. ಕ್ರಿ. ಶ. ೧೯೪೮ ರಲ್ಲಿ ಅಂದರೆ ಹೈದ್ರಾಬಾದ ರಾಜ್ಯವು ಪೋಲಿಸ ಕಾರ್ಯಚರಣೆಯಾಗಿ ಭಾರತ ಒಕ್ಕೂಟದಲ್ಲಿ ವಿಲೀನಗೊಂಡ ನಂತರ ಶ್ರೀಗಳು ೧೯೪೯ ರಲ್ಲಿ

ಬೀದರನಲ್ಲಿ ಕನ್ನಡ ಮಕ್ಕಳಿಗಾಗಿ ಒಂದು ಉಚಿತ ಪ್ರಸಾದ ನಿಲಯವನ್ನು ಪ್ರಾರಂಭಿಸಿದರು. ಇದರ ಮುಖಾಂತರ ಹಲವಾರು ವಿದ್ಯಾರ್ಥಿಗಳು ಕನ್ನಡ ಶಿಕ್ಷಣ ಕಲಿಯತೊಡಗಿದರು.

ಕೂಡಲ ಸಂಗಮ ಗ್ರಾಮದಲ್ಲಿ ನಡೆಯುತ್ತಿರುವ ಕನ್ನಡ ಪಾಠ ಶಾಲೆಯನ್ನು ವಿಧಿಯ ಕಾರಣದಿಂದ ಕಮಲನಗರಕ್ಕೆ ವರ್ಗಾವಣೆ ಮಾಡಿದರು. ಕ್ರಿ. ಶ. ೧೯೫೬ ರಲ್ಲಿ ವರ್ಗಾಯಿಸಿದಾಗ ಬೀದರ ಜಿಲ್ಲೆಯ ಸ್ವತಂತ್ರವಾಗಿ ಬಾಳತೊಡಗಿತ್ತು. ಎಲ್ಲರಿಗೂ ಆತ್ಮ ಧೈರ್ಯ ಒದಗಿತ್ತು. ಆಗಿನ ಶಾಂತಿ ವರ್ಧಕ ಸಂಸ್ಥೆಯ ಅಧ್ಯಕ್ಷರಾಗಿ ಶ್ರೀ ಆರ್. ಬಿ. ಬಿಡಪ್ಪನವರು ನಿಸ್ವಾರ್ಥತೆಯಿಂದ ಸೇವೆ ಸಲ್ಲಿಸಿದರು. ನಂತರ ಶ್ರೀ ಭೀಮಣ್ಣಾ ಖಂಡ್ರೆಯವರ ಅಧ್ಯಕ್ಷತೆಯಲ್ಲಿ ಕೆಲ ಕಾಲಗಳ ಸುವ್ಯವಸ್ಥಿತವಾಗಿ ನಡೆಸಿಕೊಂಡು ಬಂದರು. ''ಹಿಂದಿನ ಆ ಕಡು ಕಷ್ಟದ ದಿನಗಳಲ್ಲಿ ಎದೆಗೆಡದೆ ಎಡರು ತೊಡರುಗಳನ್ನೆಲ್ಲ ಧೈರ್ಯವಾಗಿ ಎದುರಿಸಿ, ಕನ್ನಡಕ್ಕೆ ಜೀವ ತುಂಬುತ್ತ ಆ ಭಾಗದ ಸಾಮಾಜಿಕ ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಏಳಿಗೆಗಾಗಿ ತಮ್ಮ ಜೀವನವನ್ನೇ ಮುಡುಪಿಟ್ಟು ಎತ್ತರದ ವ್ಯಕ್ತಿಯೊಬ್ಬರು ಜನ ಹತ್ತಿರದಲ್ಲಿಯೇ ಕಾಣಸಿಕೊಂಡದು ಕಲ್ಯಾಣ ನಾಡಿನ ಭಾಗ್ಯವೆಂದೆ ಹೇಳಬೇಕು. ಅವರೆ ಸರಳತೆಯ ಸಾಕಾರ ಮುರ್ತಿಯೆಸಿದ ಕಾಯಕ ಪರಿಣಾಮಿ ಭಾಲ್ಕಿ ಚನ್ನಬಸವ ಪಟ್ಟದ್ದೇವರು''[೭೧] ಶೈಕ್ಷಣಿಕ ಸೇವೆಯನ್ನು ಅನೇಕ ಅನುಭವಗಳನ್ನು ಕಂಡುಕೊಂಡ ಶ್ರೀಗಳಿಗೆ ಮುಂದೆ ಕನ್ನಡ ಪಾಠ ಶಾಲೆಯನ್ನು ತೆರೆಯಲು ಯಾವುದೇ ತೊಂದರೆಗಳಾಗಲಿಲ್ಲ.

ಶಾಂತಿ ವರ್ಧಕ ಶಿಕ್ಷಣ ಸಂಸ್ಥೆಯು ಪ್ರತಿ ವರ್ಷ ಪ್ರಗತಿಯನ್ನು ಸಾಧಿಸುತ್ತ ಹಲವಾರು ಶಾಲಾ – ಕಾಲೇಜುಗಳನ್ನು ಸ್ಥಾಪಿಸಿ ಹೆಮ್ಮರವಾಗಿ ಬೆಳೆದು ಪ್ರಜ್ವಲಿಸುತ್ತಿದೆ.

೧) ಅಕ್ಕ ಮಹಾದೇವಿ ಕನ್ಯ ಪ್ರೌಢ ಶಾಲೆ, ಬೀದರ.

೨) ಅಕ್ಕ ಮಹಾದೇವಿ ಮಹಿಳಾ ಪದವಿ ಮಹಾವಿದ್ಯಾಲಯ, ಬೀದರ.

೩.) ಚನ್ನಬಸವೇಶ್ವರ ಕಲಾ, ವಾಣಿಜ್ಯ ಮತ್ತು ವಿಜ್ಞಾನ ಪದವಿ ಮಹಾವಿದ್ಯಾಲಯ, ಭಾಲ್ಕಿ.

೪) ಅಕ್ಕ ಮಹಾದೇವಿ ಕಿರಿಯ ಮಹಾವಿದ್ಯಾಲಯ, ಭಾಲ್ಕಿ.

೫) ಅಕ್ಕ ಮಹಾದೇವಿ ಕನ್ಯಾ ಪ್ರೌಢ ಶಾಲೆ, ಭಾಲ್ಕಿ.

೬) ಹರಳಯ್ಯಾ ಪಾಲಿಟೇಕ್ನಿಕ ವಿದ್ಯಾಲಯ, ಭಾಲ್ಕಿ.

೭) ಶಾಂತಿ ವರ್ಧಕ ಐ. ಟಿ. ಐ. ವಿದ್ಯಾಲಯ, ಭಾಲ್ಕಿ.

೮) ಗ್ರಾಮೀಣ ಇಂಜನೀಯರಿಂಗ ಮಹಾವಿದ್ಯಾಲಯ, ಭಾಲ್ಕಿ.

೯) ಬಾಲಕರ ಅನಾಥಾಶ್ರಮ, ಭಾಲ್ಕಿ.

೧೦) ಸಿದ್ಧಾರಾಮೇಶ್ವರ ಸಂಯುಕ್ತ ಪದವಿ ಮಹಾವಿದ್ಯಾಲಯ, ಕಮಲನಗರ.

೧೧) ಶಾಂತಿ ವರ್ಧಕ ಪ್ರೌಢ ಶಾಲೆ, ಕಮಲನಗರ.

೧೨) ಶಾಂತಿ ವರ್ಧಕ ಶಿಕ್ಷಣ ಸಂಸ್ಥೆ, ಹಣೆಗಾಂವ

ಹೀಗೆ ಭಾಲ್ಕಿ ಹಿರೇಮಠದ ಸಂಸ್ಥೆ ಶೈಕ್ಷಣಿಕ ಸೇವೆ ಅಂದು ಕರ್ನಾಟಕದೇಲ್ಲದೇ ಮಹಾರಾಷ್ಟ್ರಗಳಲ್ಲಿಯೂ ಹರಡಿತ್ತು. ನಾಡಿನಾದ್ಯಾಂತರ ಇದರ ಪ್ರಗತಿಯನ್ನು ಸಾಧಿಸಿದೆ. ಪೂಜ್ಯರ ಶೈಕ್ಷಣಿಕ ಸೇವೆಯನ್ನು ಅರಿತು ಅಲ್ಲಿನ ಜನ ಪದ ಕವಿ ಹಾಡಿ ಹೊಗಳಿರುವುದು ಕೆಳಗಿನಂತಿದೆ.

"ಬಾಲಕಿ ಶಿವಯೋಗಿ ಎಲ್ಲೆಲ್ಲಿ ತಿರುಗ್ಯಾರ
ಶಿಕ್ಷಣದ ಅನ್ನ ಉಣಸ್ಯಾರ ಗಡಿನಾಡೋಳು
ಕನ್ನಡದ ಬಾವುಟ ಮೆರುಸ್ಯಾರ "[೨]

ಜಾನಪದ ಕವನಗಳಲ್ಲಿ ಒಂದಾದ ಕವನ ಶ್ರೀಗಳಿಗೆ ತುಂಬಾ ಹೋಲುತ್ತದೆ. "ಮಹಾರಾಷ್ಟ್ರದ ಲಾತೂರಿನಲ್ಲಿರುವ "ಶಾಂತಿ ವರ್ಧಕ ಬೋರ್ಡಿಂಗ್" ಸಲುವಾಗಿ ಧಾನ ಕೊಡಲಾಗಿದ್ದ ನಿವೇಶನಗಳ ಬೆಲೆ ಇದ್ದಕಿದ್ದಂತೆ ಹತ್ತು ಪಟ್ಟಾಗಿ ಅವುಗಳ ಒಂದು ಲಕ್ಷ ಬೆಲೆ ಬಾಳುವ ಆಸ್ತಿಯಾಯಿತ್ತು, ಇಂಥಹ ಅಮೂಲ್ಯ ಆಸ್ತಿಯನ್ನು ಶ್ರೀಗಳು ತಮ್ಮ ಜನರೊಡನೆ ಸಮಲೋಚಿಸಿ ಲಾತೂರಿನಲ್ಲಿಯೂ ಶ್ರೀ ಬಸವೇಶ್ವರ ಶಿಕ್ಷಣ ಸಂಸ್ಥೆಗೆ ಅಲ್ಲಿಯ ಮಕ್ಕಳ ಕಲ್ಯಾಣರ್ಥವಾಗಿ ಅಲ್ಲಿಯೇ ತಮ್ಮ ಸೇವೆ ಸಲ್ಲಿಸುತ್ತಿದ್ದ "ಶಾತಿ ವರ್ಧಕ ಬೋರ್ಡಿಂಗ ಧಾನವಾಗಿ ಕೊಟ್ಟರು".[೨೩] ಹೀಗೆ ಶ್ರೀಗಳು ಹತ್ತು ಹಲವಾರು ಕಡೆ ಶೈಕ್ಷಣಿಕ ಕ್ಷೇತ್ರದಲ್ಲಿ ಪ್ರಗತಿಯನ್ನು ಸಾಧಿಸಿದ್ದು ಮನಗಾಣಬೇಕಾಗಿದೆ.

ಕಲ್ಯಾಣ ನಾಡಿನಲ್ಲಿಯೇ ಅಲ್ಲದೆ ನೆರೆ ರಾಜ್ಯಗಳಲ್ಲಿ ಕನ್ನಡ ಪಟ್ಟದ್ದೇವರೆಂದು ಪ್ರಖ್ಯಾತಿ ಪಡೆದ ಭಾಲ್ಕಿ ಶ್ರೀಗಳನ್ನು ಕಂಡು ಒರ್ವ ಕವಿ "ಬೀದರ ನಾಡಿನಲ್ಲಿ ಕನ್ನಡ ಉಳಿಸಿದ ರನ್ನ ಕನ್ನಡಿ ಇವರು, ಸತ್ತವರನ್ನೆಚ್ಚರಿಸಿ ಉಚಿತಾಹಾರವ ಕೊಟ್ಟು ಹರಸಿದರಿವರು".[೨೪] ಎಂದು ಕವಿ ಹಾಡಿ ಹೊಗಳಿರುವುದು ಶ್ರೀಗಳ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ. ಶ್ರೀ ಮ. ಘ. ಚ. ಚನ್ನಬಸವ ಪಟ್ಟದ್ದೇವರು ಶಾಂತಿ ವರ್ಧಕ ಶಿಕ್ಷಣ ಸಂಸ್ಥೆಯ ಹೆಸರಿನ ಮೇಲೆ ಅನೇಕ ಶಾಲಾ ಕಾಲೇಜುಗಳನ್ನು ಸ್ಥಾಪಿಸಿ ಹೆಸರು ಮಾಡಿದ್ದಾರೆ. ಸಾರ್ವಜನಿಕರಿಂದ ಯಾವುದೇ ರೀತಿಯ (ಚಂದ) ಹಣವಸುಲಿಗೆ (ಹಣಕ್ಕಾಗಿ) ಹಾತೊರೆದಿಲ್ಲ. ಕೈ ಚಾಚಿ ಬೇಡಿದವರಿಲ್ಲ,

ಅವರ ವ್ಯಕ್ತಿತ್ವಕ್ಕೆ ಜನರು ಮಾರುಹೋಗಿ ತಾನೆ ತಾನಾಗಿ ಧನಸಹಾಯವನ್ನು ಶೈಕ್ಷಣಿಕ ಪ್ರಗತಿಗೆ ಸಲ್ಲಿಸುತ್ತಿದ್ದರು.

ವಿದ್ಯಾದಾನ ಅನ್ನದಾನದಿಂದ ಪ್ರಖ್ಯಾತಿ ಪಡೆದುಕೊಂಡ . ಭಾಲ್ಕಿಯ ಹಿರೇಮಠದ ಪೂಜ್ಯ ಶ್ರೀ ಮ.ಘ.ಚ. ಚನ್ನಬಸವ ಪಟ್ಟದ್ದೇವರು, ನೂತನವಾಗಿ ಶ್ರೀ ಮ.ಘ.ಚ. ಬಸವಲಿಂಗ ಪಟ್ಟದ್ದೇವರಿಗೆ ಅಧಿಕಾರವನ್ನು ವಹಿಸಿಕೊಟ್ಟರು. ಗುರುಗಳ ಹೆಜ್ಜೆಯ ಮೇಲೆ ಹೆಜ್ಜೆಯನ್ನಿಟ್ಟು ನೂತನ ಶ್ರೀಗಳು ಶೈಕ್ಷಣಿಕ ಸೇವೆ ಮುಂದೆ ನಡೆಸುತ್ತಿದ್ದರು. ಆದರೆ ಕಾರಣಾಂತರಗಳಿಂದ ''ಶಾಂತಿ ವರ್ಧಕ ಶಿಕ್ಷಣ ಸಂಸ್ಥೆ'' ಯನ್ನು ಮುಂದುವರೆಸಿಕೊಂಡು ಬರಲಿಲ್ಲ. ಈ ಸಂಸ್ಥೆಯಲ್ಲಿ ಶ್ರೀ ಯುವ ನಾಯಕರಾದ ರಾಜಕೀಯ ಮುಖಂಡರಾದ ಶ್ರೀ ಈಶ್ವರ ಖಂಡ್ರೆಯವರ ನೇತೃತ್ವದಲ್ಲಿ ಮಂದುವರೆಯುತ್ತಿದೆ. ನಂತರ ಶ್ರೀ ಮ.ಘ.ಚ. ಬಸವಲಿಂಗ ಪಟ್ಟದ್ದೇವರಿಗೆ ಹಾಗೂ ಶಾಂತಿ ವರ್ಧಕ ಶಿಕ್ಷಣ ಸಂಸ್ಥೆಯ ಸಂಬಂಧ ಕೊನೆಕೊಂಡಾಗ ಶ್ರೀಗಳು ಶೈಕ್ಷಣಿಕ ಪ್ರಗತಿಯಲ್ಲಿ ತನ್ನದೆಯಾದ ಒಂದು ಸೇವೆ ಸಲ್ಲಿಸಬೇಕೆಂದು ''ಹಿರೇಮಠ ಸಂಸ್ಥಾನ ವಿದ್ಯಾಪೀಠ ಭಾಲ್ಕಿ'' ಎಂಬ ಹೆಸರಿನ ಮೇಲೆ ಶೈಕ್ಷಣಿಕ ಸಂಸ್ಥೆಯನ್ನು ತೆರೆದರು. ಈ ಸಂಸ್ಥೆಯಲ್ಲಿ ಈ ಕೆಳಕಂಡ ಶೈಕ್ಷಣಿಕ ಸೇವೆಯಲ್ಲಿ ತೊಡಗಿದ್ದಾರೆ.

೧) ಸಂಗಮೇಶ್ವರ ಪೂರ್ವ ಪ್ರಾಥಮಿಕ ಹಾಗೂ ಪ್ರಾಥಮಿಕ ಶಾಲೆ, ಭಾಲ್ಕಿ.

೨) ಸಂಗಮೇಶ್ವರ ಪ್ರೌಢ ಶಾಲೆ. ಭಾಲ್ಕಿ.

೩) ಶ್ರೀಮತಿ ಸಂಗಮ್ಮ ಸಂಗ್ರಾಮ ಬಿರಾದರ ಪ್ರೌಢ ಶಾಲೆ, ಕಾಸರತುಗಾಂವ.

೪) ಶ್ರೀ ಚನ್ನಬಸವೇಶ್ವರ ಗುರುಕುಲ, ಭಾಲ್ಕಿ.

೫) ಶ್ರೀ ಗುರಮ್ಮಾ ಡೊಣ್ಣೆ ಪ್ರಾಥಮಿಕ ಶಾಲೆ, ಕಮಲನಗರ.

೬) ನೀಲಾಂಬಿಕ ಸಂಗೀತ ವಿದ್ಯಾಲಯ, ಭಾಲ್ಕಿ.

ಹೀಗೆ ನೂತನ ಶ್ರೀಗಳು ತಮ್ಮದೆ ಆದ ಶೈಕ್ಷಣಿಕ ಕ್ಷೇತ್ರದಲ್ಲಿ ತೊಡಗಿದ್ದಾರೆ. ''ಚನ್ನಬಸವಾಶ್ರಮದಲ್ಲಿ ಡಾ: ಚನ್ನಬಸವ ದೈವಿ ಕ್ಷೇತ್ರದ ಪ್ರಗತಿಗಾಗಿ ಈ ಕೆಳಕಂಡ ಯೋಜನೆಗಳು ಹಮ್ಮಿಕೊಳ್ಳಲಾಗಿದೆ. ಇದಕ್ಕೆ ಭಕ್ತರ ಸಹಕಾರದಿಂದ ಮಾಡಬೇಕಾಗುತ್ತದೆ, ಸಹಕರಿಸಬೇಕೆಂದು ಪೂಜ್ಯ ಬಸವಲಿಂಗ ಪಟ್ಟದ್ದೇವರು ದಿನಾಂಕ: ೯.೭.೯೮ ರಂದು ಜನದನಿ ಕನ್ನಡ ದಿನಪತ್ರಿಕೆ ಬೀದರ ಪ್ರಕಟಣೆಯ ಮೂಲಕ ಕೋರಿದ್ದಾರೆ. ಡಾ: ಚನ್ನ ಬಸವ ಪಟ್ಟದ್ದೇವರ ಗದ್ದುಗೆ ನಿರ್ಮಾಣ ಮಾಡುವರು ಇದಕ್ಕೆ ಅಂದಾಜು ವೆಚ್ಚ ೨೫ ಲಕ್ಷ ತೆರಲಾಗುವುದು. ಅವರ ಜೀವನ ದರ್ಶನ ಇದಕ್ಕೆ ಅಂದಾಜು ವೆಚ್ಚ ೫ ಲಕ್ಷ, ೧೫ ಲಕ್ಷ

ವೆಚ್ಚದಲ್ಲಿ ಪಟ್ಟದ್ದೇವರ ಶಿವಾನುಭವ ಮಂಟಪದ ನಿರ್ಮಾಣ ಮಂಟಪದ ನಿರ್ಮಾಣ ೧೦ ಲಕ್ಷ ವೆಚ್ಚದಲ್ಲಿ ದಾಸೋಹ ಮನೆ ನಿರ್ಮಾಣ ೫೦ ಲಕ್ಷ ರೂ. ವೆಚ್ಚದಲ್ಲಿ ಕಲ್ಯಾಣ ಮಂಟಪದ ನಿರ್ಮಾಣ, ೨೦ ಲಕ್ಷ ರೂ. ವೆಚ್ಚದಲ್ಲಿ ಸಂಶೋಧನ ಗ್ರಂಥಾಲಯದ ನಿರ್ಮಾಣ ೫ ಲಕ್ಷ ವೆಚ್ಚದಲ್ಲಿ ಪಟ್ಟದ್ದೇವರ ಕುಟಿರದ ನಿರ್ಮಾಣ ೫ ಲಕ್ಷ ರೂ. ವೆಚ್ಚದಲ್ಲಿ ಪಟ್ಟದ್ದೇವರ ಅತಿಥಿ ಗ್ರಹ ೫ ಲಕ್ಷ ರೂ. ವೆಚ್ಚದಲ್ಲಿ ಶುದ್ಧವಾದ ವಿಭೂತಿ ಹಾಗೂ ಕಾಂತಿ ಲಿಂಗಳ ನಿರ್ಮಾಣ ೨ ಲಕ್ಷ ರೂ. ವೆಚ್ಚದಲ್ಲಿ ಪಟ್ಟದ್ದೇವರ ಉದ್ಯಾನವನ ನಿರ್ಮಾಣ ೫ ಲಕ್ಷ ರೂ. ವೆಚ್ಚದಲ್ಲಿ ಪಟ್ಟದ್ದೇವರ ಮಹಾದ್ವಾರ ನಿರ್ಮಾಣ ಮಾಡುವ ಯೋಜನೆ ಹಮ್ಮಿಕೊಳ್ಳಲಾಗಿದೆ''. ಇದಕ್ಕೆ ಸಹಕಾರ ಬೇಕಾಗುತ್ತದೆ. ಭಕ್ತರು ಒಂದೊಂದು ಪೂರ್ತಿ ಕಟ್ಟಡ ಮಾಡಬೇಕು ಎನ್ನುವವರು ಅವರ ಹೆಸರಿನಿಂದ ಮಾಡಲಾಗುತ್ತದೆ. ಒಂದು ಲಕ್ಷ ರೂ. ೫೦ ಸಾವಿರ ಇಪ್ಪತ್ತೈದು ಸಾವಿರ, ಹತ್ತು ಸಾವಿರ, ಹಾಗೂ ೫ ಸಾವಿರ ಕೊಟ್ಟವರ ಹೆಸರುಗಳು ಗ್ರೈನೆಟ ಕಲ್ಲಿನಲ್ಲಿ ಕೆತ್ತಿಸಿ ಹಾಕಲಾಗುತ್ತದೆ. ಹೆಚ್ಚಿನ ವಿವರಕ್ಕಾಗಿ ಶ್ರೀ ಮ.ಘ.ಚ. ಬಸವಲಿಂಗ ಪಟ್ಟದ್ದೇವರು ಭಾಲ್ಕಿ''[೨೫] ಸಂಪರ್ಕಿಸಿರಿ ಎಂದು ಪತ್ರಿಕೆಗಳಲ್ಲಿ ಪ್ರಕಟಿಸಿದ್ದು ನಿಜವಾಗಿರುತ್ತದೆ.

ಒಂದು ಕೋಟಿ ನಲವತ್ತೆಳು ಲಕ್ಷ ರೂ, ಸಂಪಾದನೆ ಮಾಡಬೇಕೆಂದು ಛಲ ತೊಟ್ಟಿರುವ ಭಾಲ್ಕಿಯ ಹಿರೇಮಠದ ನೂತನ ಶ್ರೀಗಳಾದ ಶ್ರೀ ಮ. ಘ. ಚ. ಬಸವಲಿಂಗ ಪಟ್ಟದ್ದೇವರ ವ್ಯಕ್ತಿತ್ವಕ್ಕೆ ಧಕ್ಕೆ ಬಂದಂತಾಗಿದೆಯೆಂದು ಜನರು ಮಾತನಾಡಿಕೊಳ್ಳುತ್ತಿದ್ದಾರೆ. ಈ ನಿಟ್ಟನಲ್ಲಿ ಬಿ. ಎಲ್ ವೇಣುರವರ ಲೇಖನದಲ್ಲಿ ''ಮಣಗಟ್ಟಲೆ ಬಂಗಾರ ಸಂಗ್ರಹಿಸಿರುವ ಮಠಗಳ ದೇಶಾದ್ಯಾಂತ ಸಾವಿರಾರು ಎಕ್ಕರೆ ಭೂಮಿಯನ್ನು ಹೊಂದಿದ್ದು ಕಾಂಪ್ಲೇಕ್ಸ್, ಹೋಟೆಲ, ಸೀನೆಮಾ, ಉದ್ಯನವನ ಕಡೆಗೆ ಹೆಜ್ಜೆ ಹಾಕಿ ಜನರನ್ನು ದೊಚಲು ಮುಂದಾಗಿದೆ. ಕಾಯಕವೇ ಕೈಲಾಸ ಎಂಬ ಮಾತಿಗೆ, ಕಾಸಿದ್ರೆ ಕೈಲಾಸ ಎಂದು ಮಾರ್ಪಾಡಾಗಿದೆ. ಮಠಗಳಲ್ಲಿ ಕೊಳೆಯುತ್ತಿರುವ ಟನಗಟ್ಟಲೆ ಬೆಳ್ಳಿ ಬಂಗಾರವನ್ನು ಸರ್ಕಾರಕ್ಕೆ ದೇಶದ ಪ್ರಗತಿಗೆ ಸಹಕರಿಸಬೇಕಾದ ಸರ್ವ ಸಂಘ ಪರಿತ್ಯಾಗಿಗಳು, ಎ.ಸಿ.ರೂಂಗಳಲ್ಲಿ, ಕಂಟೆಸ್ಸಾ ಕಾರುಗಳಲ್ಲಿ, ಭವ್ಯ ಬಂಗಲೆಗಳಲ್ಲಿ, ಫಾರೆನ್ ಟೂರಗಳಲ್ಲಿ, ಕಾಲ ಕಳೆಯುತ್ತಾ ಐಷಾರಾಮ ಜೀವನ ನಡೆಸುತ್ತಿದ್ದಾರೆ. .... ಅಡ್ಡ ಪಲ್ಲಕ್ಕಿ ಉತ್ಸವ ಪಾದಯಾತ್ರೆ ಹಿಡಿದು ಪಾನ ನಿಷೇಧಕ್ಕೆ ಹೊರಟೆ ಸಾಮೂಹಿಕ ವಿವಾಹಗಳ ಜಾತ್ರೆ ನಡೆಸಿದ ಅಂತ, ಪ್ರಚಾರ ಗಿಟ್ಟಿಸಿಕೊಳ್ಳುವ ಸ್ವಾಮಿಗಳು ಮಠದ ಆಸ್ತಿಯನ್ನು ಹೆಚ್ಚಿಸಿಕೊಳ್ಳಲು ಪಾನವಿರೋಧಿಗಳಾಗಿ ತಮ್ಮ ಅಬ್ಕಾರಿ ದೊರೆಗಳಿಗೆ ''ಧಾನ ಶಿರೋಮಣಿ'' ಬಿರುದು ನೀಡಿ ಗೌರವಿಸುತ್ತಾ ಅವರಿಂದ ಕೋಟಿಗಟ್ಟಲೆ ಧಾನ ಸ್ವೀಕರಿಸುತ್ತಿರುವುದು ಎಂಥ ಉಪರ್ಯಾಸ''.[೨೬] ಸಮಾಜದಲ್ಲಿ ಹತ್ತಾರು ರೀತಿಯ ಭಕ್ತರು ಇರುವುದನ್ನು

ಮರೇತು ಬಿಡುತ್ತಾರೆ. ಮಠಕ್ಕೆ ಯಾವುದೇ ರೀತಿಯ ಕಳಂಕ ಬರದಂತೆ ನೋಡಿಕೊಳ್ಳುವ ಹಾಗೆ ಮಠಾಧಿಪತಿಗಳದಾಗಿರುತ್ತದೆ. ಈ ರೀತಿಯ ಸ್ವಾಮಿಗಳು ಇರುವುದರಿಂದ ಸಮಾಜದಲ್ಲಿ ಒಡಕು ಮಾಡುತ್ತದೆ.

ಹೀಗೆ ಭಾಲ್ಕಿಯ ಹಿರೇಮಠವು ಶೈಕ್ಷಣಿಕ ಸೇವೆಯಲ್ಲಿ ಅಂದು ಮತ್ತು ಇಂದಿನ ವರೆಗೆ ರಚಿಸಿಕೊಂಡು ಬರುತ್ತಿರುವುದು ನೋಡಲಾಗಿದೆ. ಡಾಃ ಚನ್ನಬಸವ ಪಟ್ಟದ್ದೇವರ ಹೆಸರು ಸಾಕ್ಷಾತ್ ಹನ್ನೆರಡನೇ ಶತಮಾನದ ಬಸವಣ್ಣ ಈ ಜನ್ಮ ಭೂಮಿಯಲ್ಲಿ ಮತ್ತೊಮ್ಮೆ ಜನ್ಮ ವೆತ್ತಿ ಬಂದಂತಿದ್ದಾರೆಂದು ಜನರು ಭಾವಿಸುತ್ತಿದ್ದರು. ಮಠಕ್ಕೆ ಬಂದ ಭಕ್ತರಿಗೆ ಯಾವತ್ತು ಮನ ನೋಯಿಸಿ ಮಾತನಾಡುತ್ತಿರಲಿಲ್ಲ ಅವರ ನಡೆ – ನುಡಿಯೇ ಶರಣರಿಗೆ ತುಂಬಾ ಹೋಲುತ್ತಿತ್ತು, ನೂತನ ಶ್ರೀಗಳಾದ ಮ. ಘ. ಚ. ಬಸವಲಿಂಗ ಪಟ್ಟದ್ದೇವರು ಚನ್ನಬಸವೇಶ್ವರ ಗುರುಕುಲ ಕರಡ್ಯಾಳದಲ್ಲಿ ಸ್ವತಃ ೨೫ ಎಕ್ಕರೆ ಜಮಿನು ಖರಿದಿಸಿ ಕಟ್ಟಡ ನಿರ್ಮಾಣ ಮಾಡಿದ್ದಾರೆ. ಮಕ್ಕಳಿಗಾಗಿ ವಸತಿ ಗೃಹ, ವರ್ಗಗಳ ಕೋಣೆಗಳು, ಪ್ರಾರ್ಥನ ಭವನ, ಅಡುಗೆ ಕೋಣೆ, ಪ್ರಸಾದ ನಿಲಯ, ಗ್ರಂಥಾಲಯ ...... ಮುಂತಾದವುಗಳು ಕಟ್ಟಿ ಸಿದ್ದಾರೆ, ಕಟ್ಟಿಸುತ್ತಿದ್ದಾರೆ. ಶೈಕ್ಷಣಿಕ ಕೊಡುಗೆಗಗಳು ನಿಡುತ್ತಿದ್ದಾರೆ.

೩.೨ ಹುಲಸೂರು ವಿರಕ್ತಮಠ

ಶ್ರೀ ಮಠದ ಮ.ನಿ.ಪ್ರ. ಶಿವಾನಂದ ಮಹಾಸ್ವಾಮಿಗಳಿಗೆ ಶೈಕ್ಷಣಿಕದಲ್ಲಿ ತುಂಬಾ ಆಸಕ್ತಿಯುಳ್ಳ ವರಾಗಿದ್ದಾರೆ. ಅಂತೆಯೇ "ಶ್ರೀ ಗುರು ಬಸವೇಶ್ವರ ಶಿಕ್ಷಣ ಸಂಸ್ಥೆ" ಸ್ಥಾಪಿಸಿ ಅದರಡಿಯಲ್ಲಿ ಕೆಳಗಿನ ಶಾಲೆಗಳನ್ನು ಸುವ್ಯವಸ್ಥಿತವಾಗಿ ನಡೆಸಿಕೊಂಡು ಬರುತ್ತಿದ್ದಾರೆ.

೧) ಶ್ರೀ ಗುರು ಬಸವೇಶ್ವರ ಪ್ರೌಢ ಶಾಲೆ, ಹುಲಸೂರ.

೨) ಶ್ರೀ ಜ. ಬಸವ ಕುಮಾರ ಪ್ರಾಥಮಿಕ ಶಾಲೆ, ಹುಲಸೂರ.

೩) ಶ್ರೀ ಶಾಂತಲಿಂಗೇಶ್ವರ ಪ್ರಾಥಮಿಕ ಶಾಲೆ, ಹುಲಕುಂಟ.

೪) ಶ್ರೀ ಗುರು ಬಸವೇಶ್ವರ ಪ್ರಾಥಮಿಕ ಶಾಲೆ, ಮುಕರಂಬಿ.

೫) ಶ್ರೀ ಜ. ಬಸವ ಕುಮಾರೇಶವರ ಪ್ರೌಢ ಶಾಲೆ, ಬಸವಕಲ್ಯಾಣ.

೬) ಶ್ರೀ ಶಿವಾನಂದೇಶ್ವರ ಪ್ರಾಥಮಿಕ ಶಾಲೆ, ಬಸವಕಲ್ಯಾಣ.

### ೩.೩ ಹಾರಕೂಡ ಹಿರೇಮಠ

ಬಸವಕಲ್ಯಾಣ ತಾಲೂಕಿನಲ್ಲಿರುವ ಹಾರಕೂಡ ಬೃಹನ್ಮಠವು ಪೀಠಾಧಿಪತಿಗಳಾದ ಪೂಜ್ಯ ಶ್ರೀಚನ್ನವೀರ ಶಿವಾಚಾರ್ಯರು "ಚನ್ನಬಸವೇಶ್ವರ ಶಿಕ್ಷಣ ಸಂಸ್ಥೆ" ಯನ್ನು ತೆರೆದು ಶೈಕ್ಷಣಿಕ ಸೇವೆಯಲ್ಲಿ ತೊಡಗಿದ್ದಾರೆ. ಕೆಳಗಿನ ಶಾಲೆಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ.

೧) ಶ್ರೀ ಜಗಜ್ಯೋತಿ ಬಸವೇಶ್ವರ ಪ್ರಾಥಮಿಕ ಶಾಲೆ, ಭಾಲ್ಕಿ.

೨) ಶ್ರೀ ಬಸವೇಶ್ವರ ಪ್ರೌಢ ಶಾಲೆ, ಭಾಲ್ಕಿ.

೩) ಶ್ರೀ ಚನ್ನಬಸವ ಶಿಸುವಿಹಾರ ಮತ್ತು ಪ್ರಾಥರ್ಮಿಕ ಶಾಲೆ, ಚಿಂಚೋಳಿ.

೪) ಶ್ರೀ ಅನುಭಾವ ಪ್ರಚಾರೋಪನ್ಯಾಸ, ಹಾರಕೂಡ.

### ೩.೪. ಸಿದ್ಧಾರೂಢ ಮಠ

೧) ಶ್ರೀ ಸಿದ್ಧಾರೂಢ ಪ್ರೌಢ ಶಾಲೆ, ಚಳಕಾಪೂರ ೧೯೮೧ – ೮೨

೨) ಶ್ರೀ ಕುಮಾರೇಶ್ವ ರ ಗುರುಕುಲ, ಬೀದರ ೧೯೮೨ – ೮೩

೩) ಶ್ರೀ ಎಸ್. ಹಲವಾಯ ಸಂಸ್ಕೃತ ಪಾಠಶಾಲೆ, ಬೀದರ ೧೯೮೭ – ೮೮

೪) ಶ್ರೀ ಮತಿ ಇಂದಿರಾಬಾಯಿ ಶಟಕಾರ ಪ್ರೌಢ ಶಾಲೆ, ಬೀದರ ೧೯೮೯ – ೯೦

೫) ಶ್ರೀಮತಿ ಫಕಿರಮ್ಮ ಅನಾಥ ಬಾಲಕಾಶ್ರಮ, ಬೀದರ ೧೯೮೯ – ೯೦

೬) ಶ್ರೀ ನಾಗಣ್ಣಾ ಜಾಬಶೇಟ್ಟಿ ಆಯುರ್ವೆದಿಕ ಮೇಡಿಕಲ ಕಾಲೇಜು, ಬೀದರ ೧೯೯೧ – ೯೨

೭) ಶ್ರೀ ಸಿದ್ಧಾರೂಢ ಅಂಗ್ರೇಜಿ ಮಾಧ್ಯಮ ಕಾನ್ವೆಂಟ ಶಾಲೆ, ಅಂಬರನಾಥ, ಮುಂಬಯಿ

೮) ಶ್ರೀ ಚಂದ್ರಪ್ಪಾ ಗವರಶೆಟ್ಟಿ ಕಲಾ – ವಿಜ್ಞಾನ ಕಿರಿಯ ಮಹಾವಿದ್ಯಾಲಯ, ಬೀದರ ೧೯೯೪ – ೯೫

ಹೀಗೆ ಶ್ರೀ ಮಠದ ಪೀಠಾಧಿಪತಿಯಾದ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಶೈಕ್ಷಣಿಕ ಸೇವೆಯನ್ನು ಮಾಡುತ್ತಿದ್ದಾರೆ. ಇವುಗಳಲ್ಲದೆ ಸಿಂದಗಿ ತಾಲೂಕಿನ ರಾಂಪೂರದಲ್ಲಿ ತಾಂತ್ರಿಕ ಶಿಕ್ಷಣ, ಮುಂಬಯಿ ಅಂಬರನಾಥದಲ್ಲಿ ಶಿಶು ವಿಹಾರಗಳಲ್ಲದೆ ಬಸವಕಲ್ಯಾಣದಲ್ಲ ಉದ್ಯೋಗಾವಕಾಶವನ್ನು ದಯಾ ಪಾಲಿಸುವ ಸಂಸ್ಥೆ ಅರಂಭಿಸುವ ಯೋಜನೆಯಲ್ಲಿಯೇ ಕಟ್ಟಡವನ್ನು ಪ್ರಾರಂಭ ಮಾಡಿದ್ದಾರೆ.

## ೩.೫. ಭಾತಂಬ್ರಾ ವಿರಕ್ತಮಠ

ಶ್ರೀ ಮಠದ ಪೂಜ್ಯರಾದ ಶ್ರೀ ೧ ಶಿವಯೋಗಿಶ್ವರ ಮಹಾಸ್ವಾಮಿಗಳು ನಡೆಸುತ್ತಿರುವ ಶೈಕ್ಷಣಿಕ ಕ್ಷೇತ್ರಗಳು ಕೆಳಕಂಡಂತಿವೆ.

| | |
|---|---|
| ೧) ಶ್ರೀ ಸಿದ್ಧಾರಾಮೇಶ್ವರ ಅನಾಥಶ್ರಮ, ಬಸವ ಮುಕ್ತಿ ಮಂದಿರ ಬೀದರ | ೧೯೮೪ |
| ೨) ಶ್ರೀ ಬಸವ ಗುರುಕುಲ ಶಾಲೆ, ಬೀದರ | ೧೯೯೨ |
| ೩) ಶ್ರೀ ಹಾನಗಲ್ ಕುಮಾರೇಶ್ವರ ಪ್ರಾಥಮಿಕ ಶಾಲೆ, ಭಾತಂಬ್ರಾ | ೧೯೯೨ |
| ೪) ಶ್ರೀ ಹಾನಗಲ್ ಕುಮಾರೇಶ್ವರ ಪ್ರಾಥಮಿಕ ಶಾಲೆ, ಭಾತಂಬ್ರಾ | ೧೯೯೫ |
| ೫) ಶ್ರೀ ಶಿವಯೋಗೀಶ್ವರ ಪ್ರಾಥಮಿಕ ಶಾಲೆ, ಭಾಲ್ಕಿ | ೧೯೯೬ |

## ೩.೬. ಚಾಂಬೋಳ ಮಠ :

ಚಾಂಬೋಳ ಹಿರೇಮಠವು "ರುದ್ರಮುನಿ ಶಿಕ್ಷಣ ಸಂಸ್ಥೆ"ಯನ್ನು ಪ್ರಾರಂಭಿಸಿ ಶಿಕ್ಷಣ ಕ್ಷೇತ್ರದಲ್ಲಿ ತೊಡಗಿರುವುದು ಕಂಡು ಬರುತ್ತದೆ.

೧) ಶ್ರೀ ಮತಿ ನೀಲಮ್ಮಾ ತಾಯಿ ಪ್ರಾಥಮಿಕ ಶಾಲೆ, ಚಾಂಬೋಳ

೨) ಶ್ರೀ ರುದ್ರಮುನಿ ಪಟ್ಟದ್ದೇವರ ಪ್ರೌಢ ಶಾಲೆ, ಚಾಂಬೋಳ

೩) ಶ್ರೀ ವೀರಭದ್ರೇಶ್ವರ ವಸತಿ ನಿಲಯ, ಬೀದರ

## ೩.೭. ನಿಡವಂಚಾ ಮಠ

ನಿಡವಂಚಾ ಗ್ರಾಮದ ಚೌಕಿ ಮಠವು ಶೈಕ್ಷಣಿಕ ಕೊಡುಗೆಯನ್ನು ಕೊಡುತ್ತಿದೆ. "ಶ್ರೀ ಗುರು ಭದ್ರೇಶ್ವರ ಶಿಕ್ಷಣ ಸಂಸ್ಥೆ" ಎಂಬ ಹೆಸರನ್ನಿಟ್ಟುಕೊಂಡು ಕೆಳಕಂಡ ಶಾಲೆಗಳನ್ನು ನಡೆಸುತ್ತಿದೆ.

೧) ಶ್ರೀ ಗುರು ಭದ್ರೇಶ್ವರ ಪ್ರಾಥಮಿಕ ಶಾಲೆ, ನಿಡವಂಚಾ

೨) ಶ್ರೀ ಗುರು ಭದ್ರೇಶ್ವರ ಪ್ರೌಢ ಶಾಲೆ, ನಿಡವಂಚಾ

೩) ಶ್ರೀ ಗುರು ಭದ್ರೇಶ್ವರ ನವೋದಯ ಶಾಲೆ, ನಿಡವಂಚಾ

ಇವುಗಳಲ್ಲದೆ ಮಂಠಾಳದ ಮಠದ ಶ್ರೀ ಮ.ನಿ.ಪ್ರ. ಗುಹೇಶ್ವರ ಸ್ವಾಮಿಗಳು"ಗುಹೇಶ್ವರ ಶಿಕ್ಷಣ ಸಂಸ್ಥೆ"ಯನ್ನು ತೆರೆದು ಪ್ರಾರ್ಥಮಿಕ ಹಾಗೂ ಪ್ರೌಢ ಶಾಲೆಗಳನ್ನು ನಡೆಸುತ್ತಿದ್ದಾರೆ. ಅಲ್ಲದೆ ಹಿರೇನಾಗಾಂವ

ಮಠದಲ್ಲಿ ಶ್ರೀ ಜಯಶಾಂತ ಲಿಂಗೇಶ್ವರ ಮಹಾಸ್ವಾಮಿಗಳು ''ಶ್ರೀ ಶಾಂತಲಿಂಗೇಶ್ವರ ಶಿಕ್ಷಣ ಸಂಸ್ಥೆ''ಯನ್ನು ತೆರೆದು ಅದರ ವ್ಯಾಪ್ತಿಯಲ್ಲಿ ಪ್ರಾಥಮಿಕ ಶಾಲೆ ಹಾಗೂ ಬಾಲಕರ ಅನಾಥಾಶ್ರಮಗಳನ್ನು ನಡೆಸಿಕೊಂಡು ಬರುತಿರುವುದು ಕಾಣುತ್ತೇವೆ.

೩.೮. ಗುಲಬರ್ಗಾ ಶ್ರೀ ಶರಣಬಸವೇಶ್ವರ ಮಠ :

ಕಲಬುರ್ಗಿ ಶ್ರೀ ಶರಣಬಸವೇಶ್ವರ ಮಠವು ಶೈಕ್ಷಣಿಕತೆಯಲ್ಲಿ ಸೇವೆಸಲ್ಲಿಸುತ್ತ ಶಾಲಾ ಕಾಲೇಜುಗಳು ಕೆಳಕಂಡಂತೆ ನಡೆಸುತ್ತಿದ್ದಾರೆ.

| | | |
|---|---|---|
| ೧) | ಶರಣಬಸವೇಶ್ವರ ಪಬ್ಲಿಕ್ ಲೈಬ್ರರಿ, ಗುಲಬರ್ಗಾ | ೧೯೧೮ |
| ೨) | ಮಹಾದೇವಿ ಕನ್ಯಾ ಹಿರಿಯ ಪ್ರಾಥ. ಮಿಕ ಶಾಲೆ, ಗುಲಬರ್ಗಾ | ೧೯೩೪ |
| ೩) | ಶರಣಬಸವೇಶ್ವರ ಸಂಯುಕ್ತ ಪದವಿ–ಪೂರ್ವ ಮಹಾವಿದ್ಯಾಲಯ, ಗುಲಬರ್ಗಾ | ೧೯೪೯ |
| ೪) | ಶರಣಬಸವೇಶ್ವರ ವಿಜ್ಞಾನ ಮಹಾವಿದ್ಯಾಲಯ, ಗುಲಬರ್ಗಾ | ೧೯೫೬ |
| ೫) | ಶರಣಬಸವೇಶ್ವರ ಕಲಾ ಮಹಾವಿದ್ಯಾಲಯ, ಗುಲಬರ್ಗಾ | ೧೯೫೭ |
| ೬) | ಮಹಾದೇವಿ ಕನ್ಯಾ ಪ್ರೌಢ ಶಾಲೆ, ಗುಲಬರ್ಗಾ | ೧೯೬೧ |
| ೭) | ಶರಣಬಸವೇಶ್ವರ ವಾಣಿಜ್ಯ ಮಹಾವಿದ್ಯಾಲಯ, ಗುಲಬರ್ಗಾ | ೧೯೬೧ |
| ೮) | ಅಖಿಲ ಭಾರತ ಅನುಭವ ಮಂಟಪ, ಗುಲಬರ್ಗಾ | ೧೯೬೩ |
| ೯) | ಶರಣಬಸವೇಶ್ವರ ಪಬ್ಲಿಕ್ ಸ್ಕೂಲ್, ಗುಲಬರ್ಗಾ | ೧೯೬೭ |
| ೧೦) | ಎಸ್ ಎಸ್ ಖೋಬ್ಬಾ ಬಸವೇಶ್ವರ ಕಲಾ ಮತ್ತು ವಿಜ್ಞಾನ ಮಹಾವಿದ್ಯಾಲಯ, ಬವಕಲ್ಯಾಣ ಜಿ. ಬೀದರ | ೧೯೬೭ |
| ೧೧) | ದೊಡ್ಡಪ್ಪ ಅಪ್ಪ ಐ.ಎ.ಎಸ್. ಟ್ರೇನಿಂಗ್ ಇನ್‌ಸ್ಟಿಟ್ಯೂಟ್, ಗುಲಬರ್ಗಾ | ೧೯೬೮ |
| ೧೨) | ಶರಣಬಸವೇಶ್ವರ ಮುದ್ರಣ ಮತ್ತು ಪ್ರಕಟಣಾ ವಿಭಾಗ, ಗುಲಬರ್ಗಾ | ೧೯೬೯ |
| ೧೩) | ಗೋದೂತಾಯಿ ದೊಡ್ಡಪ್ಪ ಅಪ್ಪ ಕಲಾ ಮತ್ತು ವಾಣಿಜ್ಯ ಪದವಿಪೂರ್ವ ಮಹಿಳಾ ಮಹಾವಿದ್ಯಾಲಯ, ಗುಲಬರ್ಗಾ | ೧೯೭೧ |
| ೧೪) | ಗೋದೂತಾಯಿ ದೊಡ್ಡಪ್ಪ ಅಪ್ಪ ಕಲಾ ಮತ್ತು ವಾಣಿಜ್ಯ ಮಹಿಳಾ ಮಹಾವಿದ್ಯಾಲಯ, ಗುಲಬರ್ಗಾ | ೧೯೭೩ |

೧೫) ಶರಣಬಸವೇಶ್ವರ ಗ್ರಂಥ ವಿಶ್ವವಿದ್ಯಾನಿಲಯ, ಗುಲಬರ್ಗಾ ೧೯೭೮

೧೬) ಶರಣಬಸವೇಶ್ವರ ಪ್ರಾಥಮಿಕ ಶಾಲೆ, ಗುಲಬರ್ಗಾ ೧೯೮೦

೧೭) ಶರಣಬಸವೇಶ್ವರ ಚಿತ್ರಕಲಾ ಸ್ನಾತಕೊತ್ತರ ಪದವಿ ಸಂಸ್ಥೆ, ಗುಲಬರ್ಗಾ ೧೯೮೩

೧೮) ಶರಣಬಸವೇಶ್ವರ ಪಿ.ಜಿ.ಡಿ.ಬಿ.ಎಮ್. ಕೋರ್ಸ ಗುಲಬರ್ಗಾ ೧೯೮೪

೧೯) ಶರಣಬಸವೇಶ್ವರ ಪಿ.ಜಿ.ಡಿ.ಸಿ.ಎ. ಕೋರ್ಸ ಗುಲಬರ್ಗಾ ೧೯೯೧

೨೦) ಶರಣಬಸವೇಶ್ವರ ರೆಸಿಡೆನ್ಸಿಯಲ್ ಪದವಿ–ಪೂರ್ವ ಮಹಾವಿದ್ಯಾಲಯ, ಗುಲಬರ್ಗಾ ೧೯೯೩

೨೧) ಶರಣಬಸವೇಶ್ವರ ಸಿ.ಎ. (ಪ್ರಿ – ಪ್ರೊಫೇಶನಲ್ ಫೌಂಡೇಶನ್) ಗುಲಬರ್ಗಾ ೧೯೯೨

೨೨) ಶರಣಬಸವೇಶ್ವರ ಎಮ್.ಬಿ.ಎ. ಕಾಲೇಜ್, ಗುಲಬರ್ಗಾ ೧೯೯೬

೨೩) ದೊಡ್ಡಪ್ಪ ಅಪ್ಪ ಬಿ.ಬಿ.ಎಮ್. ಸಂಸ್ಥೆ, ಗುಲಬರ್ಗಾ ೧೯೯೮

೨೪) ದೊಡ್ಡಪ್ಪ ಅಪ್ಪ ಎಮ್.ಸಿ.ಎ. ಸಂಸ್ಥೆ, ಗುಲಬರ್ಗಾ ೧೯೯೯

೨೫) ದೊಡ್ಡಪ್ಪ ಅಪ್ಪ ಸ್ವತಂತ್ರ ಪದವಿ–ಪೂರ್ವ ವಿಜ್ಞಾನ ಮಹಾವಿದ್ಯಾಲಯ, ಗುಲಬರ್ಗಾ ೧೯೯೯

೨೬) ಮುಕ್ತಾಂಬಿಕಾ ಸ್ವತಂತ್ರ ಪದವಿ–ಪೂರ್ವ ವಿಜ್ಞಾನ ಮಹಿಳಾ ಮಹಾವಿದ್ಯಾಲಯ, ಗುಲಬರ್ಗಾ ೧೯೯೯

೨೭) ಗೋದೂತಾಯಿ ದೊಡ್ಡಪ್ಪ ಅಪ್ಪ ಬಿ.ಸಿ.ಎ. ಗುಲಬರ್ಗಾ ೨೦೦೧

೨೮) ಮುಕ್ತಾಂಬಿಕಾ ಬಿ.ಸಿ.ಎ. ಕಾಲೇಜ್, ಗುಲಬರ್ಗಾ ೨೦೦೧

೨೯) ದೊಡ್ಡಪ್ಪ ಅಪ್ಪ ಬಿ.ಸಿ.ಎ. ಕಾಲೇಜ್, ಬಸವಕಲ್ಯಾಣ ೨೦೦೧

೩೦) ಶರಣಬಸವೇಶ್ವರ ಬಿ.ಸಿ.ಎ. ಕಾಲೇಜ್, ಗುಲಬರ್ಗಾ ೨೦೦೧

## ೩.೯. ಶ್ರೀ ಕೊತ್ತಲ ಬಸವೇಶ್ವರ ಮಠ

ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಮಿತಿ ಸೇಡಮ್

೧. ಪೂಜ್ಯ ಶ್ರೀ ಶಿವಶಂಕರ ಸ್ವಾಮಿಗಳ ಸ್ಮೃತಿ ಬಾಲಭಾರತಿ ವಿದ್ಯಾ ಮಂದಿರ – ಹಿರಿಯ ಪ್ರಾಥ: ಮಿಕ ಶಾಲೆ, ಸೇಡಂ.

೨. ಶ್ರೀಮತಿ ನಥಿಬಾಯಿ ಸೀತಾರಾಮ ಜೇಠಮಲ್ ತಾಪಡಿಯಾ ಮಾತೃಛಾಯಾ ಪ್ರೌಢ ಶಾಲೆ ಹಾಗೂ ಪದವಿ ಪೂರ್ವ ಕಾಲೇಜ, ಸೇಡಮ್

೩. ಸೇಠ್ ಶ್ರೀ ತುಳಸಿರಾಮ ಗಿಲತಾ ನೃಪತುಂಗ ಪ್ರಥಮ ದರ್ಜೆ ಮಹಾವಿದ್ಯಾಲಯ, ಸೇಡಮ್

೪. ಶ್ರೀ ತುಳಜಾಭವಾನಿ ಶಿಸು ಮಂದಿರ, ಸೇಡಮ್

೫. ಶ್ರೀ ಮಡಿವಾಳಯ್ಯಾ ಸ್ವಾಮಿ ಉಚಿತ ವೈದ್ಯಕಿಯ ಕೇಂದ್ರ, ಸೇಡಮ್

೬. ಕಲ್ಪನಾ ವಾಣಿಜ್ಯ ವಿದ್ಯಾಶಾಲೆ, ಸೇಡಮ್

೭. ಸಿದ್ದೇಶ್ವರ ಜ್ಞಾನಾಶ್ರಮ ಹಾಗೂ ಗೋ ಸೇವಾ ಸದನ, ಸಹಿತಪಟ್ಟನಳ್ಳಿ, ತಾಃ ಸೇಡಮ್

೮. ಭಾರತಿ ಮಹಿಳಾ ಹೊಲಿಗೆ ಕೇಂದ್ರ, ಸೇಡಮ್

೯. ಶ್ರೀ ಶಾರದಾ ಸಂಗಿತಾ ಶಾಲೆ, ಸೇಡಮ್

೧೦. ಶ್ರೀ ಹನುಮಾನ ವ್ಯಾಯಮ ಶಾಲೆ, ಸೇಡಮ್

೧೧. ಶ್ರೀ ರಾಮಾನುಜ ಗಣಕಯಂತ್ರ ಶಿಕ್ಷಣ ಕೇಂದ್ರ, ಸೇಡಮ್

೧೨. ಶಿವಕುಮಾರ ವನ ಹೂಗಾರ ಶ್ರೀ ವೀರಭದ್ರೇಶ್ವರ ವಿದ್ಯಾಮಂದಿರ ಹಿರಿಯ ಪ್ರಾಥ ಮಿಕ ಶಾಲೆ, ಕೋಲಕೂಂಡಾ, ತಾಃ ಸೇಡಮ್

೧೩. ಶ್ರೀ ಸರಸ್ವತಿ ವಿದ್ಯಾ ಮಂದಿರ ಹಿರಿಯ ಪ್ರಾಥಮಿ ಕ ಶಾಲೆ, ಮುಧೊಳ, ತಾಃ ಸೇಡಮ್

೧೪. ಶ್ರೀ ಶರಣಬಸವೇಶ್ವರ ವಿದ್ಯಾಮಂದಿರ ಹಿರಿಯ ಪ್ರಾಥ ಮಿಕ ಶಾಲೆ, ಚಿಂಚೋಳಿ

೧೫. ಮಾತೃಮಂದಿರ ಪ್ರೌಢ ಶಾಲೆ, ಚಿಂಚೋಳಿ

## ೩.೧೦. ಕೊಪ್ಪಳ ಗವಿ ಮಠ

ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಹೆಸರುವಾಸಿಯಾದ ಶ್ರೀ ಕೊಪ್ಪಳ ಗವಿಮಠವು ಶೈಕ್ಷಣಿಕ ಕ್ಷೇತ್ರದಲ್ಲಿ ಹಿರಿದಾದ ಸೇವೆಯನ್ನು ಸಲ್ಲಿಸುತ್ತಿವೆ. ಈ ಭಾಗದಲ್ಲಿ ಶ್ರೀ ಗವಿ ಸಿದ್ದೇಶ್ವರ(ಶಿಕ್ಷಣ) ವಿದ್ಯಾವರ್ಧಕ ಸಮಿತಿಯನ್ನು ಪ್ರಾರಂಭಿಸಿ ಇದರ ಮುಖಾಂತರ ಹಲವಾರು ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಶೈಕ್ಷಣಿಕತೆಯಿಂದ ಸಾಗಲು ಅನುಕೂಲವಾಗುತ್ತಿದೆ. ಈ ಭಾಗದ ಅತಿ ದೊಡ್ಡ ಶಿಕ್ಷಣ ಸಂಸ್ಥೆಯೆಂದೆ ಪ್ರಖ್ಯಾತಿ ಪಡೆದುಕೊಂಡು ಈ ಸಂಸ್ಥೆಯ ವತಿಯಿಂದ ನಡೆಸಿಕೊಂಡು ಬರುತ್ತಿರುವ ಶಾಲಾ ಕಾಲೇಜುಗಳು ಕೆಳಗಿನಂತಿವೆ.

೧) ಗವಿಸಿದ್ದೇಶ್ವರ ಪ್ರಾಥ ಮಿಕ ಶಾಲೆ, ಕೊಪ್ಪಳ

೨) ಗವಿಸಿದ್ದೇಶ್ವರ ಪ್ರೌಢ ಶಾಲೆ, ಕೊಪ್ಪಳ

೩) ಗವಿಸಿದ್ದೇಶ್ವರ ಪದವಿ ಪೂರ್ವ ಮಹಾವಿದ್ಯಾಲಯ, ಕೊಪ್ಪಳ

೪) ಗವಿಸಿದ್ದೇಶ್ವರ ಪ್ರಾಥ ಮಿಕ ಶಾಲೆ, ಕೂಕನೂರ ತಾಃ ಯಲಬುರ್ಗಾ

೫) ಗವಿಸಿದ್ದೇಶ್ವರ ಪ್ರೌಢ ಶಾಲೆ, ಕೂಕನೂರ ತಾ: ಯಲಬುರ್ಗಾ

೬) ಗವಿಸಿದ್ದೇಶ್ವರ ಪೂರ್ವ ಪ್ರಾಥ ಮಿಕ ಶಿಕ್ಷಕಿಯರ ತರಬೇತಿ ಕೇಂದ್ರ, ಕೂಕನೂರ ತಾ: ಯಲಬುರ್ಗಾ

೭) ಗವಿಸಿದ್ದೇಶ್ವರ ಆಯುರ್ವೇದಿಕ ಮಹಾವಿದ್ಯಾಲಯ, ಕೊಪ್ಪಳ

೮) ಗವಿಸಿದ್ದೇಶ್ವರ ಸಂಗೀತ ಕಲಾ ಮಹಾವಿದ್ಯಾಲಯ, ಕೊಪ್ಪಳ

೯) ಗವಿಸಿದ್ದೇಶ್ವರ ಸಂಸ್ಕೃತ ಪಾಠ ಶಾಲೆ, ಕೊಪ್ಪಳ

೧೦) ಗವಿಸಿದ್ದೇಶ್ವರ ಪ್ರೌಢ ಶಾಲೆ, ಮನ್ನಾಪುರ ಕುಷ್ಟಗಿ ತಾ: (ಈ ಶಾಲೆ ಸರಕಾರಕ್ಕೆ ಒಪ್ಪಿಸಿದ್ದಾರೆ)

೧೧) ಗವಿಸಿದ್ದೇಶ್ವರ ಉಚಿತ ಪ್ರಸಾದ ನಿಲಯ, ಕೊಪ್ಪಳ

ಹೀಗೆ ಹಲವಾರು ಶಿಕ್ಷಣ ಸಂಸ್ಥೆಗಳನ್ನು ನಡೆಸಿಕೊಂಡು ಬರುತ್ತಿದ್ದಾರೆ.

### ೩.೧೧. ಕನಕಗಿರಿ ವಿರಕ್ತಮಠ

ಗಂಗಾವತಿ ತಾಲೂಕಿನ ಕನಕಗಿರಿ ಗ್ರಾಮದ ಶ್ರೀ ರುದ್ರಸ್ವಾಮಿ ಮಠವು ವಿರಕ್ತ ಸಂಪ್ರದಾಯದೊಂದಿಗೆ ಶಿಕ್ಷಣ ಕ್ಷೇತ್ರದಲ್ಲಿ ತೊಡಗಿದೆ. ಈ ಮಠದ ನೂತನ ಶ್ರೀಗಳಾದ ಮ. ನಿ.ಪ್ರ. ಶ್ರೀ ರುದ್ರಸ್ವಾಮಿಗಳು ಮೂಲ ಮಠಾಧೀಶರ ಹೆಸರನ್ನೆ ಅಬಿಧಾನ ಪಡೆದು ಪಟ್ಟಕ್ಕೆ ಬಂದಿರುತ್ತಾರೆ. ಅದರಂತೆ ಇಂದು ಇಲ್ಲಿ ''ರುದ್ರ ಸ್ವಾಮಿ ವಿದ್ಯಾವರ್ಧಕ ಸಂಘ''ವನ್ನು ಸ್ಥಾಪಿಸಿ ಇದರ ಮುಖಾಂತರ ಶಿಕ್ಷಣದ ಅನ್ನವನ್ನು ಬಡ – ಶ್ರೀಮಂತ ಜನರಿಗೆ ಉಣಬಡಿಸುತ್ತಿದ್ದಾರೆ.

೧) ಶ್ರೀ ರುದ್ರ ಸ್ವಾಮಿ ಪ್ರಾಥ ಮಿಕ ಶಾಲೆ, ಕನಕಗಿರಿ, ತಾ: ಗಂಗಾವತಿ

೨) ಶ್ರೀ ರುದ್ರ ಸ್ವಾಮಿ ಪ್ರೌಢ ಶಾಲೆ, ಕನಕಗಿರಿ, ತಾ: ಗಂಗಾವತಿ

೩) ಶ್ರೀ ರುದ್ರ ಸ್ವಾಮಿ ಬಾಲಕಿಯರ ಪ್ರೌಢ ಶಾಲೆ, ಕನಕಗಿರಿ, ತಾ: ಗಂಗಾವತಿ

೪) ಶ್ರೀ ರುದ್ರ ಸ್ವಾಮಿ ಪೂರ್ವ ಪ್ರಾಥ ಮಿಕ ಶಾಲೆ, ಕನಕಗಿರಿ, ತಾ : ಗಂಗಾವತಿ

೫) ಶ್ರೀ ರುದ್ರ ಸ್ವಾಮಿ ಕಂಪ್ಯೂಟರ ತರಬೇತಿ ಕೆಂದ್ರ, ಕನಕಗಿರಿ, ತಾ: ಗಂಗಾವತಿ

ಹೀಗೆ ಶ್ರೀ ಮಠವು ಶೈಕ್ಷಣಿಕ ತನ್ನ ವಲವನ್ನು ಬೆಳೆಸಲು ಶ್ರಮಿಸುತ್ತಿದೆ. ಇತ್ತೀಚಿಗೆ ಶ್ರೀ ಮಠದಲ್ಲಿ ರುದ್ರ ಸ್ವಾಮಿ ದೇವರ ವಿದ್ಯಾರ್ಥಿ ನಿಲಯವನ್ನು ಪ್ರಾರಂಭಿಸಿ ಬಡ ವಿದ್ಯಾರ್ಥಿಗಳಿಗೆ ಆಶ್ರಯ ತಾಣವಾಗಿ ಕಂಗೋಳಿಸುತಿದ್ದಾರೆ. ಭಕ್ತರೊಡನೆ ಜನ ಸಂಪರ್ಕವನ್ನು ಹೊಂದಿದ ಸ್ವಾಮಿಗಳು ಶೈಕ್ಷಣಿಕ ಕ್ಷೇತ್ರದಲ್ಲಿ ತುಂಬಾ

ಅಭಿರುಚಿಯುಳ್ಳವರಾಗಿದ್ದಾರೆ. ಇನ್ನು ಮುಂದೆ ಈ ಶಿಕ್ಷಣ ಸಂಸ್ಥೆಯನ್ನು ಹೆಮ್ಮರವಾಗಿ ಬೆಳೆಯಬೇಕು, ಬೆಳೆಸಲೆಬೇಕೆಂಬ ಹಿರಿದಾಸೆಯನ್ನಿಟ್ಟುಕೊಂಡಿದ್ದಾರೆ.

೩.೧೨. ಗಂಗಾವತಿ ಕೊಟ್ಟುರೇಶ್ವರ ಕಲ್ಮಠ

ಗಂಗಾವತಿ ನಗರದ ಶ್ರೀ ಕೊಟ್ಟುರೇಶ್ವರ ಕಲ್ಮಠವು ತನ್ನದೆಯಾದ ಮಿತಿಯಲ್ಲಿ ಶೈಕ್ಷಣಿಕ ಕೊಡುಗೆಗಳನ್ನು ಜನರಿಗೆ ಹತ್ತಿರವಾಗುತ್ತಿದೆ. ಶ್ರೀ ಮ. ನಿ. ಪ್ರ. ಕೊಟ್ಟುರ ಸ್ವಾಮಿಗಳು ಈ ಭಾಗದಲ್ಲಿ ಶೈಕ್ಷಣಿಕತೆಯನ್ನು ಕುಂಠಿತಗೊಂಡಿದ್ದನ್ನು ಗಮನಿಸಿ, ೧೯೬೫ ರಲ್ಲಿ '' ಶ್ರೀ ಕೊಟ್ಟುರೇಶ್ವರ ವಿದ್ಯಾವರ್ಧಕ ಸಂಘ'' ವನ್ನು ಪ್ರಾರಂಭಿಸಿ, ಅದರ ಮುಖಾಂತರ ಕೊಟ್ಟುರೇಶ್ವರ ಪ್ರಾಥ್ಮಿಕ ಶಾಲೆ, ಹಾಗೂ ಕೊಟ್ಟುರೇಶ್ವರ ಸಂಗೀತ ಪಾಠ ಶಾಲೆಯನ್ನು ಪ್ರಾರಂಭಿಸಿದ್ದಾರೆ. ಅವುಗಳ ಪಟ್ಟಿ ಈ ಕೆಳಗಿನಂತಿವೆ.

೧) ಶ್ರೀ ಚನ್ನಬಸವ ಸ್ವಾಮಿ ಕನ್ನಡ ಹಿರಿ ಪ್ರಾಥಮಿಕ ಶಾಲೆ, ಗಂಗಾವತಿ

೨) ಶ್ರೀ ಚನ್ನಬಸವ ಸ್ವಾಮಿ ಪ್ರೌಢ ಶಾಲೆ, ಗಂಗಾವತಿ

೩) ಶ್ರೀ ಚನ್ನಬಸವ ಸ್ವಾಮಿ ಕಲಾ ಮತ್ತು ವಾಣಿಜ್ಯ ಮಹಿಳಾ ಮಹಾವಿದ್ಯಾಲಯ, ಗಂಗಾವತಿ

೪) ಶ್ರೀ ಚನ್ನಬಸವ ಸ್ವಾಮಿ ಜಿ. ಎಚ್. ಎನ್. ವಾಣಿಜ್ಯ ಮಹಾವಿದ್ಯಾಲಯ, ಗಂಗಾವತಿ

೫) ಎಚ್. ಆರ್. ಸರೋಜಮ್ಮ ಸ್ಮಾರಕ ಬಾಲಕಿಯರ ಪದವಿ ಪೂರ್ವ ಮಹಾವಿದ್ಯಾಲಯ, ಗಂಗಾವತಿ

೬) ಶ್ರೀ ಕೊಟ್ಟುರೇಶ್ವರ ಪದವಿ ಪೂರ್ವ ಮಹಾವಿದ್ಯಾಲಯ, ಗಂಗಾವತಿ

೭) ಶ್ರೀ ಕೊಟ್ಟುರೇಶ್ವರ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿದರು. , ಗಂಗಾವತಿ

ಈ ಭಾಗದ ಜನರಿಗೆ ಅನುಕೂಲವಾಗುವಂತೆಯು ನಾನಾ ರೀತಿಯ ಶಿಕ್ಷಣ ಸಂಸ್ಥೆಯನ್ನು ಪ್ರಾರಂಭಿಸಿದ್ದಾರೆ. ಶ್ರಮದಾಯಕ ದುಡಿದು ''ಕಾಯಕ ಯೋಗಿ'' ಸ್ವಾಮಿಗಳಿಂದು ಜನರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

ಬೂದಗುಂಪಾ ಗ್ರಾಮದ ವಿರಕ್ತ ಮಠವು ಶೈಕ್ಷಣಿಕ ಕೊಡುಗೆಯ ದಾರಿಯಲ್ಲಿ ನಡೆಯಲು ಪ್ರಯತ್ನಿಸುತ್ತಿದೆ. ೧೯೮೨ ರಲ್ಲಿ ಕೊಟ್ಟುರು ಸ್ವಾಮಿ ಕಲ್ಯಾಣ ಕೇಂದ್ರದ ವತಿಯಿಂದ ಶ್ರೀ ಹುಚ್ಚೇಶ್ವರ ಕನ್ನಡ ಪ್ರಾಥಮಿಕ ಶಾಲೆಯನ್ನು ಪ್ರಾರಂಭಿಸಿದ್ದಾರೆ. ಈ ಗ್ರಾಮದ ಬಡ ಮಕ್ಕಳಿಗೆ ಈ ಶಿಕ್ಷಣ ಸಂಸ್ಥೆಯಿಂದ ತುಂಬಾ ಅನುಕೂಲವಾಗಿದೆ. ಅಲ್ಲಿ ಬಡ ಮಕ್ಕಳ ವಸತಿ ಶಾಲೆಯನ್ನು ತೆರೆಯಲು ಪ್ರಯತ್ನಿಸುತ್ತಿದ್ದಾರೆ. ಯಲಬರ್ಗಾ

ನಗರದ ಶ್ರೀ ಸಿದ್ಧರಾಮೇಶ್ವರ ಸಂಸ್ಥಾನ ಹಿರೇಮಠ ಶೈಕ್ಷಣಿಕ ಪ್ರಗತಿಯತ್ತ ಕಾಮಗಾರಿನೊಂದಿಗೆ ಪ್ರಯತ್ನ ನಡೆಸಿದೆ. ೧೯೮೭ ರಲ್ಲಿ ಶ್ರೀ ಸಿದ್ಧರಾಮೇಶ್ವರ ವಿದ್ಯಾಪೀಠವನ್ನು ಪ್ರಾರಂಭಿಸಲಾಗಿದೆ. ಇವರ ವತಿಯಿಂದ ಶ್ರೀ ಸಿದ್ಧರಾಮೇಶ್ವರ ಪೂರ್ವ ಪ್ರಾಥಮಿಕ ಶಾಲೆ, ಪ್ರಾಥಮಿಕಶಾಲೆ, ಹಾಗೂ ಪ್ರೌಢ ಶಾಲೆಗಳನ್ನು ಪ್ರಾರಂಭಿಸಿದ್ದಾರೆ. ಈ ಗ್ರಾಮದ ಮಹಿಳೆಯರ ಸಲುವಾಗಿ ಹೊಲಿಗೆ ತರಬೇತಿ ಕೇಂದ್ರವನ್ನು ಸ್ಥಾಪಿಸಿದ್ದಾರೆ. ಅಲ್ಲದೆ ಶ್ರೀ ಮಠದಲ್ಲಿ ಪ್ರಸಾದ ವಸತಿ ನಿಲಯವನ್ನು ತೆರೆಯಲಾಗಿದೆ.

ಹೀಗೆ ಕೊಪ್ಪಳ ಜಿಲ್ಲೆಯ ಮುಂತಾದ ವೀರಶೈವ ಮಠಗಳು ಶೈಕ್ಷಣಿಕ ಕ್ಷೇತ್ರದಲ್ಲಿ ತಮ್ಮ ವ್ಯಾಪ್ತಿಯನ್ನು ಪಸರಿಸಿದೆ. ಮುಂಡರಗಿ ಮೃಡಗಿರಿಯ ಮಹಾ ಸಂಸ್ಥಾನ ಮಠವು ಧಾರ್ಮಿಕ ಚಟುವಟಿಕೆಗಳೊಂದಿಗೆ ಶೈಕ್ಷಣಿಕ ರಂಗದಲ್ಲಿ ಕಾರ್ಯಪ್ರವೃತ್ತಿಯಾಗಿದೆ. ನೂತನ ಶ್ರೀಗಳವರ ಮಠದಲ್ಲಿ ಉಚಿತ ಪ್ರಸಾದ ನಿಲಯವನ್ನು ನಡೆಸುತ್ತಿದ್ದಾರೆ. ಈ ಜಿಲ್ಲೆಯ ವಿದ್ಯಾರ್ಥಿಗಳಿಗೆ ಇಂದು ಅನುಕೂಲಕರವಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಕುದುರೆಮೋತಿ ಗ್ರಾಮದ ಶ್ರೀ ಜಗದ್ಗುರು ಸಂಸ್ಥಾನ ಮೈಸೂರು ವಿರಕ್ತ ಮಠವು, ಹಿಂದಿನ ಶ್ರೀ ವಿಜಯ ಮಹಾಂತ ಸ್ವಾಮಿಗಳ ಕಾಲದಲ್ಲಿ ಉತ್ತರೋತ್ತರವಾಗಿ ಬೆಳೆದು ನಿಂತಿದೆ. ಅಂದು ಸೂಡಿ ಗ್ರಾಮದಲ್ಲಿ ಪೂರ್ವ ಪ್ರಾಥಮಿಕ ಶಾಲೆ ಹಾಗೂ ಪ್ರೌಢ ಶಾಲೆಯನ್ನು ಪ್ರಾರಂಭಿಸಿದ್ದಾರೆ. ಅಲ್ಲದೆ ಕಿರಿಯ ಪದವಿ ಪೂರ್ವ ಮಹಾವಿದ್ಯಾಲಯವನ್ನು ಸ್ಥಾಪಿಸಿ, ಈ ಭಾಗದ ಜನರಿಗೆ ಶಿಕ್ಷಣದ ಸೌಲಭ್ಯವನ್ನು ಒದಗಿಸಿಕೊಟ್ಟಿದ್ದಾರೆ. ಅಲ್ಲದೆ ಶ್ರೀ ಮಠದಲ್ಲಿ ಉಚಿತ ಪ್ರಸಾದ ನಿಲಯವನ್ನು ಪ್ರಾರಂಭಿಸಿದ್ದಾರೆ. ಜನರು ಉನ್ನತ ಮಟ್ಟದ ಶಿಕ್ಷಣ ಪಡೆಯುವಂತೆ ಸಹಕಾರಿಯಾಗಿದ್ದಾರೆ. ಇವರದೆಯಾದ ಇಳಕಲ್ ಗುಡ್ಡ, ಹನುಮಸಾಗರ, ಗಾಣಾದಾಳಗಳಲ್ಲಿ ಉಚಿತ ಪ್ರಸಾದದ ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟು ಸಾವಿರಾರುಬಡ ವಿದ್ಯಾರ್ಥಿಗಳು ಶಿಕ್ಷಣ ಕಲಿಯಲು ಪ್ರೇರಣೆ, ಹಾಗೂ ಪ್ರೋತ್ಸಾಹ ನೀಡುತ್ತಿದ್ದಾರೆ.

ಹೀಗೆ ಕೊಪ್ಪಳ ಜಿಲ್ಲಾ ನಗರದ ವ್ಯಾಪ್ತಿಯಲ್ಲಿ ಬರುವ ವೀರಶೈವ ಮಠಗಳಾದ ಗುಡ್ಡದೂರು ಶ್ರೀ ದೊಡ್ಡ ಬಸವೇಶ್ವರ ಹಿರೇಮಠ, ಹೆಬ್ಬಾಳ ಶ್ರೀ ಬೋಳಾಡಿ ಬಸವೇಶ್ವರ ಸಂಸ್ಥಾನ ಮಠ, ಅಂಕುಲಿ ಹಿರೇಮಠ, ಕುಷ್ಟಗಿಯ ಶ್ರೀ ಮದ್ದಾನೇಶ್ವರ ಹಿರೇಮಠ, ನಿಡಸೋಸಿ ಹಿರೇಮಠ, ಬೆದವಟ್ಟಿ ಬಳಗೇರಿ ಹಿರೇಮಠ . . . . ಮುಂತಾದ ಮಠಗಳಲ್ಲಿ ಶೈಕ್ಷಣಿಕ ಸಂಸ್ಥೆಯನ್ನು ತೆರೆದು ಅದರಡಿಯಲ್ಲಿ ಶಾಲಾ ಕಾಲೇಜು ಹಾಗೂ ಉಚಿತ ಪ್ರಸಾದ ನಿಲಯಗಳನ್ನು ಪ್ರಾರಂಭಿಸಿ ಸಂಸ್ಕೃತ ವೇದ ಸಂಗೀತ ಪುರಾಣ ಶಾಸ್ತ್ರಗಳನ್ನು ಬೋಧಿಸುತ್ತಿದ್ದರು. ಈ

ಭಾಗದ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಸೌಲಭ್ಯಗಳನ್ನು ಕಲ್ಪಿಸಿ ವೀರಶೈವ ಮಠಗಳು ಸಾಮೂಹಿಕವಾಗಿ ಮಹತ್ವ ಪಾತ್ರವಹಿಸುವಂತಿವೆ.

**ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕೊಡುಗೆ**

ಮಠ ಮತ್ತು ಸಾಹಿತ್ಯಕ್ಕೆ ನಿಕಟವಾದ ಸಂಬಂಧವಿದೆ. ಮಠ ಮತ್ತು ಸಾಹಿತ್ಯಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಪ್ರಾಚೀನ ಕಾಲದಲ್ಲಿ ವೀರಶೈವ ಮಠಗಳು ಸಾಹಿತ್ಯಭಿವೃದ್ಧಿಗೆ ಶ್ರಮಿಸುತ್ತಿದ್ದುದು ಕಂಡು ಬರುತ್ತದೆ. ತಾಡೋಲೆಗಳನ್ನು ಶಾಸನಗಳನ್ನು ಶರಣರ ವಚನಗಳ ಕಟ್ಟುಗಳು ಸುರಕ್ಷಿತವಾಗಿ ಕಾಪಾಡಿಕೊಂಡು ಬರುತ್ತಿದ್ದವು. ಮಠಗಳು ಇಂಥಹ ಕಾರ್ಯಗಳನ್ನು ಕೈಗೊಳ್ಳದಿದ್ದರೆ ಕನ್ನಡ ಸಾಹಿತ್ಯದಲ್ಲೊಂದಾದ ವಚನ ಸಾಹಿತ್ಯವು ಉಳಿಯುತ್ತಿರಲಿಲ್ಲ. ರಾಜ್ಯದಲ್ಲಿಯೇ ಅಲ್ಲದೆ ದೇಶದಲ್ಲಿಯೇ ವೀರಶೈವ ಮಠಗಳಿಗೆ ಶ್ರೇಷ್ಠವಾದ ಸ್ಥಾನವಿದೆ. ಅಲ್ಲದೆ ಕೆಲವು ಮಠಗಳ ಮಠಾಧೀಶರು ಕವಿಗಳಾಗಿ,ಸ್ವತಹ ವಚನ ರಚನೆ ಮಾಡುತ್ತಿದ್ದರು. ಕಾವ್ಯ ಕಥೆ ಕಾದಂಬರಿಗಳನ್ನು ಬರೆಯುತ್ತಿದ್ದರು. ಇಂದಿಗೂ ಹಲವಾರು ಮಠಾಧೀಶರು ರಚಿಸಿದ ಕೃತಿಗಳು ದೊರೆಯುತ್ತವೆ.

"ಬಹುಪಾಲು ಕನ್ನಡ ಸಾಹಿತ್ಯ ಮಠ – ಮಣ್ಯಗಳ ಪರಿಸರದಲ್ಲಿಯೇ ಸೃಷ್ಟಿಗೊಂಡಿತ್ತೆಂದು ಹೇಳಬಹುದು."[೬೬] ತೋಂಟದ ಸಿದ್ದಲಿಂಗ ಯತಿಗಳು ವಚನಗಳನ್ನು ರಚನೆ ಮಾಡಿದ್ದು ಕಾಣುತ್ತೇವೆ. ಅಲ್ಲದೆ ಷಣ್ಮುಖ ಶಿವಯೋಗಿಗಳು ಶ್ರೇಷ್ಠ ವಚನಕಾರರಾಗಿದ್ದರು. ಶೂನ್ಯ ಸಂಪಾದನೆ ಎಂಬ ವಿಶಿಷ್ಟ ಪೂರ್ಣವಾದ ಕೃತಿಯನ್ನು ಕನ್ನಡ ಸಾಹಿತ್ಯಕ್ಕೆ ನೀಡಿದ ಮಠಾಧೀಶರು. ಹುಬ್ಬಳ್ಳಿಯ ಮೂರು ಸಾವಿರ ಮಠದ ಶ್ರೀಗಳಾದ ಡಾ: ಜ. ಚ. ನಿ. ಹಾಗೂ ಮುಂಡರಗಿಯ ಅನ್ನದಾನೇಶ್ವರ ಮಹಾಸ್ವಾಮಿಗಳು ಹೀಗೆ ಹಲವಾರು ಮಠಾಧೀಶರು ಸ್ವತಃ ಸಾಹಿತ್ಯಿಕಾಭಿವೃದ್ಧಿಗೆ ತೊಡಗಿದ್ದರು. " ಮಠ ದೇವಾಲಯ ಬಸದಿ ಮುಂತಾದ ನೆಲೆಗಳಲ್ಲಿ ವಾಸಿಸುತ್ತಿದ್ದ ಇಲ್ಲವೆ ಚಾತುರ್ಮಾಸವನ್ನು ಚರಿಸುತ್ತಿದ್ದ ಯತಿಗಳು, ಸನ್ಯಾಸಿಗಳು, ಮಠದೊಡೆಯರು ತಮ್ಮ ಸಾರ್ಥಕವಾದ ಕಾಲಾಯಪನೆಗಾಗಿಯೂ ಮತ್ತು ಬರವಣಿಗೆಯೂ ನಿಷ್ಠಾ ಪೂರ್ಣವಾಗಿ ಸಾಧಿಸಬೇಕಾದ ಒಂದು ಕಲೆಯೆಂಬ ಭಾವನೆಯಿಂದಲೂ ಹಸ್ತ ಪ್ರತಿಗಳ ಲೇಖನ ಕಾರ್ಯವನ್ನು ಕೈಗೊಳ್ಳುತ್ತಾ ಬಂದಿರುವುದು ಸರ್ವ ಸಾಮಾನ್ಯವಾಗಿದ".[೬೭] ಮಠಗಳಲ್ಲಿ ಇನ್ನೂ ಸಹ ಸಹಸ್ರ ಸಂಖ್ಯೆಯಲ್ಲಿ ಹಸ್ತಪ್ರತಿಗಳು ಹಳೆಯ ಧಾರ್ಮಿಕ ಗ್ರಂಥಗಳು ಹೇರಳವಾಗಿ ಲಭಿಸುತ್ತವೆ.

" ಸೃಜನ ಸಾಹಿತ್ಯದಲ್ಲಿ ವಚನ ಸ್ವರ ವಚನ ಅನುಭಾವಗೀತೆ ಮುಂತಾದವುಗಳು ವೀರಶೈವ ಧರ್ಮ, ತತ್ವ ವಿವೇಚನೆ ವಿಮರ್ಶೆ ಸಂಶೋಧನೆಗಳು ಇದರಿಂದ ರಚಿತವಾದ ಸಾಹಿತ್ಯ ವೀರಶೈವ ತತ್ವಾರ್ಥ ವಿವೇಚನೆ ಕೃತಿ ವಿಮರ್ಶೆ, ಟಿಕೆ ಇಂತಹ ಸಾಹಿತ್ಯಿಕ ಚಟುವಟಿಕೆಗಳಿಗೆ ವಿಫಲಾದ ವೀರಶೈವ ಮಠಗಳು ಒಂದು ಕಾಲಕ್ಕೆ ಇದ್ದವು''.[೭೯] ಪ್ರತಿಯೊಂದು ಸಾಹಿತ್ಯಿಕ ಘಟ್ಟದಲ್ಲಿ ವೀರಶೈವ ಮಠಗಳು ಅಮೂಲ್ಯವಾದ ಪಾತ್ರವನ್ನು ವಹಿಸಿದವು. ಮಠಾಧೀಶರು ಜ್ಞಾನದ ಖಣಿಯಾಗಿದ್ದರು. ಆದರೆ ಇಂದು ಕೆಲವೊಂದು ಮಠಗಳಲ್ಲಿ ಸಾಹಿತ್ಯ ಉಳಿದಿರುವುದು ಕಂಡು ಬರುತ್ತದೆ. ಸಾಹಿತ್ಯಾಸಕ್ತಿ ಕಡಿಮೆಯಾಗಿ ರಾಜಕೀಯದಲ್ಲಿ ತ'ಮ್ಮ ಪಾತ್ರ ವಹಿಸುತ್ತದೆ.

''ಧಾರ್ಮಿಕ ಗ್ರಂಥಗಳ ಲೇಖನ ಕಾರ್ಯ ಧರ್ಮದ ಕಾರ್ಯದ ಒಂದು ಪವಿತ್ರ ಭಾಗವೆಂದೇ ವೀರಶೈವರು ಭಾವಿಸಿದರು. ಈ ಎಲ್ಲ ಪ್ರವೃತ್ತಿಫಲವೆಂಬಂತೆ ಹಸ್ತಪ್ರತಿ ಭಂಡಾರಗಳು ವೀರಶೈವ ಮಠಗಳಲ್ಲಿ ಉದ್ದಕ್ಕೂ ಬೆಳೆದು ಬಂದವು''.[೮೦] ಮಠಗಳಲ್ಲಿ ಹೆಚ್ಚಾಗಿ ಧಾರ್ಮಿಕ ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತವೆ. ಅದ್ದರಿಂದ ಧರ್ಮದ ಬೆನ್ನೆಲುಬಾದ ಗ್ರಂಥಗಳು ಕಾಪಾಡಿಕೊಂಡು ಬರುವ ಹೊಣೆ ಮಠಗಳದ್ದು. ಕವಿಗಳಿಗೆ ಸಂಶೋಧಕರಿಗೆ ಸಾಹಿತ್ಯಿಗಳಿಗೆ ಕಲಾವಿದರಿಗೆ ಮಠಗಳು ಹೆಚ್ಚಿನ ಗೌರವದಿಂದ ಕಾಣುತ್ತಿದ್ದವು ಅಲ್ಲದೆ ಕವಿಗಳಿಂದ ಧಾರ್ಮಿಕ ಗ್ರಂಥಗಳನ್ನು ಬರೆಯಿಸಿ, ಅದನ್ನು ಪ್ರಕಟಿಸುವ ಕಾರ್ಯ ಮಠಗಳಿಂದಾಗುತ್ತಿತ್ತು. ಕವಿಗಳೊಂದಿಗೆ ಸಂಪರ್ಕಗಳನ್ನು ಹೊಂದಿಕೊಂಡು ಬರುತ್ತಿದ್ದರು. ಮಠ –ಮಾನ್ಯಗಳ ಪರಿಸರದಲ್ಲಿಯೇ ಎಷ್ಟೋ ಕವಿಗಳು ಬೆಳಕಿಗೆ ಬಂದಿರುವುದು ಕಾಣುತ್ತವೆ. ಕವಿಗಳು ಬರೆದ ಹಸ್ತ ಪ್ರತಿಗಳು ಪ್ರಕಟಿಸುವ ಕಾರ್ಯ ಮಠಗಳಿರುತ್ತಿತ್ತು. ಹಸ್ತ ಪ್ರತಿಗಳು ಧಾರ್ಮಿಕತೆಗೆ ಸಂಬಂಧಿಸಿರಬೇಕು. ಅಲ್ಲದೆ ಅಧ್ಯಾತ್ಮಿಕತೆಗೆ ಸಂಬಂಧಪಟ್ಟಿರುವಂತಿರಬೇಕಾಗುತ್ತಿತ್ತು.

ಪ್ರಾಚೀನ ವೀರಶೈವ ಮಠಗಳಲ್ಲಿ ಸಾಹಿತ್ಯದ ಕಲೆಯನ್ನು ಕಲಿಸಲಾಗುತ್ತಿತ್ತು. ಮಠಗಳ ಮುಖಾಂತರ ಎಷ್ಟೋ ವಿದ್ವಾಂಸರು ಪ್ರಖ್ಯಾತಿ ಪಡೆದುದು ಎದ್ದು ಕಾಣುತ್ತದೆ. ''ಶಿವಲಿಂಗ ಪೂಜಾಪುಳಕ ಸಸ್ಯಸರಸ ಕೇದಾರ ಸ್ಥಾನಮುಂನೈಷ್ಠಿಕ ಬ್ರಹ್ಮಚರ್ಯ, ಶಿವಮುನಿ ಜನಾನುಷ್ಠಾನ ಸಿಷ್ಠಿತ ಸ್ಥಾನಮುಂ ಸಾಂಗಲಿರುಗ್ಯಜ ಸ್ಯಾಮರ್ಥವ ಚತುರ್ವೇದ ಸ್ವಾಧ್ಯಾಯ ಸ್ಥಾನಮುಂ ಕುಮಾರ ಪ್ರಣನಿಯ, ಶಾಕಟಾಯನ, ಶಬ್ದಾನುಶಾಸನಾದಿ, ವ್ಯಾಕರಣ, ವ್ಯಾಖ್ಯಾನ ಸ್ಥಾನಮುಂ ನ್ಯಾಯವೇಶೇಷಿಕ ಮೀಮಾಂಸಾ ಸಂಖ್ಯಾ ಬಾದ್ಧಾದಿ, ಷಡುದರ್ಶನ ವ್ಯಾಖ್ಯಾನ ಸ್ಥಾನಮು, ಅಷ್ಟದಶ, ಪುರಾಣ, ಧರ್ಮಶಾಸ್ತ್ರ , ಸಕಳ ಕಾವ್ಯ, ನಾಟಕ, ನಾಟಕಾದಿ ವಿವಿಧ ವಿದ್ವಾಂಸ್ಥಾನಮಂ ದೀನಾನಾಥ ಪಂಗ್ವಂಧ ಬಧಿರ ಕಥಕ ಗಾಯಕ, ವಾದಕ, ವಾಂಶಿಕ, ನರ್ತಕ,

ವೈತಾಳಿಕ, ನಗ್ನಭಗ್ನ ಕಪಣಕ್ಕೆ ಕದಂಡಿ ತ್ರಿದಂಡಿ, ಹಂಸ ಪರಮಹಂಸಾದಿ, ವಾನಾದೇಶ ಭಿಕ್ಷುಕ ಜನಾನಿವಾರ್ಯನ್ನದಾನ ಸ್ಥಾನಮುಂ''.[೮೧] ಹೀಗೆ ಮಠಗಳಲ್ಲಿ ವಿವಿಧ ರೀತಿಯ ಜನಪದ ಕಲೆ, ಕುಶಲ ಕಲೆ, ಸಂಗೀತ, ಸಾಹಿತ್ಯ ಕಲೆಗಳನ್ನು ಕಲಿಸಲಾಗುತ್ತಿತ್ತು. ಸಾಹಿತ್ಯ ಕಲೆಗಳಲ್ಲಿ ಪ್ರವೀಣರಾದವರಿಂದ ಧಾರ್ಮಿಕ ಗ್ರಂಥಗಳನ್ನು ಬರೆಯಿಸುತ್ತಿದ್ದರು. ವೀರಶೈವ ಮಠಗಳಲ್ಲಿ ವೀರಶೈವರಿಗಷ್ಟೇ ಅಲ್ಲ, ವೀರಶೈವೇತರ ಕವಿಗಳಿಗೂ ಕಲಾವಿದರಿಗೂ, ಸಮಾನ ಅವಕಾಶ ಸ್ಥಾನಮಾನ ಕೊಡುತ್ತಿದ್ದರು. ಅಲ್ಲಿ ಯಾವುದೇ ರೀತಿಯ ಭೇದ ಭಾವನೆ ಕಂಡು ಬರುತ್ತಿರಲಿಲ್ಲ.

''ಜಂಗಮಕಕ್ಕೆ ಮಾತಾ ಪಿತರಿಲ್ಲ
ಜಂಗಮಕ್ಕೆ ಜಾತಿ ಬಂಧುಗಳಿಲ್ಲ
ಜಂಗಮಕ್ಕೆ ನಾಮ ರೂಪಗಳಿಲ್ಲ
ಜಂಗಮಕ್ಕೆ ಕುಲಗೋತ್ರಗಳಿಲ್ಲ
ಜಂಗಮಕ್ಕೆ ಮಲ ಮಾಯೆಗಳಿಲ್ಲ
ನೋಡಾ ಅಖಂಡೇಶ್ವರಾ.''[೮೨]

ಜಂಗಮ ಜ್ಯೋತಿಯಾದ ಷಣ್ಮುಖ ಶಿವಯೋಗಿಗಳ ಒಂದು ವಚನದಲ್ಲಿ ಜಂಗಮನಲ್ಲಿರಬೇಕಾದ ಜೀವನ ಮೌಲ್ಯದ ತತ್ವಗಳನ್ನು ತಿಳಿಸಿದ್ದಾರೆ. ರಕ್ತ ಸಂಬಂಧ ತೊರೆದಾಗಲೆ ಭಕ್ತಿ ಸಂಬಂಧ ಅಳವಡುವುದು. ಜಂಗಮರಲ್ಲಿ ಇಡೀ ಮಾನವ ಕುಲವೆ ಒಂದು ಎನ್ನುತ್ತ, ವಿಶ್ವ ಬಂಧುತ್ವ ಎಂದು ಎಲ್ಲರನ್ನು ಪ್ರೀತಿ ವಿಶ್ವಾಸಗಳಿಂದ ಕಾಣುತ್ತಾರೆ.

''ಸಾಹಿತ್ಯ ಕ್ಷೇತ್ರದಲ್ಲಿ ವೀರಶೈವ ಮಠಗಳ ಸೇವೆ ವಿಶಿಷ್ಟ ಪೂರ್ಣ ಮಾದರಿಯಾಗಿದೆ. ವೀರಶೈವ ಅಧ್ಯಯನ ಸಂಸ್ಥೆ ದಿ. ೧೯೭೭ ರಲ್ಲಿ ಸ್ಥಾಪಿತವಾಗಿ ಅಲ್ಲಿಂದ ಈವರೆಗೆ ವೀರಶೈವ ಪುಣ್ಯಪುರುಷರ ಮಾಲಿಕೆಯಲ್ಲಿ ೧೧೨ ಅಪ್ರಕಟಿತ ಗ್ರಂಥ ಮಾಲೆಯಲ್ಲಿ ೫೨ ಮೌಲಿಕ ಗ್ರಂಥಗಳ ಪ್ರಕಟಣೆ ಇವುಗಳಿಗಾಗಿ ಮಠ ವಿನಿಯೋಗಿಸಿದ ಹಣ ೨ ಲಕ್ಷ ರೂ. ಗಳು ಇದೀಗ ೧೨ ಲಕ್ಷ ರೂಗಳು ೧೨ಬೃಹತ್ ಸಂಪುಟಗಳ ಆರು ಸಾವಿರ ಪುಟಗಳ ಸಮಗ್ರ ವೀರಶೈವ ವಿಶ್ವಕೋಶವನ್ನು ಸಿದ್ಧಪಡಿಸುವ ಯೋಜನೆಯನ್ನು ಕಾರ್ಯಗತಗೊಳಿಸಲಾಗುತ್ತಿದೆ. ಹೀಗೆ ತೋಂಟದಾರ್ಯ ಮಠ ಮಾನವ ಕುಲದ ಏಳ್ಗೆಗಾಗಿ ಎಲ್ಲ ನಿಟ್ಟಿನಿಂದಲೂ ಮಾಡುತ್ತಿರುವ ಸೇವೆ ಶ್ಲಾಘನೀಯವಾದುದು''.[೮೩] ವೀರಶೈವ ಮಠಗಳಲ್ಲಿ ಸಾಹಿತ್ಯಿಕ

ಸೇವೆಗಳು ತಮ್ಮ ಮಿತಿ ಮಿರಿ ಮಾಡುತ್ತಿರುವುದು ಕಂಡು ಬರುತಿತ್ತು. ಆದರೆ, ಇಂದು ಮರೆ ಮಾಚಿ ಹೋಗುವ ಸಂದರ್ಭಗಳು ಬರುತ್ತಿವೆ.

ಶಿವಶರಣರು ಹೆಚ್ಚಾಗಿ ಸಾಹಿತ್ಯಕ್ಕೆ ಪ್ರೇರಣೆ ಹಾಗೂ ಪ್ರೋತ್ಸಾಹಗಳೆರಡನ್ನು ನೀಡಿದರು. ಅದರಂತೆ ಮಠಾಧೀಶರು ಕನ್ನಡ ಸಾಹಿತ್ಯಕ್ಕೆ ಹೆಚ್ಚಿನ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಕೆಲವೊಂದು ಮಠಗಳು ಬಿಟ್ಟರೆ ಉಳಿದ ಮಠಗಳೆಲ್ಲ ಶಿಕ್ಷಣ ಸಂಸ್ಥೆಯು ಸ್ಥಾಪಿಸಿಸುತ್ತಿವೆ. ಸಾಹಿತ್ಯಿಕ ಸೇವೆಯಲ್ಲಿ ಹೆಸರುವಾಸಿಯಾಗಿದೆ. ಸಾಹಿತ್ಯ ಸೇವೆ ಅದೊಂದು ಅಳಸಲಾರದ ಸಾಹಿತ್ಯವಾಗಿದೆ. ಕರ್ನಾಟಕದಲ್ಲಲ್ಲದೆ ನೆರೆ ರಾಜ್ಯಗಳಲ್ಲಿಯೂ ಅವುಗಳ ಕೀರ್ತಿ ಹರಡುತ್ತದೆ. ಶಿವಶರಣರು ಹೇಳಿದಂತೆ ,

"ಶಿವಶರಣರ ಸಾಹಿತ್ಯ ಸೃಷ್ಟಿ
ಆತ್ಮ ತುಷ್ಟಿಗೆ ಅಹಾರ ನೋಡಯ್ಯ
ಶಿವಶರಣರ ವಚನಾಮೃತ
ಭಾವ ಪುಷ್ಟಿಗೆ ರಸಪಾಕ ನೋಡಯ್ಯ
ಶಿವ ಶರಣರ ಶಿವ ಸಿದ್ಧಾಂತ
ಶಿವೋಪಾಸಕರಿಗೆ ಕಲ್ಪತರು ನೋಡಾ
ಶಿವಶರಣರ ಶಿವಾನುಭಾವ
ಸದಭಕ್ತರಿಗೆ ಸದ್ದರ್ಪಣ ನೋಡಾ
ಭೃಲತಾ ಪುರೀಶ ಕೃರ್ತ ಜಗದ್ಗುರು
ಗುರುಸಿದ್ದೇಶ್ವರ ನಿನ್ನ ಶರಣರು
ಬರೆದುದು ಬರೆದದ್ದು
ಏನಿದ್ದರೂ ಹಾಲ್ ಜೇನು ಸವಿದಂತೆ." (ಚಿತ್ರುಮನ್)

ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಕ್ಷೇತ್ರದ ಶಿರೋರತ್ನರಾದ ಮಠಾಧೀಶರು ಸಾಹಿತ್ಯ ರಕ್ಷಕರು ಕವಿಗಳು ವಿದ್ವಾಂಸರು ಆಗಿದ್ದಾರೆ. ಹೈದ್ರಾಬಾದ – ಕರ್ನಾಟಕ ಭಾಗದಲ್ಲಿ ವೀರಶೈವ ಮಠಗಳು ಸಾಹಿತ್ಯಿಕ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆ ಅನುಪಮವಾಗಿದೆ. ಮಠದ ವತಿಯಿಂದ ಪ್ರಕಟಿಸಿದ ಸಾಹಿತ್ಯಿಕ ಕೃತಿಗಳೇ ಆಧಾರವಾಗಿದೆ.

ಭಾಲ್ಕಿ ಹಿರೇಮಠದಲ್ಲಿ ೧ನೇ ಡಿಸೆಂಬರ ೧೯೭೧ ರಲ್ಲಿ " ಶಾಂತಿ ಕಿರಣ"ಎಂಬ ವಾರ ಪತ್ರಿಕೆ ರೂಪದಲ್ಲಿ ಪ್ರಪ್ರಥಮವಾಗಿ ಪ್ರಕಟಗೊಂಡಿದೆ. ಬಸವ ಧರ್ಮ ಪ್ರಸಾರ ಸಂಸ್ಥೆ ಹಿರೇಮಠ ಸಂಸ್ಥಾನ ಭಾಲ್ಕಿ" ಎಂಬ ಹೆಸರಿನ ಮೇಲೆ ಈ ಪತ್ರಿಕೆಯನ್ನು ಪ್ರಕಟಿಸಿದರು. ಇದು ಮುಂದು ಮಾಸಿಕ ಪತ್ರಿಕೆಯಾಗಿ ಪರಿವರ್ತನೆಗೊಂಡಿತು. ನಂತರ ದ್ವೆ ಮಾಸಿಕ ರೂಪದಲ್ಲಿ ಪ್ರಕಟಣೆಗೊಂಡಿತು. ಅಂದು ಈ ಸಂಚಿಕೆಯು ಕನ್ನಡಿಗರಿಗೆ ತುಂಬ ಮೆಚ್ಚುಗೆಯ ಸಂಚಿಕೆಯಾಗಿ ಹೊರ ಹೊಮ್ಮುತ್ತಿದೆ. '.ಕರ್ನಾಟಕದ ಗಡಿನಾಡಿನಲ್ಲಿ ಕನ್ನಡ ಬಾವುಟವನ್ನು ಹೆಮ್ಮೆಯಿಂದ ಎತ್ತಿ ಹಿಡಿದ ಪತ್ರಿಕೆ ಶಾಂತಿ ಕಿರಣ, ನಾಲ್ಕು ಪುಟದ ಪುಟ್ಟ ಹೃದಯದಲ್ಲಿ ಎಷ್ಟೊಂದು ವೈವಿಧ್ಯ ಕವನ, ಕಥೆ ಪ್ರಬಂಧ, ವಿಮರ್ಶೆ ಸಾಹಿತ್ಯಿಕ ವ್ಯಕ್ತಿ ಪರಿಚಯ ಚುಟುಕು ಲೋಕ ಹೇಳಿದ್ದು–ಕೇಳಿದ್ದು ಪುಸ್ತಕಾವಲೋಕನ, ಜಿಲ್ಲೆಯ ಸುದ್ದಿಗಳ ವರದಿ ಮತ್ತು ವಿವಿಧ ಜಾಹಿರಾತುಗಳಿಂದ ಜನರ ಮನಸ್ಸನ್ನು ಸೂರೆಗೊಂಡಿದೆ ಎಂಬ ಮಾತು ಸತ್ಯವಾಗಿದೆ, ಎಂದು ನಾಲ್ಕನೆ ಡಿಸೆಂಬರ ೧೯೭೨ ರಂದು ಈ ಪತ್ರಿಕೆಯ ಸಂಪಾದಕರಾದ ಡಾಃ ಜಿ. ಬಿ. ವಿಸಾಜಿಯರು ತುಂಬ ಹೆಮ್ಮೆಯಿಂದ ಹೇಳಿದ್ದಾರೆ. ಅಂದು ಈ ಪತ್ರಿಕೆಗೆ ತುಂಬಾ ಗೌರವಸ್ಥಾನವಿತ್ತು. ವಿವಿಧ ವಿದ್ವಾಂಸರಿಂದ ಲೇಖನಗಳನ್ನು ಆಯ್ದುಕೊಂಡು ಪ್ರಕಟಿಸುತ್ತಿದ್ದರು.

| | ಬಸವ ಧರ್ಮ ಪ್ರಸಾರ ಸಂಸ್ಥೆ ಕೃತಿಗಳು | ಹಿರೇಮಠ ಸಂಸ್ಥಾನ ಭಾಲ್ಕಿಯ ಲೇಖಕರುಃಸಂ | ಪ್ರಕಟಣೆಗಳು ವರ್ಷ |
|---|---|---|---|
| ೧. | ವೈರಾಗ್ಯ ನಿಧಿ ಅಕ್ಕಮಹಾದೇವಿ (ಭಜನ ಮಾಲಿಕೆ) | ರಾಮಲಿಂಗಪ್ಪ ಅಂಬುಲಗೆ | ೧೯೬೯ |
| ೨. | ಸಾಮೂಹಿಕ ಪ್ರಾರ್ಥನೆ | ಎಂ. ಬಂಡೆಪ್ಪಾ | ೧೯೭೮ |
| ೩. | ಷಣ್ಮುಖ ಶಿವಯೋಗಿಗಳು (ನಾಟಕ) | ಪೂಜ್ಯ ಶ್ರೀ ವಿ. ಸಿದ್ರಾಮಣ್ಣಾ | ೧೯೮೪ |
| ೪. | ಶಿವಶರಣ ರನ್ನಯ್ಯಾ (ನಾಟಕ) | ಪೂಜ್ಯ ಶ್ರೀ ವಿ. ಸಿದ್ರಾಮಣ್ಣಾ | ೧೯೮೩ |
| ೫. | ಇಷ್ಟಲಿಂಗ ಪೂಜಾ ವಿಧಾನ | ಪೂಜ್ಯ ಶ್ರೀ ಬಸವಲಿಂಗ ಪಟ್ಟದ್ದೇವರು | ೧೯೮೪ |
| ೬. | ಇಷ್ಟಲಿಂಗ ಪೂಜಾ ವಿಧಾನ ಮರಾಠಿ ಅನುವಾದ | ವಿಠಲ ರುದ್ರಪ್ಪ ಬಿರಾದಾರ | ೧೯೮೫ |
| ೭. | ಶ್ರೀ ಬಸವೇಶ್ವರ ಸಹಸ್ರ ನಾಮಾವಳಿ | | ೧೯೮೫ |
| ೮. | ಸಾಮೂಹಿಕ ಪ್ರಾರ್ಥನೆ ಅನುವಾದ ಮರಾಠಿ | ಪೂಜ್ಯ ಶ್ರೀ ಬಸವಲಿಂಗ ಪಟ್ಟದ್ದೇವರು ಭಾಲ್ಕಿ | ೧೯೮೯ |
| ೯. | ಲಿಂಗಾಯತ ಬಾಃ ಯೊಗ್ರಾಫಿಕ್ಸ್ | ಡಾಃ ಎಸ್. ಆರ್. ಗುಂಜಾಳ | ೧೯೮೯ |

| | | | |
|---|---|---|---|
| ೧೦. | ಚನ್ನಬಸವ ಪಟ್ಟದ್ದೇವರು | ಡಾ: ಜಿ. ಬಿ. ವಿಸಾಜಿ | ೧೯೯೦ |
| ೧೧. | ಚಿಂತನ | ಡಾ: ಜಿ. ಬಿ. ವಿಸಾಜಿ | ೧೯೯೦ |
| ೧೨. | ಚನ್ನಬಸವ | ವ್ಹಿ. ಎಸ್ ಚರಂತಿಮಠ | ೧೯೯೦ |
| ೧೩. | ಶಿವಶರಣ ಹರಳಯ್ಯ (ನಾಟಕ) | ಪೂಜ್ಯ ವಿ. ಸಿದ್ರಾಮಣ್ಣ | ೧೯೯೧ |
| ೧೪. | ಕಾಯಕ ಪರಿಣಾಮಿ | ಸಂ. ಶಾಂತರಸ ರಾಯಚೂರ ಮತ್ತು ಚನ್ನಬಸಪ್ಪ ಬೆಟ್ಟದೂರ ಲಿಂಗಣ್ಣ ಸತ್ಯಂಪೇಟೆ ಎಂ. ಬಂಡೆಪ್ಪಾ | ೧೯೯೧ |
| ೧೫. | ಬಸವೇಶ್ವರ ಅಂಬೇಡ್ಕರ | ಡಾ: ದೆ. ಜವರೇಗೌಡ | ೧೯೯೨ |
| ೧೬. | ಚನ್ನನ ಮಹಿಮೆ(ಕವನ ಸಂ) | ಶಿವರುದ್ರಯ್ಯಾ ಸ್ವಾಮಿ | ೧೯೯೩ |
| ೧೭. | ಬಸವಣ್ಣನವರ ವಚನಗಳಲ್ಲಿ ದಲಿತ ದರ್ಶನ | ವ್ಹಿ. ಎಸ್. ಚರಂತಿಮಠ | ೧೯೯೪ |
| ೧೮. | ಬಸವೇಶ್ವರ ಅಂಬೇಡ್ಕರ (ಅನುವಾದ ಮಾರಾಠಿ) | ಶಶಿಕಲಾ. ಆರ್. ಮಡಕಿ | ೧೯೯೪ |
| ೧೯. | ಬಸವೇಶ್ವರ ಆತ್ಮಕಥೆ (ಅನುವಾದ ಹಿಂದಿ) | ವಿಜಯಲಕ್ಷ್ಮೀ | ೧೯೯೫ |
| ೨೦. | ಬಸವ ಜ್ಯೋತಿ | ಪೂಜ್ಯ. ಶ್ರೀ ಬಸವಲಿಂಗ ಪಟ್ಟದ್ದೇವರು | ೧೯೯೭ |
| ೨೧. | ಕಾಯಕಯೋಗಿ ಡಾ: ಚನ್ನಬಸವ ಪಟ್ಟದ್ದೇವರು(ಅನುವಾದ ಮಾರಾಠಿ) | ಡಾ: ಶಾಲಿನಿ ಶ್ರೀಶೈಲ | ೧೯೯೮ |
| ೨೨. | ವಚನ ಸಾಹಿತ್ಯ ಚಿಂತನ ಸಾರ (ಅನುವಾದ ಹಿಂದಿ) | ಭಗವನದಾಸ ತಿವಾರಿ | ೧೯೯೮ |
| ೨೩. | ಅಕ್ಕನ ವಚನಾಮೃತ (ಅನುವಾದ ಮರಾಠಿ) | ಲಿಂ. ಜಯದೇವಿ ತಾಯಿ ಲಿಗಾಡೆ | |

ಹೀಗೆ ಶ್ರೀ ಹಿರೇಮಠದ ಸಾಹಿತ್ಯಕ ಕೊಡುಗೆಯನ್ನು ಅಮರವಾಗಿ ನೀಡಿದೆ. ಇನ್ನು ಮುಂದೆ ನೀಡುತ್ತದೆ. ಅಲ್ಲದೆ ಭಾಲ್ಕಿ ಹಿರೇಮಠದ ಶತಾಯುಷಿ ಲಿಂಗೈಕ್ಯ ಡಾ: ಮ. ಘ. ಚ. ಚನ್ನಬಸವ ಪಟ್ಟದ್ದೇವರು ಕುರಿತು ಅನೇಕ ಲೇಖಕರು ಕೃತಿಯನ್ನು ಬರೆದಿರುವದು ಕಂಡು ಬರುತ್ತದೆ. ಶ್ರೀ ಬಸವರಾಜ ಸಂಗಮದ ಅವರು ಸಂಪಾದಿಸಿದ ''ಚಂಬೆಳಕು '' ಎನ್ನುವ ಕವನ ಸಂಕಲನವಾಗಿದೆ. ಇದು ಶ್ರೀ ಚನ್ನಬಸವ ಪಟ್ಟದ್ದೇವರ ಕುರಿತು ಹೃದಯ ತುಂಬಿ ಹಾಡಿದ ಮೂವತ್ತೈದು ಕವಿಗಳ ನಲ್ವತ್ತೆರಡು ಕವನಗಳ ಗೊಂಚಲು ಇದರಲ್ಲಿವೆ.

ಡಾಃ ಚನ್ನಬಸವ ಪಟ್ಟದ್ದೇವರ ಕುರಿತು ಪ್ರಕಟವಾದ ಪ್ರಪ್ರಥಮ ಗದ್ಯ ಕೃತಿಯಾದ ''ವಿನಯ ಭಂಡಾರಿ'' ಸಂಪಾದಿತವಾಗಿದೆ. ಇದರಲ್ಲಿ ಹದಿನೆಂಟು ಲೇಖಕರ ಹದಿನೆಂಟು ಲೇಖನವನ್ನು ಒಳಗೊಂಡಿದೆ. ''ಬಸವ ಚೇತನ ಎನ್ನುವ ಶ್ರೀಗಳ ಕುರಿತ ಕೃತಿಯಾಗಿದೆ. ''ಚನ್ನನ ಮಹಿಮೆ '' ಎನ್ನುವ ಸಂಕಲನವಾಗಿದೆ. ಶ್ರೀ ವೀರಶೆಟ್ಟಿ ಬಾವುಗೆಯವರು ಬರೆದ ''ವೈರಾಗ್ಯನಿಧಿ ಲಿಂಗಾಂಗಯೋಗಿ ಶತಾಯುಷಿ ಡಾಃ ಚನ್ನಬಸವ ಪಟ್ಟದ್ದೇವರು ಎನ್ನುವ ಕೃತಿ ಪ್ರಕಟಿಸಿ ಜನರ ಕೈಗಿಟ್ಟಿದ್ದಾರೆ. ಅಲ್ಲದೆ ''ನೂತನ ವಚನಕಾರರಲ್ಲಿ ಶತಾಯುಷಿ ಡಾಃ ಚನ್ನಬಸವ ಪಟ್ಟದ್ದೇವರು'' ಎಂಬ ಸಂಪಾದಿತ ಕೃತಿಯನ್ನು ಪ್ರಕಟಿಸಿದ್ದಾರೆ.

ಅನ್ನದಾನಯ್ಯ ಪುರಾಣಿಕವರು ಬರೆದ ''ಚನ್ನಬಸವಣ್ಣ'' ಜೀವನ ಸಾಧನೆ – ಎನ್ನುವ ಕೃತಿಯ ಬರೆದು ೧೯೮೬ ರಲ್ಲಿ ಪ್ರಕಟಿಸಿದ್ದಾರೆ. ಮತ್ತು ''ಯುಗ ಪುರುಷ '' ಎನ್ನುವ ಕೃತಿಯನ್ನು ಎರೋಳಕರ. ಬಿ. ಯವರು ೧೯೯೯ ರಲ್ಲಿ ಪ್ರಕಟಿಸಿದ್ದಾರೆ. ಅಲ್ಲದೆ ಶ್ರೀಗಳವರ ಕುರಿತು ಸಂಜೀವಕುಮಾರ ಜಮ್ಮಾ ಅವರು ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ಡಾಃ ಚನ್ನಬಸವ ಪಟ್ಟದ್ದೇವರ ಜೀವನ ಸಾಧನೆ – ಎಂಬ ವಿಷಯದ ಮೇಲೆ ಎಂ. ಫಿಲ್. ಕಿರು ಪ್ರಬಂಧವನ್ನು ಕೈಗೊಂಡಿದ್ದಾರೆ. ಪಿ. ಬಸವರಾಜ ಅವರು ''ಕಮ್ಮಟದಕಾರಣಕೆ'' ಎನ್ನುವ ಕೃತಿಯನ್ನು ಪ್ರಕಟಿಸಿದ್ದಾರೆ. ''ಶ್ರೀ ಶಿವಯೋಗಿ ಚನ್ನಬಸವ '' ಎನ್ನುವ ಕೃತಿಯ ಲೇಖಕಿಯಾದ ಶ್ರೀಮತಿ ಮಲ್ಲಮ್ಮಾ ಆರ್. ಪಾಟೀಲರಾಗಿದ್ದಾರೆ. ''ಕವನ ಹೂಹಾರ'' ಎನ್ನುವ ಕೃತಿ ಶ್ರೀಮತಿ ಶಕುಂತಲಾ ಖಡ್ಕೆಯವರು ಪ್ರಕಟಿಸಿದ್ದಾರೆ. ಶ್ರೀ ಚನ್ನಯ್ಯ ಹಿರೇಮಠರವರು ಬರೆದ ''ಬಸವ ಹೃದಯ ಚನ್ನಬಸವ'' ಎನ್ನುವ ಕೃತಿ ಪ್ರಕಟಣೆ ಮಾಡಿದ್ದಾರೆ. ಪ್ರೋಃ ಸಿದ್ದಣ್ಣ ಲಂಗೋಟಿಯವರು ''ಚನ್ನಬಸವ ಪಟ್ಟದ್ದೇವರು'' ಎನ್ನುವ ಕೃತಿಯನ್ನು ಪ್ರಕಟಿಸಿದ್ದಾರೆ.

''ಕಾಯಕ ಪರಿಣಾಮಿ'' ಎನ್ನುವ ಗೌರವ ಗ್ರಂಥದಲ್ಲಿ ಕರ್ನಾಟಕ ಆಂಧ್ರಪ್ರದೇಶ ಮಹಾರಾಷ್ಟ್ರಗಳಿಂದ ವಿವಿಧ ಪ್ರಮುಖ ವಿದ್ವಾಂಸರು ಬರೆದ ಲೇಖನಗಳಿವೆ. ಹೀಗೆ ಭಾಲ್ಕಿ ಹಿರೇಮಠದ ಪ್ರಕಟಣೆಗಳಲ್ಲದೆ ವಿವಿಧ ವಿದ್ವಾಂಸರು ಪ್ರಕಟಿಸಿದ ಶ್ರೀಗಳ ಹೂಮಾಲೆಯನ್ನು ಗಮನಿಸಲಾಗಿದೆ. ಇಲ್ಲಿ ಸಾಹಿತ್ಯಿಕ ಸೇವೆ ಅನುಪಮವಾಗಿದೆ, ನೂತನ ಶ್ರೀಗಳಾದ ಪೂಜ್ಯ ಶ್ರೀಮ.ಘ.ಚ. ಬಸವಲಿಂಗ ಪಟ್ಟದ್ದೇವರು ಸಾಹಿತ್ಯಿಕದಲ್ಲಿ ತುಂಬಾ ಅಭಿರುಚಿಯುಳ್ಳವರಾಗಿದ್ದಾರೆ. ಶ್ರೀ ಮಠದಲ್ಲಿ ಧಾರ್ಮಿಕ ಹಾಗೂ ಸಾಹಿತ್ಯಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಾಹಿತಿಗಳಿಗೆ, ಯುವ ಕವಿಗಳಿಗೆ ಕಲಾವಿದರಿಗೆ, ಗುರುತಿಸಿ ಗೌರವಿಸಿ ಪ್ರೋತ್ಸಾಹಿಸುತ್ತಾರೆ. ಸರಸ್ವತಿಯ ಬಂಡಾರಕ್ಕೆ ಶ್ರೀ ಭಾಲ್ಕಿ ಹಿರೇಮಠದ ಸೇವೆ ಅನುಪಮವಾಗಿದೆ. ಸಾಹಿತ್ಯಿಕ

ಸೇವೆ ಸಲ್ಲಿಸಿ ಸಮಾಜದಲ್ಲಿ ಒಳ್ಳೆಯ ಹೆಸರುವಾಸಿಯಾಗಬೇಕೆಂದು ಹಗಲಿರುಳು ಶ್ರಮಿಸುತ್ತಾರೆ. ಧಾರ್ಮಿಕ, ಶೈಕ್ಷಣಿಕ, ಸಾಮಾಜಿಕ ಸೇವೆಗಳ ಜತೆ ಜತೆಗೆ ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಸೇವೆಯನ್ನು ಶ್ರೀ ಮಠ ಮಾಡುತ್ತಿರುವುದು ಹೆಮ್ಮೆಯ ವಿಷಯ.

ಹುಲಸೂರಿನ ಶ್ರೀ ಮಠವು ಸಾಹಿತ್ಯ ಕ್ಷೇತ್ರಗಳಲ್ಲಿ ಗಣನೀಯವಾದ ಸೇವೆಯನ್ನು ಸಲ್ಲಿಸುತ್ತಿದೆ. ಇತ್ತೀಚಿನ ಶ್ರೀಗಳಾದ ಮ.ನಿ.ಪ್ರ. ಶಿವಾನಂದ ಮಹಾ ಸ್ವಾಮಿಗಳವರು ಸಾಹಿತ್ಯದ ಕಡೆಗೆ ಹೆಚ್ಚಿನ ಗಮನವನ್ನು ಹರಿಸಿದ್ದಾರೆ. ''ವಿಶ್ವಗುರು ಬಸವ ಧರ್ಮ ಪ್ರಚಾರ ಕೇಂದ್ರ ಗುರುಬಸವೇಶ್ವರ ಸಂಸ್ಥಾನ ಮಠ ಹುಲಸೂರು'' ಎಂಬ ಪ್ರಕಾಶನವನ್ನು ತೆರೆದು ಅದರಡಿಯಲ್ಲಿ ಹಲವಾರು ಕೃತಿಗಳು ಪ್ರಕಟಿಸುತ್ತಿದ್ದಾರೆ. ''ಶಿವಾನಂದ ಸ್ವಾಮಿಗಳ ವಚನಗಳು'' ಎಂಬ ವಚನ ಸಂಕಲನದ ಗುಚ್ಛದ ಕೃತಿಯನ್ನು ೧೯೮೫ ರಲ್ಲಿ ಪ್ರಕಟಿಸಿ ಜನರ ಕೈಗಿಟ್ಟಿದ್ದಾರೆ. ಪೂಜ್ಯ ಶ್ರೀಗಳು ಸ್ವತಃ ವಚನಕಾರರಾಗಿದ್ದಾರೆ. ಇವರ ಅಂಕಿತನಾಮವಾದ ''ಶಿವಾನಂದ ಪ್ರೀಯಾ ಗುರು ಬಸವ ಪ್ರಭುವೆ'' – ಎಂಬುದಾಗಿದೆ. ಅದರ ವಚನಗಳಲ್ಲೊಂದಾದ

''ಶರಣರ ನಡೆಯಿಂದ ನಡೆಗಲಿತೆನಯ್ಯ
ಶರಣರ ನುಡಿಯಿಂದ ನುಡಿಗಲಿತೆನಯ್ಯ
ಶರಣರ ಕಾಯಕದಿಂದ ಕಾಯಕಗಲಿತೆನಯ್ಯ
ಶರಣರ ದಾಸೋಹದಿಂದ ದಾಸೋಹಗಲಿತೆನಯ್ಯ
ಶರಣರ ದಯದಿಂದ ದಯಾಗಲಿತೆನಯ್ಯ
ಶರಣರ ವಿಚಾರದಿಂದ ವಿಚಾರಗಲಿತೆನಯ್ಯ
ಶರಣರ ಆಚಾರದಿಂದ ಆಚಾರಗಲಿತೆನಯ್ಯ
ಶರಣರ ವಚನದಿಂದ ವಚನಗಲಿತೆನಯ್ಯ
ಶಿವಾನಂದ ಪ್ರೀಯ ಗುರು ಬಸವ ಪ್ರಭುವೆ''[೮೪]

ಹನ್ನೆರಡನೆ ಯಶತಮಾನದ ಶರಣರ ಮೇಲೆ ಅದರಲ್ಲಿ ವಿಶ್ವಗುರು ಬಸವಣ್ಣನವರ ಮೇಲೆ ಇಟ್ಟಿರುವ ಪ್ರೀತಿ ವಿಶ್ವಾಸಗಳನ್ನು ಕಾಣುತ್ತೇವೆ. ಶರಣರನ್ನು ಬಿಟ್ಟು ನಾನೇನು ಹೊಸದಾಗಿ ಕಲಿತಿಲ್ಲ, ಶರಣರು ಮಾಡಿದ್ದನ್ನೇ ಮಾಡುತ್ತಿದ್ದೇನೆ, ಅವರ ನಡೆ –ನುಡಿ ,ತತ್ವಗಳೆಲ್ಲ ಅವರಿಂದಲೇ ಕಲಿತ್ತಿದ್ದೇನೆ ಎಂಬ ಉದಾತ್ತ ತತ್ವವನ್ನು ಈ ಮೇಲಿನ ವಚನದಿಂದ ಮನವರಿಕೆಯಾಗುತ್ತದೆ. ಬಸವ ಧರ್ಮದಲ್ಲಿ ಇತ್ತೀಚಿನ ಪ್ರೀತಿಯನ್ನು ಹೃದಯ ಬಿಚ್ಚಿ ಹಾಡುತ್ತಾರೆ. ಅವರ ಇನ್ನೊಂದು ವಚನವಾದ – – – –

ಊರು ಕೇರಿಗೊಂದು ಮಠಗಳಾದರೇನು?

ಎಲ್ಲರೂ ಧರ್ಮ ಸುಧಾರಣೆ

ಹಳ್ಳಿ ಎಲ್ಲಿಯವರೆಗೆ ಕಛೇರಿಗಳಾದರೇನು?

ಎಲ್ಲರು ಸಮಾಜದ ಸೇವಕರೇ

ಜಾತಿಗೊಬ್ಬ ಜಗದ್ಗುರುಗಳಾದರೇನು?

ಎಲ್ಲರೂ ಜಗದ್ಗುರುಗಳೇ

ಮಾತಿನಲ್ಲಿ ರೂರಂಗದಲ್ಲಿ ಶೂರರೇ

ವೇಷ – ಭೂಷಣದಲ್ಲಿ ಕಾವಿಧಾರಿಯಾದರೇನು?

ಎಲ್ಲರೂ ಸನ್ಯಾಸಿಗಳೇ

.................

........... ಶಿವಾನಂದ ಪ್ರಿಯಾ ಗುರುಬಸವ ಪ್ರಭುವೆ '' ೮೫

ಸಮಾಜದಲ್ಲಿ ಎಲ್ಲ ವೀರಶೈವ ಮಠಗಳು ಧಾರ್ಮಿಕ, ಹಾಗೂ ಸಾಮಾಜಿಕ ಸೇವೆಗಳಿಗೆ ಮಿಸಲಾಗಿರುವುದಿಲ್ಲ. ಕೆಲವು ಮಠಗಳ ಮಠಾಧೀಶರು ಮಾತ್ರ ಧರ್ಮದ ಸುಧಾರಕರೆಂದು ಹೆಮ್ಮೆಯಿಂದ ಹೇಳಿಕೆಗಳು ಹೇಳಿರುವುದು ತಿಳಿದು ಬರುತ್ತದೆ. ಭ್ರಷ್ಟಚಾರದ ಡಾಂಬಿಕ ವರ್ತನೆ ಮಾಡುವವರನ್ನು ಟೀಕಿಸುವ ಈ ವಚನವಾಗಿದೆ. ಆತ್ಮ ಗೌರವದಿಂದ ನಿಸ್ವಾರ್ಥದಿಂದ ಸಾಮಾಜಿಕ ಸೇವೆ ಸಲ್ಲಿಸಬೇಕು ಎಂದು ಈ ವಚನದಿಂದ ತಿಳಿದುಬರುತ್ತದೆ. ಅಲ್ಲದೆ ''ಕನ್ನಡದ ಕೋಗಿಲೆ'' – ಎನ್ನುವ ಇಪ್ಪತ್ತೆರಡು ಕವನಗಳನ್ನೊಳಗೊಂಡ ಕವನ ಸಂಕಲನವಾಗಿದೆ. ಹಾಗೂ ಸಾಮಾಜಿಕ ಪ್ರಾರ್ಥನೆ, ರಚಿಸಿದ್ದಾರೆ. ಶ್ರೀ ಶಿವಾನಂದ ಮಹಾಸಾವಮಿಗಳು ಕನ್ನಡ ಸಾಹಿತ್ಯಿಕವಾಗಿ ಸಲ್ಲಿಸುತ್ತಿರುವ ಸೇವೆ ನಿಸ್ವಾರ್ಥದಾಯಕವಾಗಿದೆ.

ಹಾರಕೂಡ ಹಿರೇಮಠವು ಸಾಹಿತ್ಯಿಕವಾದ ಅನುಪಮ ಸೇವೆ ಸಲ್ಲಿಸುತ್ತಿದೆ. ನೂತನ ಶ್ರೀಗಳಾದ ಪೂಜ್ಯ ಶ್ರೀ ಚನ್ನವೀರ ಶಿವಾಚಾರ್ಯ ಸ್ವಾಮಿಗಳು ಶ್ರೀಮಠದಲ್ಲಿ ಪ್ರತಿಯೊಂದು ವರ್ಷ ಒಂದು ಧಾರ್ಮಿಕ ಕೃತಿ ಸಾಹಿತ್ಯಿಕವಾಗಿ ಕಾಣಿಕೆಯ ರೂಪದಲ್ಲಿ ಹೊರತರುತ್ತಿರುವುದು ಹೆಮ್ಮೆಯ ವಿಷಯ ''ಶ್ರೀ ಚನ್ನ ಬಸವೇಶ್ವರ ಸಂಸ್ಥಾನ ಹಿರೇಮಠ'' ಹಾರಕೂಡ ಎಂಬ ಪ್ರಕಾಶನವನ್ನು ತೆರೆದು ಅದರಡಿಯಲ್ಲಿ ಕನ್ನಡ ಕೃತಿಗಳು ಪ್ರಕಟಿಸಿ ಜನರ ಕೈಗೆ ನೀಡುತ್ತಿರುವುದು ಶ್ಲಾಘನೀಯ. ಹಾರಕೂಡ ಹಿರೇಮಠದ ''ಶ್ರೀ ಸದ್ಗುರು ಚನ್ನಬಸವ ಸ್ವಾಮಿಗಳ ಅಷ್ಟೋತ್ತರ ಶತನಾಮಾವಳಿ'' ಎಂಬ ಕೃತಿಯನ್ನು ಪ್ರಪ್ರಥಮವಾಗಿ ಪ್ರಕಟಿಸಿ ಜನರ ಕೈಗಿಟ್ಟಿದ್ದಾರೆ.

ಇದನ್ನು ಪುರಾಣಿಕ ಶ್ರೀ ಶರಣಯ್ಯ ನವರು ರಚನೆ ಮಾಡಿದ್ದರು. ''ಸೃಜನ ಶೀಲ ಸಾಹಿತ್ಯ ಮಾಲೆ'' ಎಂಬ ಹೆಸರಿನ ಮಾಲೆಯಲ್ಲಿ ಹಲವಾರು ಪುಸ್ತಕಗಳ ಪುಷ್ಪಗಳನ್ನು ಪೋಣಿಸುತ್ತಿದ್ದಾರೆ.

| | ಕೃತಿಗಳು | ಲೇಖಕರು . ಸಂ. | ಪ್ರಕಟಣಾ ವರ್ಷ |
|---|---|---|---|
| ೧) | ಜನಪದ ಸಾಹಿತ್ಯದಲ್ಲಿ, ಜೀವನ ಮೌಲ್ಯಗಳು | ಪ್ರೊ. ಸೂಗಯ್ಯಾ ಹಿರೇಮಠ | ೧೯೯೧ |
| ೨) | ಅನುಭಾವ ಸಾಹ್ಯಿತ್ಯದಲ್ಲಿ, ವೀರಶೈವ ಸಂಸ್ಕೃತಿ | ವ್ಹಿ.ಎಸ್. ಚರಂತಿಮಠ | ೧೯೯೨ |
| ೩) | ವಚನ ಸಾಹಿತ್ಯದಲ್ಲಿ ಜೀವನ, ಮೌಲ್ಯಗಳು | ಡಾಃ ಎಮ್.ಎಸ್. ಲಠ್ಠೆ | ೧೯೯೨ |
| ೪) | ಅನುಭಾವಿಯ ಆತ್ಮ ಕಥನ | ಡಾಃ ಎಸ್.ಆರ್. ಗುಂಜಾಳ | ೧೯೯೩ |
| ೫) | ಅಂತರ | ಪ್ರೊ. ಸೂಗಯ್ಯಾ ಹಿರೇಮಠ | ೧೯೯೩ |
| ೬) | ಶರಣರ ವಚನಗಳಲ್ಲಿ ಸಮಾಜ , ಕಾರ್ಯ ದರ್ಶನ | ಪ್ರೊ. ಎಸ್.ಆರ್. ಶಾಸ್ತ್ರಿ | ೧೯೯೪ |
| ೭) | ಶರಣರ ದಾಸೋಹ ಮತ್ತು ಕಾಯಕ | ಶಿವರಾಜ ಜಿ.ಪಾಟೀಲ | ೧೯೯೪ |
| ೮) | ಶೂನ್ಯ ಸಂಪಾದನೆಯ ಮುಖಗಳು | ಡಾಃ ಸಂಗಮೇಶ ಸೌದತ್ತಿಮಠ | ೧೯೯೫ |
| ೯) | ಪುಣ್ಯ ಚಿತ್ತರು | ಪ್ರೊ. ಪಂಚಾಕ್ಷರಿ ಹಿರೇಮಠ | ೧೯೯೫ |
| ೧೦) | ಚನ್ನವೀರ (ಗೌರವಗ್ರಂಥ) | ಡಾಃ ಸಂಗಮೇಶ ಸೌದತ್ತಿಮಠ (ಸಂ) | ೧೯೯೬ |

– ಹೀಗೆ ಹಾರಕೂಡ ಹಿರೇಮಠ ಸಾಹಿತ್ಯಿಕವಾದ ಕೊಡುಗೆಯನ್ನು ಕೊಡುತ್ತಲಿದೆ.

ಬೀದರ ಸಿದ್ಧಾರೂಢ ಮಠದಲ್ಲಿ ''ಶಿವಾದ್ವೈತ ಭೂಷಣ '' ವೇದಾಂತವಾಗೀಶ ಗೀತೋತ್ತಮ ಆಚಾರ್ಯ – ಗಳೆಂಬ ಬಿರುದುಗಳನ್ನು ಹೊಂದಿದ ಪರಮ ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಮ್ಮ ಅಮೃತ ಹಸ್ತದಿಂದ ರಚಿಸಿ ಪ್ರಕಟಣೆಗೊಂಡ ಅನೇಕ ಕನ್ನಡ ಸಾಹಿತ್ಯಿಕ ಕೃತಿಗಳಿವೆ. ಇವರ ಕೆಲವು ಕೃತಿಗಳು ಸಂಸ್ಕೃತದಲ್ಲಿ ರಚನೆಗಳೊಂಡಿವೆ. ''ಚಿದಂಬರಾಶ್ರಮ ಶ್ರೀ ಸಿದ್ಧಾರೂಢ ಮಠ ಬೀದರ'' ಎಂಬ ಪ್ರಕಾಶನದ ಹೆಸರಿನಲ್ಲಿ ಶ್ರೀ ಆರೂಢ ಗ್ರಂಥ ಮಾಲೆಯಲ್ಲಿ ಪ್ರಕಟಿಸಲು ತೊಡಗಿದ್ದಾರೆ. ಅವರ ಪ್ರಕಾಶನದ ವತಿಯಿಂದ ಪ್ರಕಟಣೆಗೊಂಡ ಕೃತಿಗಳು ಇಂತಿವೆ.

ಶ್ರೀ ಮ.ನಿಜಗುಣ ಶಿವಯೋಗಿಗಳು ''ಅನುಭವ ಸಾರ ಒಂದನೆ ಸಂದಿ'' ಟೀಕಾ – ಇದನ್ನು ೨೦೦ ಪುಟಗಳುಳ್ಳ ಗ್ರಂಥವಾಗಿವೆ. ''ಸ್ಥಿತ ಪೂಜ್ಯೋಪನಿಷತ್ತು''. ೧೯೭೮ ರಲ್ಲಿ ಅನುಭವ ಸಾರ ಭಾಗ – ೧. ೧೯೮೨ ರಲ್ಲಿ ''ಮೃತ್ಯೋರ್ಮಾ ಮೃತಂಗಮಯ '' – ೧೯೮೮ ರಲ್ಲಿ ಪೂಜಾಯೋಗ ೧೯೯. ಭಜನಾಮಾಲಾ

೧೯೯೨ ಧ್ಯಾನಸ್ತೋತ್ರ. ನೂರಾರು ಪದ್ಯಗಳ ವಚನಗಳು – ಹೀಗೆ ಹಲವಾರು ಕೃತಿಗಳು ಕನ್ನಡ ಸಾಹಿತ್ಯ ಲೋಕಕ್ಕೆ ಎಡಬಿಡದೆ ಹೊರ ಬೀಳುತ್ತಿವೆ.

ಅಧ್ಯಾತ್ಮದ ಅಮೂಲ್ಯ ತತ್ವಗಳು ನಾಡಿನ ಮೂಲೆ – ಮೂಲೆಗಳಲ್ಲಿ ಹರಡಲೆಂದು "ಶ್ರೀ ಸಿದ್ಧಭಾರತಿ" ಮುದ್ರಣಾಲಯವು ಶ್ರೀ ಮಠದಲ್ಲಿಯೇ ಸ್ಥಾಪಿಸಿದ್ದಾರೆ. ಅದರಲ್ಲಿ "ಶ್ರೀ ಸಿದ್ಧ" ಎನ್ನುವ ಮಾಸಿಕ ಪತ್ರಿಕೆಯು ಪ್ರಕಟಣೆಗೊಳ್ಳುತ್ತಿದೆ. ಹೀಗೆ ಬೀದರ ಜಿಲ್ಲೆಯ ಸಿದ್ಧಾರೂಢ ಮಠವು ಅಮೂಲ್ಯವಾದ ಸೇವೆಯನ್ನು ಸಲ್ಲಿಸಿದೆ. ಅಲ್ಲದೆ ಭಾತಂಬ್ರಾ, ಬೀದರ್ ಮಠವು ಒಂದೆರಡು ಕೃತಿಗಳು "ಬಯಲ ಕಾರಣಿಕ" ಎನ್ನುವ ಗೌರವಗ್ರಂಥವನ್ನು ಡಾ: ಸಂಗಮೇಶ ಸೌದತ್ತಿಮಠ ಸಂಪಾದಿಸಿದ್ದಾರೆ. ಅಲ್ಲದೆ ಅಲ್ಲಮಪ್ರಭು, ಅಕ್ಕಮಹಾದೇವಿಯ ವಚನಗಳು ಪ್ರಕಟಿಸಿದ್ದಾರೆ. ಕನ್ನಡ ಸಾಹಿತ್ಯದ ಸೇವೆಗೆ ಬೀದರ ಜಿಲ್ಲೆಯ ವೀರಶೈವ ಮಠಗಳು ಹಿಂದೆ ಬಿದ್ದಿಲ್ಲ ತಮಗೆ ನಿಲುಕಿದಷ್ಟು ಸಾಹಿತ್ಯಿಕ ಸೇವೆಯಲ್ಲಿ ತೊಡಗಿವೆ.

ಹೀಗೆ ಹೈದ್ರಾಬಾದ – ಕರ್ನಾಟಕ ಪ್ರದೇಶದ ವೀರಶೈವ ಮಠಗಳು ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕೊಡುಗೆಗಳನ್ನು ಕೊಟ್ಟಿವೆ. ಆದರೆ, ಅಂದಿನ ಮಠಗಳ ಕೊಡುಗೆ ನಿಸ್ವಾರ್ಥತೆಯಿಂದ, ಭಕ್ತಿಯಿಂದ, ಕಳಕಳಿಯಿಂದ, ಕೂಡಿರುತಿತ್ತು. ಅಲ್ಲದೆ ಅಸೆ ಅಕಾಂಕ್ಷಗಳಿಗೆ ಅಂದಿನ ಮಠಾಧೀಶರು ಒಳಗಾಗುತ್ತಿರಲಿಲ್ಲ. ಆದರೆ, ಇಂದಿನ ಕೇಲವೊಂದು ಮಠಾಧೀಶರು ಯಾವುದಾದರೊಂದು ಸೇವೆ ಸಲ್ಲಿಸಬೇಕಾದರೆ, ಮೊಟ್ಟ ಮೊದಲು ಅವರಿಗೆ ದಕ್ಷಣ ತೆಗೆದು ಕೊಳ್ಳುವ ಹಂತಕ್ಕೆ ಬಂದಿದ್ದಾರೆ. ಅಂತು ನೂರಕ್ಕೆ ತೊಂಬತ್ತಷ್ಟು ಜನರು ಮಠದ ಪರಿಸರ ಹಾಗೂ ಸಂಸ್ಕೃತಿಯತ್ತ ಬೆಳೆಯುತ್ತಿದ್ದಾರೆ. ಪ್ರತಿಯೊಂದು ಹಂತದಲ್ಲಿ ಮಠಗಳು ಪಾತ್ರವನ್ನು ವಹಿಸಿಕೊಂಡು ಬರುತ್ತಿರುವುದು ಕಾಣುತ್ತೇವೆ.

# ಅಡಿ ಟಿಪ್ಪಣಿ

೧. ಮಾಣಿಕರಡ್ಡಿ ದೇಶದ , ಗುರುಪಾದ ಶಿವಚಾರ್ಯ ೧೨ ಜ್ಯೋತಿರ್ಲಿಂಗ;(ಪೀಠಿಕೆ) ಪುಟ ೧, ೧೯೮೯.

೨. ಎರಿಸೀಮೆ ಚನ್ನಪ್ಪಾ ಮತ್ತು ಟಿ. ಆರ್. ಮಹಾದೇವಯ್ಯ (ಸಂ) ಡಾ: ಎಚ್.ಎಮ್. ಮರುಳಸಿದ್ಧಯ್ಯ (ಲೆ), ದಾಸೋಹ ಸಿರಿ; ಪುಟ ೩೫೪, ೧೯೮೧.

೩. ಡಾ: ಸಂಗಮೇಶ ಸೌದತ್ತಿಮಠ (ಸಂ) ಶಿವರಾಜ ಪಾಟೀಲ (ಲೆ) , ಚನ್ನವೀರ; ಪುಟ ೨೮, ೧೯೯೬.

೪. ಡಾ: ಸಂಗಮೇಶ ಸೌದತ್ತಿಮಠ , ಸನ್ನಿದಿ ; ಪುಟ ೧೦, ೧೯೯೬.

೫. ಡಾ: ಹಿರೇಮಲ್ಲೂರ ಈಶ್ವರನ್, ಲಿಂಗಾಯತ ಜೈನ ಮತ್ತು ಬ್ರಾಹ್ಮಣ ಧರ್ಮಗಳು; ಮಠಗಳು ಒಂದು ತೌಲನಿಕ ಅಧ್ಯಯನ; ಪುಟ ೨೪ , ೧೯೯೭.

೬. ಸ.ಸ. ಮಾಳವಾಡ (ಸಂ) , ಬಸವಣ್ಣನವರ ವಚನ ಸಂಗ್ರಹ; ವಚನ ೧೭೪ , ೧೯೮೯.

೭. ಶಾಂತರಸ ರಾಯಚೂರ, ಚನ್ನಬಸವಪ್ಪ ಬೆಟ್ಟದೂರು, (ಸಂ) ಕಾಯಕ ಪರಿಣಾಮಿ; ಪುಟ ೪೩, ೧೯೯೧.

೮. ಪೂರ್ಣಪ್ರಜ್ಞ , ಪೂರ್ಣಪ್ರಜ್ಞ ವಚನಗಳು; ವಚನ ೩೦೧೭ ಪುಟ ೪೪೮, ೧೯೬೯.

೯. ಡಾ: ವ್ಹಿ.ಎಸ್. ಚರಂತಿಮಠ , ಚನ್ನಬಸವ ; ಪುಟ ೧೦೮, ೧೯೯೦.

೧೦. ಡಾ: ಸಂಗಮೇಶ ಸವದತ್ತಿಮಠ (ಸಂ), ಚನ್ನವೀರ; ಪುಟ ೭, ೧೯೯೭.

೧೧. ಡಾ: ಎಸ್.ಎಮ್.ಹಿರೇಮಠ , ಶರಣಬಸವೇಶ್ವರ ಹಾಗೂ ಅವರ ಪರಿಸರದ ಸಾಹಿತ್ಯ; ಪುಟ ೬೭,

೧೨. ಕೆ. ಬಿ. ಬ್ಯಾಳಿ (ಸಂ) ಡಾ: ಎಚ್.ಎಸ್.ಪಾಟೀಲ, ಶಾಂತಪ್ರಭೆ ; ಪುಟ ೧೩೫, ೧೯೯೩.

೧೩. ಶಾಂತರಸ (ಸಂ) ಡಾ: ದೆ.ಜವರೇಗೌಡ (ಲೆ) , ಕಾಯಕ ಪರಿಣಾಮಿ; ಪುಟ ೬೯೦, ೧೯೯೧

೧೪. ವೀರಶೆಟ್ಟಿ ಬಾವುಗೆ, ನೂತನ ವಚನಕಾರರ ವಚನಗಳಲ್ಲಿ ಶತಾಯುಷಿ ಡಾ: ಚೆನ್ನಬಸವ ಪಟ್ಟದ್ದೇವರು; ಪು ೧೦, ೧೯೯೭.

೧೫. ಬಸವ ಚರಣರೇಣು, ಶಿವಾನಂದ ಸ್ವಾಮಿಗಳ ವಚನಗಳು; ವಚನ ೬೦, ೧೯೮೯.

೧೬. ಬಸವ ಚರಣರೇಣು, ಶಿವಾನಂದ ಸ್ವಾಮಿಗಳ ವಚನಗಳು; ವಚನ ೮, ೧೯೮೯.

೧೭. ಬಸವ ಚರಣರೇಣು (ಲೆ), ಸಿದ್ಧಯ್ಯಾ ಪುರಾಣಿಕ (ಮುನ್ನುಡಿ), ಶಿವಾನಂದ ಸ್ವಾಮಿಗಳ ವಚನಗಳು; ೧೯೮೯.

೧೮. ಮಾಳವಾಡ ಸ.ಸ. (ಸಂ) , ಶ್ರಿ ಬಸವಣ್ಣನವರ ವಚನ ಸಂಗ್ರಹ; ವಚನ ೪೭೮ ಪುಟ ೧೭೫ , ೧೯೮೯.

೧೯. ಹಳಕಟ್ಟಿ ಪಿ.ಜಿ. , ಹರಿಹರನ ರಗಳೆಗಳು , ಪುಟ ೩೫ , ೧೯೬೮.

೨೦. ಡಾ: ಮ.ನ. ಜವರಯ್ಯಾ, ಪರಂಪರಹೆ ಹಾಗೂ ದಲಿತ ಬಂಡಾಯ ಸಾಹಿತ್ಯ ಸಮಗ್ರ ಅಧ್ಯಯನ; ಪು ೪೮, ೧೯೯೪.

೨೧. ಬಸವನಾಳ (ಸಂ) ೧೯೬೨ , ಬಸವಣ್ಣನವರ ವಚನಗಳು ; ಪುಟ ೩೪೪, ೧೯೬೨.

೨೨. ಶಾಂತರಸ ರಾಯಚೂರ (ಸಂ), ವಿದ್ಯಾಶಂಕರ ಎಸ್ (ಲೆ) , ಕಾಯಕ ಪರಿಣಾಮಿ; ಪುಟ ೧೩೪೭, ೧೯೯೧.

೨೩. ಡಾ: ಬಿ.ಎಂ. ತೆಳವಡಿ (ಸಂ), ವಿ. ಎಸ್.ಅಲಿಗಾವಿ (ಲೆ) , ಮಹಾಂ ; ಪುಟ ೩೮೬, ೧೯೮೬.

೨೪. ಡಾ: ಆರ್.ಸಿ.ಹೀರೆಮಠ, , ವೀರಶೈವ ಚಿಂತಾಮಣಿ (ಮಹಾದೇವ ವಿರಚಿತ); ಪುಟ ೨೦ ,೨೧, ೧೯೭೧.

೨೫. ಡಾ: ವೀರೇಶ ಬಡಿಗೇರ , ಭಕ್ತಿ ಭಜನೆ ಮತ್ತು ಕೇಳವರ್ಗ', ಪುಟ ೧೪, ೨೦೦೧.

೨೬. ಡಾ: ವೀರೇಶ ಬಡಿಗೇರ , ಭಕ್ತಿ ಭಜನೆ ಮತ್ತು ಕೇಳವರ್ಗ', ಪುಟ ೧೫, ೨೦೦೧.

೨೭. ಎಸ್.ಯು.ಮಠದ , ಪರಂಜ್ಯೋತಿ (ಆಶಿರ್ವಾದವಾಣಿ); ಮಾಸಿಕ ಪತ್ರಿಕೆ , ಪುಟ ೬, ೧೯೯೬.

೨೮. ಡಾ: ಆರ್ ಸಿ. ಹಿರೇಮಠ , ಮಹಾಯಾತ್ರೆ , ಪುಟ ೭೩; ೧೯೯೭.

೨೯. ಪಿ.ಚಂದ್ರಶೇಖರ, ಸರಳ ವೀರಶೈವ ತ್ರಿರತ್ನಗಳು; ಪುಟ ೧೪, ೧೯೯೮.

೩೦. ಡಾ: ಎಚ್.ತಿಪ್ಪೇರುದ್ರಸ್ವಾಮಿ, ವಚನಗಳಲ್ಲಿ ವೀರಶೈವ ಧರ್ಮ; ಡಿ.ವಿ.ಕೆ. ಮೂರ್ತಿ, ಪುಟ ೨೭೮, ೧೯೮೨.

೩೧. ಡಾ: ಸಂಗಮೇಶ ಸೌದತ್ತಿಮಠ (ಸಂ), ಡಾ: ಎಮ್.ಎಸ್.ಲಠ್ಠೆ (ಲೆ), ಬಯಲ ಕಾರಣಿಕ;ಪುಟ ೨೨೨, ೨೦೦೦.

೩೨. ಡಾ: ಶಾಂತರಸ ರಾಯಚೂರ ಚನ್ನಬಸವ ಪಟ್ಟದೂರು (ಸಂ), ಡಾ: ಎಸ್.ವಿದ್ಯಾಶಂಕರ, ಕಾಯಕ ಪರಿಣಾಮಿ; ಪುಟ ೩೪೬, ೧೯೯೧.

೩೩. ಡಾ: ಎಲ್. ಬಸವರಾಜು , ಅಂಬಿಗರ ಚೌಡಯ್ಯನ ವಚನ', ಪುಟ ೩೫, ೧೯೮೯.

೩೪. ಡಾ: ಎಚ್.ಪಿ. ಮಲ್ಲೇದೇವರು (ಸಂ), ಡಾ: ಬಿ.ನಂ. ಚಂದ್ರಯ್ಯಾ (ಲೆ), ಅರ್ಚನಾ', ಪುಟ ೯೨೫, ೧೯೮೪.

೩೫. ತೋಟಪ್ಪ ಶಾಸ್ತ್ರಿ , ಶಿವಚಾರ್ಯ ನವರತ್ನ ಅಥವಾ ಭಕ್ತ ಮಹೇಶ್ವರದ ಕೈಪಿಡಿ; ಪುಟ ೧೦೩, ೧೯೬೮.

೩೬. ತೋಟಪ್ಪ ಶಾಸ್ತ್ರಿ , ಶಿವಚಾರ್ಯ ನವರತ್ನ ಅಥವಾ ಭಕ್ತ ಮಹೇಶ್ವರದ ಕೈಪಿಡಿ; ಪು ೨೯, ೧೯೬೮.

೩೭. ಶಾಂತರಸ ರಾಯಚೂರ (ಸಂ), ಸಿಂಪಿ ಲಿಂಗಣ್ಣಾ (ಲೆ), ಕಾಯಕ ಪರಿಣಾಮಿ', ಪುಟ ೯೭೪, ೧೯೯೧.

೩೮. ಹಾಡಿದವರು ಶ್ರೀಮತಿ ಲಕ್ಷ್ಮೀಬಾಯಿ ದುರ್ಗ , ವಯಸ್ಸು, ೫೫, ಭವಾನಿ ಕಾಲೋನಿ ಶಿವನಗರ ಬೀದರ,

೩೯. ಸ.ಸ. ಮಾಳವಾಡ , ಬಸವಣ್ಣನವರ ವಚನ ಸಂಗ್ರಹ; ವಚನ ೧೪೨ , ಪುಟ ೫೦, ೧೯೮೯.

೪೦. ಚನ್ನಪ್ಪ ಎರಿಸೀಮೆ ಟ. ಆರ್. ಮಹಾದೇವಯ್ಯ ಮಹಾಲಿಂಗ ಯಾಳಗಿ (ಸಂ) ದಾಸೋಹಸಿರಿ; ಪುಟ ೪೬೬, ೧೯೮೧.

೪೧. ಚನ್ನಪ್ಪ ಎರಿಸೀಮೆ ಟ. ಆರ್ ಮಹಾದೇವಯ್ಯ (ಸಂ) ಡಾ: ದೆ.ಜವರೇಗೌಡ (ಲೆ), ಕಾಯಕ ಪರಿಣಾಮಿ; ಪುಟ ೬೯೧, ೧೯೮೧.

೪೨. ಡಾ: ಎಚ್. ತೀಪ್ಪೆರುದ್ರ ಸ್ವಾಮಿ, ವಚನ ಚಳುವಳಿ(ಕಾಯಕ ಪರಿಣಾಮಿ), ಪುಟ ೧೦೩೫, ೧೯೯೧.

೪೩. ಡಾ: ಮ.ನ.ಜವರಯ್ಯಾ, ದಲಿತ ವರ್ಗದ ಶರಣರು ಮತ್ತು ಶರಣೆಯರು ; ಒಂದು ತೌಲನಿಕ ಅಧ್ಯಯನ, ಪುಟ ೧೩೦, ೧೯೯೭.

೪೪. ಡಾ: ಜಿ.ಬಿ.ವಿಸಾಜಿ, ಡಾ: ಚೆನ್ನಬಸವ ಪಟ್ಟದೇವರು ಭಾಲ್ಕಿ; ಪುಟ ೭, ೧೯೯೦.

೪೫. ಶಾಂತರಸರು ರಾಯಚೂರ (ಸಂ), ಕಾಯಕ ಪರಿಣಾಮಿ', ಪುಟ ೭೧, ೧೯೯೧.

೪೬. ಡಾ: ಸಾ.ಶಿ.ಮರಳಯ್ಯಾ, ವೈರಾಗ್ಯ ನಿಧಿ ಲಿಂಗಾಂಗಯೋಗಿ ಶತಾಯುಷಿ ಡಾ: ಚೆನ್ನಬಸವ ಪಟ್ಟದ್ದೇವರ ಭಾಲ್ಕಿ' (ಹಿಸ್ನುಡಿ) , ೧೯೯೭.

೪೭. ಶಾಂತರಸರ ರಾಯಚೂರ (ಸಂ), ಕಾಯಕ ಪರಿಣಾಮಿ; ಪುಟ ೧೦೩೯, ೧೯೯೧.

೪೮. ಡಾ: ಎಂ.ಚಿದಾನಂದ ಮೂರ್ತಿ, ವಚನಸಾಹಿತ್ಯ; ಪುಟ ೭೪, ೧೯

೪೯. ಕೃ.ನಾರಾಯಣರಾವ, ಸರ್ವಜ್ಞನ ವಚನಗಳು; ಪುಟ ೩೭೭, ೧೯೯೯.

೫೦. ಡಾ: ಎಲ್.ಬಸವರಾಜು (ಸಂ), ಪೂಜ್ಯ ಶ್ರೀ ಶರಣಬಸವಪ್ಪನವರ ಮಹಾದಾಸೋಹ ಸೂತ್ರಗಳು; ಪು ೪೯, ೧೯೮೮.

೫೧. ಡಾ: ಹಿರೇಮಠ ಆರ್.ಸಿ. (ಸಂ) ಚಂದ್ರವಂದನಾ ಗೌರವಗ್ರಂಥ; ಪುಟ ೨೧೫, ೧೯೯೮.

೫೨. ಡಾ: ಎಲ್. ಬಸವರಾಜು, ಸಿದ್ದರಾಮೇಶ್ವರ ವಚನಗಳು;

೫೩. ಜ.ಚ.ನಿ, ದಾಸೋಹ ದೀಪ್ತಿ; ಪುಟ ೮೬,

೫೪. ಡಾ: ಎಚ್. ಪಿ. ಮಲ್ಲೀದೇವರು (ಸಂ), ಅರ್ಚನ; ಪುಟ ೭೭೦, ೧೯೮೧.

೫೫. ಸ. ಸ. ಮಾಳವಾಡ (ಸಂ), ಬಸವಣ್ಣನವರ ವಚನ ಸಂಗ್ರಹ; ವಚನ ೧೦೮, ೧೯೮೯.

೫೬. ಸ. ಸ. ಮಾಳವಾಡ (ಸಂ), ಬಸವಣ್ಣನವರ ವಚನ ಸಂಗ್ರಹ; ವಚನ ೯೨, ೧೮೯೮.

೫೭. ಪೂಜ್ಯ ಶರಣಬಸವಪ್ಪಾ, ಗವಿದೀಪ್ತಿ; ಪುಟ ೪೦೬, ೧೯

೫೮. ಶಾಂತರಸ ರಾಯಚೂರ ಚನ್ನಬಸವ ಬೆಟ್ಟದೂರು ಡಾ: ಸಂಗಮೇಶ ಸೌದತ್ತಿ (ಲೆ), ಕಾಯಕ ಪರಿಣಾಮಿ; ಪುಟ ೮೩೯, ೧೯೯೧.

೫೯. ಡಾ: ಪಿ.ವಿ.ನಾರಾಯಣ, ವಚನ ನಿರ್ವಚನ; ಪುಟ ೭೫೮, ೧೯

೬೦. ಡಾ: ಎಲ್. ಬಸವರಾಜು (ಸಂ), ಬಸವಣ್ಣನವರ ವಚನ – ·

೬೧. ನಾರಾಯಣ ಕ್ರ. (ಸಂ), ಸರ್ವಜ್ಞನ ವಚನ; ೧೯೯೯.

೬೨. ವೀರಶೆಟ್ಟಿ ಬಾವಗೆ (ಸಂ), ಸಿದ್ದಯ್ಯಾ ಪುರಾಣಿಕ, ವೈರಾಗ್ಯ ನಿಧಿ ಲಿಂಗಾಂಗಯೋಗ ಡಾ: ಚೆನ್ನಬಸವ ಪಟ್ಟದ್ದೇವರು; ಪುಟ ೬೫, ೧೯೯೭.

೬೩. ಡಾ: ಬಿ.ಕೆ. ಹೊಸಮಠ, ಗವಿದೀಪ್ತಿ; ಪುಟ ೫೨೨, ೧೯

೬೪. ಮೈಸೂರ ಹಸ್ತಪ್ರತಿಸೂಚಿ ಸಂಪುಟ, ೩, ಪುಟ, ೧೨೩೨, ಭೈರವೇಶ್ವರ ಕಾವ್ಯ ಕಥೆಗಳು; ಪುಟ ೨೨೨,

೬೫. ಹಿರೇಮಲ್ಲೂರ ಈಶ್ವರನ್, ಲಿಂಗಾಯತ್ ಧರ್ಮ, ಒಂದು ಅಧ್ಯಯನ; ಪುಟ ೮, ೧೯೯೭.

೬೬. ಶಾಂತರಸರು ರಾಯಚೂರ (ಸಂ), ಡಾ: ಜಿ. ಶಿವರುದ್ರಪ್ಪಾ (ಲೆ) ಕಾಯಕ ಪರಿಣಾಮಿ; ಪುಟ ೪೭೧, ೧೯೯೧.

೬೭. ಡಾ: ಎಚ್.ಪಿ. ಮಲ್ಲೀದೇವರು(ಸಂ),ಎಚ್.ಎಮ್.ಸದಾಶಿವಯ್ಯಾ(ಲೆ),ಅರ್ಚನ; ಪುಟ ೧೦೦೧, ೧೯೮೧.

೬೮. ಡಾ: ಎಚ್. ಪಿ. ಮಲ್ಲೀದೇವರು(ಸಂ),ಡಾ: ಜಿ. ಶಿವರುದ್ರಪ್ಪಾ (ಲೆ), ಅರ್ಚನ; ಪುಟ ೧೦೦೬, ೧೯೮೧.

೬೯. ಡಾ: ಬಾಳಣ್ಣಾ ಸೀಗಿಹಳ್ಳಿ, ಡೆಪ್ಯೂಟಿ ಚೆನ್ನಬಸವಪ್ಪನವರ ಜೀವನ ಸಾಧನೆ; ಪುಟ ೬೭, ೧೯೯೩.

೭೦. ಶಾಂತರಸ ರಾಯಚೂರ (ಸಂ), ಡಾ: ಮಾಣಿಕರಾವ ಧನಾಶ್ರಿ (ಲೆ), ಕಾಯಕ ಪರಿಣಾಮಿ; ಪುಟ, ೨೪೫, ೧೯೯೧.

೭೧. ಡಾ: ಜಿ.ಬಿ. ವಿಸಾಜಿ (ಲೆ), ಡಾ: ಚನ್ನವೀರ ಕಣವಿ (ಮುನ್ನುಡಿ), ಡಾ: ಚೆನ್ನಬಸವಪಟ್ಟದೇವರು ಭಾಲ್ಕಿ; ಪುಟ ೨, ೧೯೯೦.

೭೨. ಶಾಂತರಸ ರಾಯಚೂರ ಚನ್ನಬಸವಪ್ಪ ಬೆಟ್ಟದೂರು (ಸಂ) ಮಾಣಿಕರಾವ ಧನಾಶ್ರೀ ರ (ಲೆ) ''ಕಾಯಕ ಪರಿಣಾಮಿ'' ಪುಟ ೨೪೯, ೧೯೯೧.

೭೩. ಶಾಂತರಸ ರಾಯಚೂರ ಚನ್ನಬಸವಪ್ಪ ಬೆಟ್ಟದೂರು (ಸಂ) ಮಾಣಿಕರಾವ ಧನಾಶ್ರೀ (ಲೆ) ''ಕಾಯಕ ಪರಿಣಾಮಿ'' ಪುಟ ೨೪೮, ೧೯೯೧.

೭೪. ಶಾಂತರಸ ರಾಯಚೂರ ಚನ್ನಬಸವಪ್ಪ ಬೆಟ್ಟದೂರು (ಸಂ) ಶ್ರೀದೇವಿ ಸೋಲಾಪೂರ (ಲೆ) ''ಕಾಯಕ ಪರಿಣಾಮಿ'' ಪುಟ ೯೯, ೧೯೯೧.

೭೫. ಮಲ್ಲಿಕಾರ್ಜುನ ಸ್ವಾಮಿ (ಸಂ) ಜನದನಿ ಪತ್ರಿಕೆ ದಿನಾಂಕ: ೦೯. ೦೭. ೧೯೯೯, ಪುಟ ೧, ೧೯೯೯.

೭೬. ಕನ್ನಡ ಪ್ರಭಾ (ದಿನ ಪತ್ರಿಕೆ) ಬಿ. ಎಲ್. ವೇಣು (ಲೆ), ಮಠಗಳು ದೇಶಕ್ಕೆ ಶಾಪ ; ಪುಟ ೫, ೧೯೯೯.

೭೭. ಡಾ: ಕೆ.ರವೀಂದ್ರನಾಥ, ಕನ್ನಡ ಸಾಹಿತ್ಯಕ್ಕೆ ಮಠ ಮಾನ್ಯಗಳ ಕೊಡುಗೆ'(ಪಿ.ಎಚ್‌ಡಿ. ಮಹಾಪ್ರಬಂಧ), ಪುಟ ೨

೭೮. ಡಾ: ಬಿ.ಕೆ. ಬ್ಯಾಳಿ , ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ ', ಪುಟ ೫೭

೭೯. ಚನ್ನಪ್ಪ ಎರಿಸೀಮೆ ಮತ್ತು ಟಿ. ಆರ್. ಮಹಾದೇವಯ್ಯ (ಸಂ) ಡಾ: ಸಂಗಮೇಶ ಸೌದತ್ತಿ ಮಠ (ಲೆ) ದಾಸೋಹ ಸಿರಿ ,' ಪುಟ ೩೪೪ , ೧೯೮೧.

೮೦. ಕೆಳದಿ ಗೂಂಡಾ ಜೊಯಿಸ್ (ಸಂ) ಶ್ರೀ ಜಗದ್ಗುರು ಮೂರು ಸಾವಿರ ಮಠದ ವರ್ಣಾನಾತ್ಮಕ ಹಸ್ತಪ್ರತಿ ಸೂಚಿ, ಪುಟ ೪

೮೧. ಡಾ: ಎಚ್. ತಿಪ್ಪೇರುದ್ರಸ್ವಾಮಿ, ಕರ್ನಾಟಕ ಸಂಸ್ಕೃತಿ ಸಮಿಕ್ಷೆ,' ಪುಟ ೨೨೭

೮೨. ಷಣ್ಮುಖ ಶಿವಯೋಗಿಗಳ ವಚನ

೮೩. ಡಾ: ಜಿ.ಬಿ. ವಿಸಾಜಿ ಮತ್ತು ಎ.ಕೆ. ರಾಮೇಶ್ವರ (ಸಂ) ಶಾಂತಿಕಿರಣ", ಡಾ: ಸಂಗಮೇಶ ಸೌದತ್ತಿ ಮಠ (ಲೆ), ಪುಟ ೭, ೧೯೯೮.

೮೪. ಶ್ರೀ ಮ.ನ.ಪ್ರ. ಶಿವಾನಂದ ಮಹಾ ಸ್ವಾಮಿಗಳು, ಶಿವಾನಂದ ಸ್ವಾಮಿಗಳ ವಚನಗಳು, ಪುಟ ೭೨, ೧೯೮೯.

೮೫. ಶ್ರೀ ಮ. ನ. ಪ್ರ. ಶಿವಾನಂದ ಮಹಾ ಸ್ವಾಮಿಗಳು,' ಶಿವಾನಂದ ಸ್ವಾಮಿಗಳ ವಚನಗಳು, ಪುಟ ೬೦, ೧೯೮೯.

# ಅಧ್ಯಾಯ : ಆರು

## ಹೈದ್ರಾಬಾದ – ಕರ್ನಾಟಕ ವೀರಶೈವ ಮಠಗಳ

## ತೌಲನಿಕ ಅಧ್ಯಯನ

ವೀರಶೈವ ಧರ್ಮದ ಪರಂಪರೆಯಲ್ಲಿ ಪೀಠಗಳ ಸಂಪ್ರದಾಯ ಪ್ರಾಚೀನವಾದುದು. ವೀರಶೈವ ಮಠಗಳಲ್ಲಿ ಗುರುಪೀಠ ಹಾಗೂ ವಿರಕ್ತ ಪೀಠ – ಗಳೆಂಬ ಎರಡು ಪೀಠಗಳು ಕಂಡುಬರುತ್ತವೆ. ಗುರುಪೀಠಗಳಿಗೆ ಹಿರೇಮಠಗಳೆಂದು ಕರೆಯುತ್ತಾರೆ. ವಿರಕ್ತ ಪೀಠಗಳಿಗೆ, ನಿರಂಜನ, ಪೀಠಗಳೆಂದು ಹಾಗೂ ಶೂನ್ಯ ಸಿಂಹಾಸನ ಗಳೆಂದು ಕರೆಯುವ ವಾಡಿಕೆ ಇದೆ. ಈ ಎರಡು ಪೀಠ (ಮಠ) ಗಳ ಧಾರ್ಮಿಕ , ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕವಾದ ಹಲವಾರು ವಿಷಯಗಳನ್ನು ಹಿಂದಿನ ಅಧ್ಯಯನದಲ್ಲಿ ಪ್ರಸ್ತಾಪ ಮಾಡಿ ವಿಷಯ ಅವೃತ್ತಗೊಳಿಸಲಾಗಿದೆ. ಈ ಎರಡು ಮಠಗಳ ಆಚಾರ, ವಿಚಾರ ನಡೆ, ನುಡಿ, ಭಕ್ತಿ ಕ್ರಿಯೆ ಹಾಗೂ ಲೋಕರೂಢಿಯ ಸಂಪ್ರದಾಯಗಳನ್ನು ಮುಕ್ತ ಮನಸ್ಸಿನಿಂದ ವಿಚಾರ ಮಾಡಿ, ತೌಲನಿಕ ಅಧ್ಯಯನಕ್ಕೆ ಒಳಪಡಿಸಿದಾಗ ಕೆಳಗಿನ ಮೂರು ಅಂಶಗಳು ಎದ್ದು ಕಾಣುತ್ತಿವೆ

೧) ಭಿನ್ನ ಅಂಶಗಳು

೨) ಸಮಾನ ಅಂಶಗಳು

೩.) ವಿಶಿಷ್ಟ ಅಂಶಗಳು

## ೧) ಭಿನ್ನ ಅಂಶಗಳು

ಗುರು ಹಾಗೂ ವಿರಕ್ತ ಮಠಗಳಲ್ಲಿ ಕಂಡು ಬರುವ ಭಿನ್ನಾಂಶಗಳು ಈ ಕೆಳಗಿನಂತಿವೆ.

| ಗುರು ಮಠಗಳು | ವಿರಕ್ತ ಮಠಗಳು |
|---|---|
| ೧. ಹಿರೇಮಠದ ಮಠಾಧಿಪತಿಯರು ಅಡ್ಡ ಪಲ್ಲಕ್ಕಿ ಉತ್ಸವದ ಕಾರ್ಯಕ್ರಮಕ್ಕೆ ಗೌರವವಾದ ಸ್ಥಾನ ಮಾನಗಳನ್ನು ಕಲ್ಪಿಸಿಕೊಡುತ್ತಾರೆ. ಆ ಪಲ್ಲಕ್ಕಿಯಲ್ಲಿ ಮಠಾಧೀಶರು ಕುಳಿತುಕೊಂಡು ಪ್ರಮುಖ ಬೀದಿ ಬೀದಿಗಳಲ್ಲಿ ಮೆರವಣಿಗೆಯ ಭವ್ಯ ಕಾರ್ಯಕ್ರಮ ಜರುಗಿಸುತ್ತಾರೆ. | ೧. ವಿರಕ್ತ ವರ್ಗದ ಮಠಗಳಲ್ಲಿ ಅಡ್ಡ ಪಲ್ಲಕ್ಕಿ ಉತ್ಸವ ಕಾರ್ಯಕ್ರಮಕ್ಕೆ ಅನುವು ಮಾಡಿ ಕೊಡುವುದಿಲ್ಲ ಅವರು ಅಡಂಬರಕ್ಕೆ ನಾವು ಮೆಚ್ಚು ವುದಿಲ್ಲವೆಂದು ಅವರ ವಾದ. ಈ ಕಾರ್ಯ ಕ್ರಮಕ್ಕೆ ಅವರು ಖಂಡಿಸುತ್ತಾರೆ. |
| ೨. ಗುರುಪೀಠದವರು ಪಂಚಾಚಾರ್ಯರ ಜಯಂತಿ ಉತ್ಸವ ಕಾರ್ಯಚಟುವಟಿಕೆಗಳನ್ನು ಬಹಳ ವಿಜೃಂಭಣೆಯಿಂದ ಹಮ್ಮಿಕೊಂಡು ಬರುತ್ತಾರೆ. ಪಂಚಾಚಾರ್ಯರಿಂದಲೇ ಹಿರೇಮಠಗಳು ಉದಯಿಸಿದವೆಂದು ಅಲ್ಲದೇ ವೀರಶೈವ ಧರ್ಮ ಸಂಘಟನೆ ಮಾಡಿದರೆಂದು ಇವರ ನಿಲುವಾಗಿದೆ. | ೨. ವಿರಕ್ತ ಮಠದವರು, ಹನ್ನೆರಡನೆ ಶತಮಾನದ ಶರಣ ಶರಣೆಯರ ಜಯಂತಿ ಉತ್ಸವಗಳ ಕಾರ್ಯಕ್ರಮಗಳನ್ನು ನಡೆಸಿಕೊಂಡು ಕಾಪಾಡಿ ಕೊಂಡು ಬರುತ್ತಾರೆ. ಈ ಶರಣ ಶರಣೆಯರಿಂದಲೇ ವಿರಕ್ತ ಮಠಗಳು ಉದಯಿಸಿದವೆಂದು ಅವರ ನಿಲುವು. ಅಲ್ಲದೆ ವೀರಶೈವ ಧರ್ಮ ಸಂಘಟನೆ ಅಭಿವೃದ್ಧಿ ಪಡೆಸಿದವರೆ ಶರಣರೆಂದು ನಂಬಿರುತ್ತಾರೆ. |
| ೩. ಗುರುಪೀಠಗಳಲ್ಲಿ ಗದ್ದುಗೆ ಪೂಜೆಯನ್ನು ಮಾಡುವಾಗ ವಿಭೂತಿ, ವಿಶೇಷವಾಗಿ ಕುಕಮ (ಕೆಂಪು) ಬಳಸುತ್ತಾರೆ. | ೩. ವಿರಕ್ತ ಪೀಠದವರು ಗದ್ದುಗೆಗೆ ಪೂಜೆಯನ್ನು ಸಲ್ಲಿಸುವಾಗ ಕೇವಲ ವಿಭೂತಿಯನ್ನು ಮಾತ್ರ ಬಳಸುತ್ತಾರೆ. ಇಲ್ಲಿ ಕುಕಮ ಬಳಸುವದು ಖಂಡನೀಯವಾಗಿರುತ್ತದೆ. |
| ೪. ಗುರು ವರ್ಗದ ಮಠಗಳಿಗೆ ಹಿರೇಮಠ, ಗುರುಸ್ಥಳ ಮಠವೆಂದು ಕರೆಯುತ್ತಾರೆ. ಇಂತಹ ಮಠಗಳ ಮಠಾಧೀಪತಿಗಳಿಗೆ "ಷಟಸ್ಥಲ ಬ್ರಹ್ಮ ಮೂರ್ತಿ" ಹಾಗೂ ಮದ್ ಘನ ಚಕ್ರವರ್ತಿ ಗಳೆಂಬ ಬಿರುದಾಂಕಿತಗಳುಳ್ಳವರಾಗಿರುತ್ತಾರೆ. "ಬ್ರ.ಹಸ್ಮಠ" ವೆಂದು ಸಹ ಕರೆಯುವುದು ಕಂಡು ಬರುತ್ತದೆ. | ೪. ವಿರಕ್ತ ಮಠಗಳಲ್ಲಿ, ಚೌಕಿ ಮಠ, ಶರಣ ಮಠ, ತ್ಯಾಗಿ ಮಠ, ಸನ್ಯಾಸಿ ಮಠ, ಟಂಕ ಸಾಲಿ ಮಠಗಳೆಂದು ಕರೆಯುತ್ತಾರೆ. ಇಂತಹ ಮಠಗಳ ಪೀಠಾಧಿಪತಿಗಳಿಗೆ "ಮನಿರಂಜನ ಪ್ರಣವ ಸ್ವರೂಪಿ" ಗಳೆಂದು (ಮ. ನಿ. ಪ್ರ) ಕರೆಯುತ್ತಾರೆ. |

೫. ಗುರು ಮಠಗಳಲ್ಲಿ ಮಠಾಧಿಪತಿಯನ್ನು ಆಯ್ಕೆ ಮಾಡಬೇಕಾದರೆ, ತಮ್ಮ ಮಠದ ಶಿಷ್ಯರಾದವರಲ್ಲಿಯೋ ಯೋಗ್ಯರಾದ ಒಬ್ಬರನ್ನು ಮರಿ ಮಾಡಿಕೊಳ್ಳುವ ಅಥವಾ ತಮ್ಮ ಪೂರ್ವಾಶ್ರಮ ವಂಶದ ಕುಟುಂಬಕ್ಕೆ ಸೇರಿದವರಲ್ಲಿ ಒಬ್ಬರನ್ನು ಮರಿಯನ್ನಾಗಿ ನೇಮಕ ಮಾಡಿಕೊಳ್ಳುವ ಸಂಪ್ರದಾಯವಿದೆ, ಆದ್ದರಿಂದ ಈ ಮಠಗಳಲ್ಲಿ ಶಿಷ್ಯ ವರ್ಗದ ಮಠಗಳು ಹಾಗೂ ಪುತ್ರ ವರ್ಗದ ಮಠಗಳೆಂದು ಕಂಡುಬರುತ್ತವೆ. ಇವರೆಲ್ಲರೂ ಜಂಗಮರೇ ಇರಬೇಕೆಂಬ ನಿಯಮವಿರುತ್ತದೆ. ಆದರೆ ಜಂಗಮೇತರು ಸಹ ಇತ್ತೀಚಿಗೆ ಮಠಾಧೀಶರಾಗುತ್ತಿದ್ದಾರೆ.

೫. ವಿರಕ್ತ ವರ್ಗದ ಮಠಗಳಲ್ಲಿ ಮಠಾಧಿಪತಿಯನ್ನು ಆಯ್ಕೆ ಮಾಡಬೇಕಾದರೆ ಶಿಷ್ಯ ವರ್ಗದವರೇ ಇರಲಿ, ಪುತ್ರ ವರ್ಗದವರೆ ಇರಲಿ, ಭಕ್ತ ವರ್ಗದವರೇ ಇರಲಿ , ಜನ ಸಾಮಾನ್ಯರ ವರ್ಗದವರೇ ಇರಲಿ, ಆ ವ್ಯಕ್ತಿಯ ಘನಯೋಗ್ಯತೆಯನ್ನರಿತು ಮರಿ ಮಾಡಿಕೊಳ್ಳುವ ಸಂಪ್ರದಾಯವಿದೆ. ಇಲ್ಲಿ ಯಾವುದೇ ರೀತಿಯ ಭೇದ ಭಾವ ಭಿನ್ನತೆಗಳು ಕಂಡು ಬರುವುದಿಲ್ಲ. ಎಲ್ಲರಿಗೂ ಸಮಾನ ದೃಷ್ಟಿಯಿಂದ ಅವಕಾಶ ಗಳಿರುತ್ತವೆ.

೬. ಗುರು ಪೀಠಗಳಲ್ಲಿ ಮಠಾಧಿಪತಿಗಳಾಗ ಬಯಸುವವರು, ಬ್ರಹ್ಮಚಾರಿಗಳಾಗಿಯೂ ಇರಬಹುದು. ವಿವಾಹವಾಗಿಯಾದರೂ ಇರಬಹುದು. ಎರಡಕ್ಕೂ ಇಲ್ಲಿ ಅವಕಾಶವಿರುತ್ತದೆ. ಆದರೆ ಸಾಮಾನ್ಯವಾಗಿ ಎಲ್ಲರೂ ಬ್ರಹ್ಮಚಾರಿಯಾಗಿಯೇ ಕಂಡು ಬರುತ್ತಾರೆ. ಕೆಲವೊಂದು ಹಿರೇಮಠಗಳಲ್ಲಿ ವಿವಾಹವಾಗಿದ್ದರೆ. ಮಠಾಧಿ ಪತಿಗಳಾಗಿ ದೊರೆಯುತ್ತಾರೆ. ಉದಾ: ಬೀದರ ಜಿಲ್ಲೆಯ ಹುಮನಾಬಾದ ತಾಲೂಕಿನ ಮಹಾ ನಗರದ ಹೃದಯ ಭಾಗದಲ್ಲಿರುವ ಹಿರೇಮಠದಲ್ಲಿ ವಿವಾಹವಾದ ಶ್ರೀ ಮಲ್ಲಿಕಾರ್ಜುನ ಮಹಾಸ್ವಾಮಿಗಳು ಮಠದ ಅಧಿಕಾರವನ್ನು ವಹಿಸಿಕೊಂಡು ಮುಂದುವರೆಸಿಕೊಂಡು ಬರುತ್ತಿದ್ದಾರೆ. ಅಂದರೆ ಸಮಾಜದಲ್ಲಿ ಅವರಿಗೆ ಗೌರವವಾದ ಸ್ಥಾನ ಮಾನಗಳು ದೊರೆಯುವುದಿಲ್ಲ

೬. ವಿರಕ್ತ ವರ್ಗದ ಮಠಗಳ ಮಠಾಧಿಪತಿಯಾಗಿ ಆಯ್ಕೆ ಹೊಂದುವವರು ಬ್ರಹ್ಮಚಾರಿ ಯಾಗಿರಬೇಕೆಂದು ನಿಯಮವಿದೆ. ಹುಟ್ಟಿ ಮನೆಯನ್ನು ತ್ಯಜಿಸಿ, ಮಠವೇ ಮನೆಯೆಂದು ನಂಬಿ ಕಸಬರಿಗೆಯೇ ತನ್ನ ಜೀವಾಳವೆಂದರಿತು, ಶ್ರೀ ಮಠದಲ್ಲಿರಬೇಕಾಗುತ್ತದೆ. ವಿರಕ್ತ ಸಂಪ್ರದಾಯದ ಕೆಲ ಮಠಗಳಲ್ಲಿ ಕೆಲ ಮಠಾಧೀಶರಿಗೆ ವಿವಾಹವಾಗಿರುತ್ತದೆ. ಆದರೆ ಸಮಾಜದಲ್ಲಿ ಅಂತಹ ಮಠಾಧೀಶರಿಗೆ ಮಾನ ಸನ್ಮಾನ ಲಭಿಸುವುದು ತೀರಾ ಕಡಿಮೆ.

| | |
|---|---|
| ೭. ಗುರುಪೀಠಗಳಲ್ಲಿ ಮಹಿಳೆಯರು ಪೀಠಾಧೀಪತಿಯ ಸ್ಥಾನವನ್ನು ವಹಿಸಿಕೊಳ್ಳುವ ಹಕ್ಕಿಲ್ಲ. ಈ ಸಂಪ್ರಾದಾಯವು ಮೊದಲಿನಿಂದಲೂ ಬಂದಿದೆ. ನಾವು ಅಸ್ಪದ ಅವಕಾಶ ಕೊಡುವುದಿಲ್ಲವೆಂದು ಹಿರೇಮಠದ ಮಠಾ ಧೀಶರ ನಿಲುವಾಗಿರುತ್ತದೆ. | ೭. ವಿರಕ್ತ ಮಠಗಳಲ್ಲಿ ಮಹಿಳೆಯರು ಮಠಾಧಿಪತಿಯಾಗಲು ಅವಕಾಶಗಳಿರುತ್ತವೆ. ಅಲ್ಲದೆ ಅಧಿಕಾರದಲ್ಲಿರುವುದು ಕಂಡು ಬರುತ್ತದೆ. ಉದಾಃ ಬೀದರ ಜಿಲ್ಲೆಯ ನಿಡವಂಚಾ ಗ್ರಾಮ ವಿರಕ್ತ ಮಠದಲ್ಲಿ ಮಾತೆ ಮೈತ್ರಾದೇವಿಯರು ಪೀಠಾಧಿಪತಿಯಾಗಿ ಧಾರ್ಮಿಕ ಕಾರ್ಯಚಟುವಟಿಕೆಗಳನ್ನು ಶೈಕ್ಷಣಿಕ ಸಾಮಾಜಿಕ ಕ್ಷೇತ್ರಗಳಲ್ಲಿ ಗಣನೀಯವಾದ ಸೇವೆಯನ್ನು ಸಲ್ಲಿಸುತ್ತಿರುವುದು ಕಂಡು ಬರುತ್ತದೆ. |
| ೮. ಗುರು ವರ್ಗದ ಪೀಠಾಧಿಪತಿಗಳು ಸಾಮಾನ್ಯವಾಗಿ ಮಠದ ಆವರಣದಲ್ಲಿಯೇ ಪಾಠ – ಪ್ರವಚನ, ಧಾರ್ಮಿಕ ಗೋಷ್ಠಿಗಳನ್ನು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಿ ಉಪನ್ಯಾಸಕರನ್ನು ಕರೆಯಿಸಿ, ಭಕ್ತನಿಗೆ ಉಪದೇಶ ವಿನ್ಯಾಸಗಳನ್ನು ನೀಡುತ್ತಾರೆ. ಇತ್ತೀಚಿಗೆ ಇವರು ಮಠ ಬಿಟ್ಟು ಹೊರಗೆ ಹಲವಾರು ಸಾಂಸ್ಕೃತಿಕ ಕಾರ್ಯ ಚಟುವಟಿಕೆಗಳನ್ನು ಇಟ್ಟುಕೊಳ್ಳುತ್ತಿರುವುದು ಕಾಣುತ್ತೆವೆ. | ೮. ವಿರಕ್ತ ವರ್ಗದ ಪೀಠಾಧಿಪತಿಗಳು "ಹಳ್ಳಿಗೆ ಏಕ ರಾತ್ರಿ ಪಟ್ಟಣಕ್ಕೆ ಪಂಚರಾತ್ರಿ" ಎಂದರಿತು ಎಡಗೈಯಲ್ಲಿ ಬಸವ ಮಹಾಜೋಳಿಗೆ ಹಿಡಿದು ಬಲಗೈಯಲ್ಲಿ ದಂಡು ಸಹಿತ ದೇಶ ಸಂಚಾರಗೈಯುತ್ತ ಪಾಠ – ಪ್ರವಚನಗಳ ಮುಖಾಂತರ ಜನ ರಲ್ಲಿರುವ ಅಂಧಕಾರ ಕಲ್ಮಷಗಳನ್ನು ಕಿತ್ತೊಗೆಯಲು ಹಗಲಿರುಳು ಶ್ರಮಿಸುವರು ಇವರು ಮಠಗಳ ಒಳಗೂ – ಹೊರಗು ಕಾರ್ಯ ಚಟುವಟಿಕೆಗಳನ್ನು ಮಾಡಿ ಕೊಂಡು ಬರುತ್ತಾರೆ. |
| ೯. ಹಿರೇಮಠಗಳು ರೇವಣಸಿದ್ಧ ಮರುಳಾರಾಧ್ಯ ಏಕೋರಾಮರಾಧ್ಯ, ಪಂಡಿತಾರಾಧ್ಯ ವಿಶ್ವೇಶ್ವರಾಧ್ಯ – ಎಂಬ ಐವರು ಆಚಾರ್ಯರು ಹಾಗೂ ಪಂಚಾಚಾರ್ಯರಿಂದಲೇ ಉಜ್ಜಯನಿ, ಸದ್ದರ್ಮಿ, ಸಿಂಹಾಸನ ಮಳಿವಗ್ಗಿ, ವೃಷಸೂತ್ರ, ನಂದಿಗೋತ್ರ – ಗಳೆಂಬ ಐದು ಪೀಠಗಳನ್ನು ಒಳಗೊಂಡಿದ್ದು, ಉಜಯನಿ ರಂಭಾಪೂರಿ, ಹಿಮವತ್ ಕೇದಾರ, ಶ್ರೀ ಶೈಲ , ಕಾಶಿ, ಗಳೆಂಬ ಪಂಚ ಪವಿತ್ರ ಕ್ಷೇತ್ರಗಳಲ್ಲಿ ಹಿರೇಮಠಗಳು ಉದಯಿಸಿದವೆಂದು ಹೇಳುತ್ತಾರೆ. | ೯. ವಿರಕ್ತ ವರ್ಗದ ಮಠಗಳು ಅಸಂಖ್ಯಾತ ವಚನಕಾರರ ಶಿವಶರಣ ಹಾಗೂ ಶಿವಶರಣೆಯರಿಂದ ಈ ವಿರಕ್ತ ಸಂಪ್ರದಾಯದ ಮಠಗಳು ಉದಯಿಸಿ ದವೆಂದು ಹೇಳುತ್ತಾರೆ. |

೨. ಸಮಾನ ಅಂಶಗಳು

ವೀರಶೈವ ಮಠಗಳಲ್ಲಿ ಗುರುವರ್ಗದ ಮಠಗಳು ಹಾಗೂ ವಿರಕ್ತ ವರ್ಗದ ಮಠಗಳೆಂಬ ಎರಡು ಪ್ರಭೇದಗಳು ಕಂಡು ಬಂದರೂ, ಈ ಎರಡು ಬಗೆಯ ಮಠಗಳಲ್ಲಿ ಕೆಲವೊಂದು ಅಂಶ ತತ್ವಾಚರಣೆ ಲೋಕರೂಢಿ ಸಂಪ್ರದಾಯಗಳು ಸಮಾನ ದೃಷ್ಟಿಯಿಂದ ಕಂಡು ಬರುತ್ತವೆ. ''ಪಂಚಾಚಾರ್ಯರನ್ನು ವಚನಕಾರರನ್ನು ಗೌರವಿಸುವ ಗುರುಪೀಠ, ವಿರಕ್ತ ಪೀಠಗಳಿಗೆ ಕರ್ತವ್ಯ ಭೇದಗಳಿರಬಹುದೇ ಹೊರತು ಧ್ಯೆಯ ಭೇದವಿಲ್ಲ ಎರಡು ವೀರಶೈವ ಸಮಾಜದ ಎರಡು ಕಣ್ಣುಗಳು'' (ಡಾ॥ ಎಮ್.ಚಿದಾನಂದ ಮೂರ್ತಿ – ೨೦೦೦ – ವೀರಶೈವ ಧರ್ಮ ಭಾರತೀಯ ಸಂಸ್ಕೃತಿ – ಪುಟ – ೩೧೨) ಗುರುಪೀಠ ಹಾಗೂ ವಿರಕ್ತ ಪೀಠಗಳೆರಡು ಒಂದಕ್ಕೊಂದು ನಿಕಟವಾದ ಸಂಬಂಧವನ್ನು ಹೊಂದಿವೆ. ಇವು ಒಂದೆ ನಾಣ್ಯದ ಎರಡು ಮುಖಗಳಿದ್ದಂತೆ, ವೀರಶೈವ ಧರ್ಮದ ಎರಡು ಕಣ್ಣುಗಳಾಗಿವೆ. ವೀರಶೈವ ಧರ್ಮದ ರಕ್ಷಣೆ ಹಾಗೂ ಸಂಘಟನೆಯ ಕಾರ್ಯಕ್ಕೆ ಮಹತ್ವವಾದ ಘಟನೆಯಾಗಿದೆ. ಸಮಾಜದಲ್ಲಿ ದಾರಿತಪ್ಪಿ ಅದೋಗತಿಗೆ ನಡೆಯುವ ವ್ಯಕ್ತಿಗೆ ಸುಮಾರ್ಗದತ್ತ ಕೊಂಡುಯ್ಯುವ ಹೊಣೆಗಾರಿಕೆ ಮಠಗಳದ್ದು. ಅಜ್ಞಾನ ಅಂಧಶ್ರದ್ಧೆ ಅಸಮಾನತೆ, ಜಾತೀಯತೆ, ಮುಂತಾದ ಪಿಡುಗುಗಳನ್ನು ಕಿತ್ತೊಗೆಯಲು ಈ ಮಠಗಳ ಪಾತ್ರ ಮಹತ್ವದ್ದಾಗಿದೆ. ಗುರುಪೀಠಗಳು ಹಾಗೂ ವಿರಕ್ತ ಪೀಠದವರನ್ನು ಗೌರವಿಸುವದನ್ನು ಮೇರೆ ಮಿಂಡಯ್ಯ ಶರಣನು ತನ್ನ ಅನುಭವದ ಮೂಲಕ ವಚನವೊಂದರಲ್ಲಿ ಹೇಳಿರುವುದು ಉದಾಹರಣೆಯಾಗಿ ನೋಡಬಹುದು.

''ಎನ್ನ ಪ್ರಾಣಾ ಶುದ್ಧವಾಯಿತಯ್ಯ
ಏಕೋರಾಮ ತಂದೆಗಳ ಧರ್ಮದಿಂದ
ಎನ್ನ ಜಿಹ್ವೆ ಶುದ್ಧವಾಯಿತಯ್ಯ
ಪಂಡಿತರಾಧ್ಯರ ಧರ್ಮದಿಂದ
ಎನ್ನ ನೇತ್ರ ಶುದ್ಧವಾಯಿತಯ್ಯ
ರೇವಣಸಿದ್ಧೇಶ್ವರ ದೇವರ ಧರ್ಮದಿಂದ
ಎನ್ನ ತ್ವಕ್ಕು ಶುದ್ಧವಾಯಿತಯ್ಯ
ಸಿದ್ಧಾರಾಮೇಶ್ವರ ದೇವರ ಧರ್ಮದಿಂದ
ಎನ್ನ ಶ್ರೋತ ಶುದ್ಧವಾಯಿತಯ್ಯ
ಮರುಳ ಸಿದ್ಧೇಶ್ವರ ದೇವರ ಧರ್ಮದಿಂದ

ಎನ್ನ ಹೃದಯ ಶುದ್ಧವಾಯಿತಯ್ಯ
ಸಕಳೇಶ ಮಾದಿರಾಜಗಳ ಧರ್ಮದಿಂದ
ಎನ್ನ ಅಂತರಂಗ ಶುದ್ಧವಾಯಿತಯ್ಯ
ತೆಲಗು ಬೊಮ್ಮಯ್ಯಾಗಳ ಧರ್ಮದಿಂದ
ಎನ್ನ ಬಹಿರಂಗ ಶುದ್ಧವಾಯಿತಯ್ಯ
ಕೇಶಿರಾಜಗಳ ಧರ್ಮದಿಂದ
ಎನ್ನ ಸರ್ವಾಂಗ ಶುದ್ಧವಾಯಿತಯ್ಯ
ಬಸವಣ್ಣ, ಚನ್ನಬಸವಣ್ಣ, ಪ್ರಭು ವೀರ ಮಾಡಿವಾಳಯ್ಯಾ ಧರ್ಮದಿಂದ
ಐಘಟದೂರ ರಾಮೇಶ್ವರ ನಿಮ್ಮ ಶರಣರ ಧರ್ಮದಿಂದ
ನಾನು ಶುದ್ಧನಾದೆನಯ್ಯ'' (ಮೇರೆ ಮಿಂಡಯ್ಯನ ವಚನ)

ಶರಣ ಮೆರೆ ಮಿಂಡಯ್ಯಾನವರೇ ಹೇಳಿರುವಂತೆ ಗುರುಪೀಠ ಹಾಗೂ ವಿರಕ್ತ ಪೀಠಗಳೆರಡನ್ನು ಆರಾಧಿಸುವ, ಗೌರವಿಸುವ ಶರಣರನ್ನು ಸಮಾನ ದೃಷ್ಟಿಯಿಂದ ಕಂಡಿರುವುದು ಗಮನಾರ್ಹವಾಗಿದೆ. ಇಲ್ಲಿ ಯಾವುದೇ ರೀತಿಯ ಭೇದ – ಭಾವವು ಭಿನ್ನತೆಗಳು ಗೋಚರಿಸುವುದಿಲ್ಲ. ಈ ಎರಡು ಬಗೆಯ ವೀರಶೈವ ಮಠಗಳು ಸಮಾನತೆಯಿಂದ ತಮ್ಮ ತಮ್ಮ ಕಾರ್ಯ ಪ್ರವೃತ್ತಿಯಲ್ಲಿ ತೊಡಗಿರುವುದು ಕೆಳಗಿನ ಅಂಶಗಳ ಮೂಲಕ ನೋಡಬಹುದು.

## ಕಾಯಕಕ್ಕೆ ಪ್ರಾಮುಖ್ಯತೆ

ಗುರು ಹಾಗೂ ವಿರಕ್ತ ವರ್ಗದ ವೀರಶೈವ ಮಠಗಳು ಕಾಯಕಕ್ಕೆ ಹೆಚ್ಚಿನ ಮಹತ್ವ ಕೊಡುತ್ತವೆ. ಗುರುವಾದಡೂ ಕಾಯಕದಿಂದಲೇ ಜೀವನ್ಮುಕ್ತಿ, ಲಿಂಗವಾದಡೂ ಕಾಯಕದಿಂದಲೇ ಶಿಲೆಯ ಕುಲ ಹರಿಯುವುದು .... ಎಂಬಂತೆ ಕಾಯಕವೇ ಕೈಲಾಸ ಎಂಬ ಮಂತ್ರ ಗೌಪ್ಯವನ್ನು ಎಲ್ಲರಿಗೂ ಸಮಾನವಾದುದು ಶಿವ ಸಾಕ್ಷಾತ್ಕಾರ ಹಾಗೂ ಮನಸ್ಸಿಗೆ ಆನಂದ ರಸವನ್ನುಂಟಾಗಬೇಕಾದರೆ, ಅವನಿಗೆ ಕಾಯಕ ಮಹತ್ವದಾಗಿರುತ್ತದೆ. ಕಾಯಕದ ಅನುಭವವೇ ಕೈಲಾಸ. ಗುರುಲಿಂಗ, ಜಂಗಮರಿಗೂ ಇದು ಪ್ರಿಯವಾದುದೆಂದು ಮಠಾಧೀಶರು ಪಾಠ, ಪ್ರವಚನಗಳ ಮುಖಾಂತರ ಭಕ್ತರಿಗೆ ಬೋಧಿಸುವುದು ಸಮಾನ ದೃಷ್ಟಿಯಿಂದ ನೋಡುತ್ತೇವೆ.

## ಲಿಂಗಧಾರಣೆಗೆ ಮಹತ್ವದ ಸ್ಥಾನ

ವೀರಶೈವ ಧರ್ಮದ ಸಂಪ್ರದಾಯದ ಪ್ರಕಾರ ಮಾನವನಿಗೆ ಲಿಂಗಧಾರಣೆಗೆ ಮಹತ್ವದ ಘಟ್ಟ ಲಿಂಗದ ಕಲ್ಪನೆ ಬಹಳ ಪ್ರಾಚೀನ ಕಾಲದಲ್ಲೇ ಬಂದದ್ದು. ಆರ್ಯರು ಭಾರತಕ್ಕೆ ಬರುವುದಕಿಂತ ಮುನ್ನ ದ್ರಾವೀಡರ ಕಾಲದಿಂದಲೂ ಲಿಂಗ ಪೂಜೆಯೂ ಅಸ್ತಿತ್ವದಲ್ಲಿದ್ದುದು ತಿಳಿದು ಬರುತ್ತದೆ. ಮೊಹೆಂಜೋದಾರ್ಹರಪ್ಪ ಸಂಸ್ಕೃತಿಯ ಅವಶೇಷಗಳಲ್ಲಿ "ಲಿಂಗ" ವನ್ನು ಕಾಣುತ್ತೆವೆ. "ಪ್ರಪಂಚದ ಧರ್ಮಗಳಲ್ಲೆಲ್ಲಾ ಶೈವ ಧರ್ಮವು ಪ್ರಾಚೀನವಾದುದು ಹಾಗೂ ಪ್ರಚಾರದಲ್ಲಿದ್ದುದ್ದು. ವೀರಶೈವ ಧರ್ಮದ ಪ್ರಕಾರ ಮಗುವು ತಾಯಿ ಗರ್ಭದಲ್ಲಿದ್ದಾಗಲೇ ಅಂದರೆ, ಗರ್ಭವತಿಯ ೮ನೇ ತಿಂಗಳಿನಲ್ಲಿಯೇ ಮಗುವಿನ ಲಿಂಗಧಾರಣೆಯನ್ನು ಮಾಡುವ ಸಂಪ್ರದಾಯವಿದೆ. ಜನಸಿದ ದಿವಸವೇ ಅಥವಾ ಮರುದಿವಸ ಹೆಚ್ಚೆಂದರೆ ಐದು ವರ್ಷದವರೆಗೆ ಮನೆಯ ಗುರುಗಳನ್ನು ಮನೆಗೆ ಕರೆಯಿಸಿ ಲಿಂಗಧಾರಣೆ ಮಾಡಿಸುತ್ತಾರೆ. ಈ ಲಿಂಗಧಾರಣೆಗೆ ಮಠಾಧೀಶರೆ ಮಾಡಬೇಕೆಂಬ ನಿಬಂಧನೆಗಳಿಲ್ಲ. ಸ್ವಾಮಿಗಳು ಜಂಗಮರಾದವರು ಮಠಾಧಿಪತಿಗಳು ಅಥವಾ ಮನೆಯ ಗುರುಗಳು ಲಿಂಗೆಧಾರಣೆ ಮಾಡುತ್ತಾರೆ. ಈ ಸಂಪ್ರದಾಯ ಎರಡು ಮಠಗಳಲ್ಲಿ ಇದು ಎದ್ದು ಕಾಣುತ್ತದೆ.

## ಲಿಂಗ ದೀಕ್ಷೆ

ಮಾನವನು ಅಜ್ಞಾನದಿಂದ ಜ್ಞಾನದ ದಾರಿಯಲ್ಲಿ ಹಾಗೂ ವೀರಶೈವ ಧರ್ಮದ ಸಂಸ್ಕೃತಿಯಲ್ಲಿ ಸಾಗಬೇಕಾದರೆ ಲಿಂಗದೀಕ್ಷೆಯ ಪಾತ್ರ ಮುಖ್ಯವಾದುದು. ಇಲ್ಲಿ ವಿರಕ್ತ ಹಾಗೂ ಗುರು ವರ್ಗದ ಮಠಾಧೀಶರುಗಳಿಬ್ಬರು ಲಿಂಗದೀಕ್ಷೆಯ ಕ್ರಿಯೆಯಲ್ಲಿ ತೊಡಗುತ್ತಾರೆ. ಈ ಲಿಂಗದೀಕ್ಷೆಯಲ್ಲಿ ಏಳು ಪ್ರಕಾರಗಳು ದೊರೆಯುತ್ತವೆ. ಯಾವುದೇ ಬಗೆಯ ದೀಕ್ಷೆಯನ್ನು ಪಡೆಯಬೇಕಾದರೆ ಗುರುಗಳು ಅವಶ್ಯಕವಾಗಿರುತ್ತಾರೆ. ಗುರುಗಳಿಲ್ಲದೆ ದೀಕ್ಷೆಯ ಕ್ರಿಯೆಯಾಗುವುದಿಲ್ಲ. ಈ ಲಿಂಗದೀಕ್ಷೆಯಿಂದ ವ್ಯಕ್ತಿಯ ತನು ಮನ ಶುದ್ದಿಗೊಳ್ಳುತ್ತದೆ. ಅಂದಕಾರದಲ್ಲಿ ಮುಳುಗಿದವರಿಗೆ ಜ್ಞಾನದ ಕಣ್ಣುಗಳನ್ನು ಲಿಂಗದೀಕ್ಷೆಯ ಮೂಲಕ ತೆರೆಯುತ್ತವೆ.

ಗುರುವಿನ ದೀಕ್ಷೆಯಿಂದ ಯಾವುದೇ ಜಾತಿಯ ವ್ಯಕ್ತಿ ಅಥವಾ ಭಕ್ತ ವೀರಶೈವನಾಗುತ್ತಾನೆ. ಆ ಭಕ್ತ ಮುಂದೆ ಜಂಗಮನಾಗುತ್ತಾನೆ. ಗುರುಗಳಿಂದ ದೀಕ್ಷೆಯನ್ನು ಪಡೆದುಕೊಂಡು ಭಕ್ತ, ಕ್ರಿಯೇ, ನಿಷ್ಠೆ

ಆತ್ಮವಿಶ್ವಾಸದಿಂದವಿರುವುದು ಅನಿವಾರ್ಯವಾಗಿರುತ್ತದೆ. ಅಂಬಿಗರ ಚೌಡಯ್ಯಾನವರು ಹೇಳಿರುವಂತೆ'' ಕಟ್ಟಿದ ಲಿಂಗವ ಬಿಟ್ಟುಬಿಟ್ಟದ ಲಿಂಗಕ್ಕೆ ಹೋಗಿ ಹೊಟ್ಟಡಿಯಾಗಿ ಬೀಳುವ ಲೊ.ಚ್ಚೆಮೂಳನ ಕಂಡಡೆ ಮೆಟ್ಟಿದ ಎಡ ಪಾದರಕ್ಷೆಯ ತಕೊಂಡು ........ ಚೌಡಯ್ಯ, ಇಲ್ಲಿ ಲಿಂಗಕ್ಕೆ ಮಹತ್ವ ವಾದ ಸ್ಥಾನವಿದೆ.

ಲಿಂಗದೀಕ್ಷೆಯಿಂದ ಜಾತೀಯತೆಯನ್ನು ಹೋಗಲಾಡಿಸುತ್ತದೆ. ಲಿಂಗಧರಿಸಿದವರೆಲ್ಲ ಸಾಮಾನ್ಯರೆಂದು ಭಾವಿಸುತ್ತಾರೆ. ಸಹಪಂಕ್ತಿ ಭೋಜನೆಗೆ ಇಲ್ಲಿ ಅವಕಾಶವಿರುತ್ತದೆ. ಯಾವುದೇ ರೀತಿಯ ಭೇದ ಭಾವ ಜಾತೀಯತೆ ಕಂಡು ಬರುವುದಿಲ್ಲ.

### ಅನ್ನದಾಸೋಹ ಮಾಡುವುದು

ಗುರು ಹಾಗೂ ವಿರಕ್ತ ವರ್ಗದ ಮಠಗಳೆರಡರಲ್ಲಿ ಅನ್ನದಾಸೋಹ ನಡೆಸುವ ಪರಿ ಕಂಡು ಬರುತ್ತದೆ. ''ಅನ್ನದಾಸಕ್ಕಿಂತ ಮತ್ತೊಂದು ದಾನವಿಲ್ಲ'' ಎಂಬಂತೆ ಮಠಗಳಲ್ಲಿ ಅನ್ನ ದೇವರ ಮುಂದೆ ಇನ್ನು ದೇವರುಂಟೆ? ಎಂಬಂತೆ ಮಠಾಧಿಪತಿಗಳು ಇಲ್ಲವೇ ಅವರ ಪರವಾಗಿ ಶಿಷ್ಯರುಭಕ್ತರ ಮನೆಯಲಿ ಅನ್ನ ಭಿಕ್ಷೆ (ಕಂತಿ ಭಿಕ್ಷೆ) ಬೇಡುವ ಮೂಲಕ ಸಂಗ್ರಹಿಸಿದ (ಅನ್ನವು) ಪ್ರಸಾದದ ರೂಪದಲ್ಲಿ ಪರಿಗಣಿಸಲಾಗುತ್ತದೆ. ಮಠದ ಬೇರೆ ಬೇರೆ ಮೂಲಗಳಿಂದ ಬಂದ ಆದಾಯವು ಈ ಪ್ರಸಾದದಲ್ಲಿ ಒಟ್ಟು ಗೂಡಿಸಿ ಮಠಕ್ಕೆ ಬಂದ ಭಕ್ತರಿಗೆ ''ದಾಸೋಹ'' ಸೇವೆಯನ್ನು ಸಲ್ಲಿಸುವ ಸಂಪ್ರದಾಯ ಕಂಡು ಬರುತ್ತದೆ. ಇದು ಪರೋಪಕಾರ ವಾಗಿರುತ್ತದೆ. ಇಲ್ಲಿ ಜಾತೀಯತೆಯನ್ನು ಹೋಗಲಾಡಿಸುವ ಕ್ರಿಯೇಯಾಗಿ ಎಲ್ಲರೂ ಸಮಾನರಾಗಿ ಕಾಣುತ್ತಾರೆ.

### ಅಂತರ ಜಾತಿ ವಿವಾಹಕ್ಕೆ ಪ್ರೋತ್ಸಾಹ

ಗುರುವರ್ಗದ ಮಠವೇ ಇರಲಿ, ಅಲ್ಲದೆ ವಿರಕ್ತ ಮಠವೇ ಇರಲಿ, ಅಲ್ಲಿ ಜಾತಿ, ಮತ, ಕುಲ ಗೋತ್ರಗಳನ್ನು ಆಚೆ ಸರಿಸಿದ ಮಠಾಧೀಶರು ಅಂತರ್ ಜಾತಿ ವಿವಾಹಕ್ಕೆ ಪ್ರೋತ್ಸಾಹವನ್ನು ನೀಡುತ್ತಾರೆ. ಜತೆಗೆ ಅವರವರ ಸಂಬಂಧವನ್ನು ಬೆಳೆಸಬೇಕೆಂದು ಶ್ರಮವಹಿಸುವುದು ಕಂಡು ಬರುತ್ತದೆ. ಅಲ್ಲದೆ ಸಮಾಜದಲ್ಲಿ

ಹಬ್ಬಿರುವ ಮೂಢ ನಂಬಿಕೆ, ಮೇಲು, ಕೀಳೆಂಬ ಭಾವನೆ, ಅಂತಸ್ತುಗಳನ್ನು ನಿರ್ಮೂಲನೆ ಮಾಡಿ ಅಸ್ಪೃಶ್ಯತಾ ನಿರ್ಮೂಲನೆ ನಿವಾರಣೆ ಮಾಡಲು ಪ್ರಯತ್ನಿಸುತ್ತಿರುವುದು ಕಂಡು ಬರುತ್ತದೆ.

ಅನಾಥಾಶ್ರಮ ನಡೆಸುವುದು

ಗುರು ಹಾಗೂ ವಿರಕ್ತ ಮಠಗಳೆರಡರಲ್ಲಿ ಬಾಲಕರ ಅನಾಥಶ್ರಮವನ್ನು ಪ್ರಾರಂಭಿಸುತ್ತಾರೆ. ತಂದೆ ತಾಯಿ ಬಂದು ಬಳಗಗಳನ್ನು ಕಳೆದುಕೊಂಡ ಅನಾಥವಾಗಿ ಬಾಳುತ್ತಿದ್ದ ಚಿಕ್ಕ ಬಾಲಕ ಬಾಲಕಿಯರನ್ನು ಶ್ರೀಮಠಕ್ಕೆ ಕರೆದು ಅವರಿಗೆ ಶೈಕ್ಷಣಿಕತೆಯನ್ನು ಒದಗಿಸಿಕೊಡುವುದು, ಎಲ್ಲಾ ಜವಾಬ್ದಾರಿಯನ್ನು ಮಠಾಧೀಶರೆ ವಹಿಸಿಕೊಂಡು ಪಾಲನೆ ಪೋಷಣೆ ಮಾಡುವರು.

ಸಮಾಜದೊಡನೆ ಸಂಬಂಧ ಹೊಂದುವುದು

ಎಲ್ಲ ವರ್ಗದ ಮಠಗಳು ಸಮಾಜದ ಅವಿಭಾಜ್ಯ ಅಂಗ. ಸಮಾಜದೊಡನೆ ನಿಕಟವಾದ ಸಂಬಂಧ ಹಾಗೂ ಸಂಪರ್ಕವನ್ನು ಹೊಂದುತ್ತವೆ. ಮಠಾಧೀಶರು ಕೆಲವೊಂದು ಸಂಬಂರ್ಧಗಳಲ್ಲಿ ಸಮಾಜದ ಮುಖಂಡರ, ಹಿರಿಯರ ಮಾರ್ಗದರ್ಶನದಲ್ಲಿಯೇ ನಡೆಯುತ್ತಾರೆ. ಭಕ್ತರೊಡನೆ ಆತ್ಮವಿಶ್ವಾಸಗಳನ್ನಿಟ್ಟು ಕೊಳ್ಳುತ್ತಾರೆ.

ಧಾರ್ಮಿಕ ಸೇವೆ ಸಲ್ಲಿಸುವುದು

ಧಾರ್ಮಿಕ ಕೇಂದ್ರ ಬಿಂದುವಾಗಿ ವೀರಶೈವ ಮಠಗಳು ಭಾರತೀಯ ನಾಗರೀಕತೆ ಆರಂಭದಿಂದಲೂ ಅಸ್ತಿತ್ವದಲ್ಲಿವೆ. ಧಾರ್ಮಿಕ ಕಾರ್ಯ ಚಟುವಟಿಕೆಗಳು ಹಾಗೂ ಶರಣರ ತತ್ವಗಳ ಬೋಧನೆಯ ಕಾರ್ಯ ಕ್ರಮಗಳು ಸದಾ ನಡೆಸಿಕೊಂಡು ಬರುತ್ತವೆ. ವೀರಶೈವ ಧರ್ಮ ತತ್ವಾಚಾರಣೆಗಳ ಪ್ರಚಾರ, ಧಾರ್ಮಿಕ ಸಂಘಟನೆಯ ಕಾರ್ಯ ಪ್ರವೃತ್ತಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಪಾಠ– ಪ್ರವಚನಗಳ ಮುಖಾಂತರ ಜನರಲ್ಲಿ ಒಲುವು ಮೂಡಿಸುವುದು, ಧಾರ್ಮಿಕ ವಿವಿಧ ಗೋಷ್ಠಿಗಳನ್ನು ಏರ್ಪಡಿಸಿ ನಾಡಿನ ಹೆಸರಾಂತ ವಿದ್ವಾಂಸರನ್ನು, ಪಂಡಿತರನ್ನು, ಲೇಖಕರನ್ನು, ವಿಮರ್ಶಕರನ್ನು, ಕಲಾವಿದರನ್ನು ಕರೆಯಿಸಿ ಧರ್ಮೋಪದೇಶ ಉಪನ್ಯಾಸ ಗೋಷ್ಠಿಗಳ ನಡೆಸಿ, ಧರ್ಮಸಂಘಟನೆ ಮಾಡುವರು.

### ಶೈಕ್ಷಣಿಕ ಸೇವೆ ಸಲ್ಲಿಸುವುದು

ವೀರಶೈವ ಮಠಗಳಿಗೂ ಹಾಗೂ ಶೈಕ್ಷಣಿಕತೆಗೂ ತುಂಬಾ ಹತ್ತಿರ ಸಂಬಂಧವಿದೆ. ಅಂತೆಯೇ ಪ್ರತಿಯೊಂದು ವೀರಶೈವ ಮಠಗಳಲ್ಲಿ (ಕೆಲವೊಂದು ಚಿಕ್ಕ ಪುಟ್ಟ ಮಠಗಳ ಹೊರತು) ಶೈಕ್ಷಣಿಕ ಸಂಸ್ಥೆಯನ್ನು ತೆರೆದು ಅದರ ಮುಖಾಂತರ ಪ್ರಾಥಮಿಕ, ಪ್ರೌಢ, ಪದವಿ ಪೂರ್ವ ಮಹಾವಿದ್ಯಾಲಯಗಳು, ವೈದ್ಯಕೀಯ ಸೇವೆ ತಮ್ಮ ತಮ್ಮ ಶಕ್ತಿಗನುಸಾರವಾಗಿ, ಶೈಕ್ಷಣಿಕ ಸೇವೆಯನ್ನು ಸಲ್ಲಿಸುತ್ತಿವೆ. ಮಠಗಳಲ್ಲಿ ಗುರುಕುಲಗಳನ್ನು ತೆರೆಯುತ್ತಿದ್ದಾರೆ. ಇದರಿಂದಾಗಿ ಸಮಾಜದಲ್ಲಿ ಜನರ ಸ್ಪಂದನೆಗೆ ಹತ್ತಿರವಾಗಿದೆ. ಇತ್ತೀಚಿಗೆ ಕೆಲವೊಂದು ವೀರಶೈವ ಮಠಗಳು ಶೈಕ್ಷಣಿಕ ಸಂಸ್ಥೆಯನ್ನು ಕೇಂದ್ರವಾಗಿಟ್ಟುಕೊಂಡು ಕೋಟಿಗಟ್ಟಲೆ ಹಣ ಸಂಪಾದನೆಯಲ್ಲಿ ಮುಳುಗಿವೆ. ಮಠಾಧೀಶರಿಗೆ ಇದೊಂದು ಆದಾಯದ ವೃತ್ತಿಯಾಗಿ ಪ್ರವಹಿಸಿಕೊಂಡಿದ್ದಾರೆ. ನಿಜವಾಗಿಯೂ ಪುಕ್ಕಟೆಯಾಗಿ ಶೈಕ್ಷಣಿಕ ಸೇವೆಯನ್ನು ಕೊಡುತ್ತಿರುವುದು ಕಡಿಮೆಯಾಗುತ್ತಿದೆ.

### ಮಠ ಮಠಾಧಿಪತಿ

ಗುರು ವರ್ಗದ ಮಠವೇ ಇರಲಿ, ವಿರಕ್ತ ವರ್ಗದ ಮಠವೇ ಇರಲಿ, ಪ್ರತಿಯೊಂದು ವೀರಶೈವ ಮಠಗಳಲ್ಲಿ ಒಬ್ಬ ಮಠಾಧಿಪತಿಯ ಸ್ಥಾನವಿರುತ್ತದೆ. ಮಠಾಧಿಪತಿಯರು ಮುಪ್ಪಿನಾವಸ್ಥೆಗೆ ಬಂದರೆ ತಮ್ಮ ಮಠದ ನಿಯಮನುಸಾರವಾಗಿ ಯೋಗ್ಯವಾದ ವ್ಯಕ್ತಿಯನ್ನು ಮಠಕ್ಕೆ ಮರಿಯನ್ನಾಗಿ ಕ್ರಿಯೆಗಳ ಮೂಲಕ ನೇಮಕ ಮಾಡಿಕೊಳ್ಳುವ ಸಂಪ್ರದಾಯ ಕಂಡು ಬರುತ್ತದೆ. ಈ ಮಠಾಧಿಪತಿಯು ಮಠದ ಎಲ್ಲಾ ಜವಾಬ್ದಾರಿಯನ್ನು ಪಾಲಿಸಿಕೊಂಡು ಬರಬೇಕಾಗುತ್ತದೆ.

ವೀರಶೈವ ಮಠಗಳು ಸಮಾಜದೊಡನೆ ತೀರಾ ಹತ್ತಿರವಾಗಿ ಸ್ಪಂದಿಸಿವೆ, ಧಾರ್ಮಿಕ ಸಾಂಸ್ಕೃತಿಕ ಕಾರ್ಯ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಾರೆ. ಸಾಮಾನ್ಯವಾಗಿ ಪ್ರತಿಯೊಂದು ಮಠಗಳಲ್ಲಿ ಪೂಜಾ ಕೋಣೆ, ಧ್ಯಾನ ಮಂದಿರ, ಶೈಕ್ಷಣಿಕ ಮಂದಿರ, ದಾಸೋಹ ಮನೆ, ಸ್ನಾನದ ಮನೆ, ವಿಧ್ಯಾರ್ಥಿಗಳ ವಸತಿ ನಿಲಯ, ಅತಿಥಿಗಳ ಕೋಣೆ, ಹೀಗೆ ಮುಂತಾದವುಗಳು ಎಲ್ಲ ವರ್ಗದ ಮಠಗಳಲ್ಲಿ ದೊರೆಯುತ್ತವೆ. ಮಠಾಧೀಶರು ಶರಣರ ಆದರ್ಶ ತತ್ವಗಳನ್ನು ತಪ್ಪದೆ ನಡೆಸಿಕೊಂಡು ಬರುತ್ತಾರೆ. ಅಲ್ಲದೆ ಜನರಿಗೆ ಪಾಠ – ಪ್ರವಚನಗಳ ಮುಖಾಂತರ ಭೋದಿಸುತ್ತಾರೆ. ವೀರಶೈವ ಮಠಗಳಲ್ಲಿ ಮಠಾಧಿಪತಿಯ ಸ್ಥಾನಮಾನ್ಯ ವಾಗಿರುತ್ತದೆ. ಮಠಾಧೀಪತಿಗಳಿಲ್ಲದೇ ಹೋದರೆ ಮಠಗಳು ಹಾಳು ಬೀಳುತ್ತವೆ. ಮಠಾಧೀಶರೆಂದರೆ ಮಂದಿರಗಳಲ್ಲಿ ಪೂಜಾರಿಗಳಿದಂತೆ ಮಠಗಳಲ್ಲಿ ಮಠಾಧೀಶರಿರುತ್ತಾರೆ.

೩. ವಿಶಿಷ್ಟ ಅಂಶಗಳು

- ವೀರಶೈವ ಮಠಗಳು ಧಾರ್ಮಿಕ ತತ್ವಾಚರಣೆಯ ವಚನ ಸಾಹಿತ್ಯವನ್ನು ರಕ್ಷಣೆ ಹಾಗೂ ಪ್ರಚಾರ ಮಾಡುವ ಕೇಂದ್ರ ಸ್ಥಳಗಳಾಗಿವೆ.

- ಮಠಾಧೀಶರು ಲಿಂಗಧಾರಣೆಯ ಕಾರ್ಯವನ್ನು ಮಾಡುವರು. ಹಾಗೂ ಮಾನವನು ಅಜ್ಞಾನದಿಂದ ಜ್ಞಾನದ ಮಾರ್ಗದಲ್ಲಿ ನಡೆಯಲು, ವೀರಶೈವ ಸಂಸ್ಕೃತಿಯ ಪ್ರಕಾರ ಅವನಿಗೆ ಲಿಂಗದೀಕ್ಷೆ ಕೊಡುವ ಕಾರ್ಯಕ್ರಮ ಹಮ್ಮಿಕೊಳ್ಳುವುದು,

- ಸಮಾಜವಲ್ಲಿ ತುಂಬಿರುವ ಅಸ್ಪೃಶ್ಯತಾ, ಕಂದಚಾರ, ಮೂಢ ನಂಬಿಕೆ, ಮೇಲು – ಕೀಳೆಂಬ ತಾರತಮ್ಯ ಹೋಗಲಾಡಿಸಲು ಮಠಾಧೀಶರು ಪಾಠ ಪ್ರವಚನಗಳು ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಳ್ಳುವುದು.

- ಸಾರ್ವಜನಿಕರಿಗೆ ಅನ್ನ ಹಾಗೂ ಜ್ಞಾನ ದಾಸೋಹಗಳನ್ನು ಪೂರೈಸುವುದು.

- ಗದ್ದುಗೆಗೆ ಪ್ರಾಮುಖ್ಯತೆಯನ್ನು ನೀಡುವುದರ ಮುಖಾಂತರ ಜಯಂತಿಗಳನ್ನಾಚರಿಸುವುದು.

- ಸಾಹಿತ್ಯ ಉಳಿಸುವುದರೊಂದಿಗೆ ಧರ್ಮ ಗ್ರಂಥಗಳನ್ನು ಪ್ರಕಟಿಸಿ ಪ್ರಸಾರ ಮಾಡುವುದು.

- ಸರ್ವಧರ್ಮದವರೊಡನೆ ನಿಕಟ ಸಂಬಂಧ ಹಾಗೂ ಸಂಪರ್ಕಗಳನ್ನಿಟ್ಟುಕೊಳ್ಳುವುದು.

- ಸಾಂಸ್ಕೃತಿಕ ಹಾಗೂ ಧಾರ್ಮಿಕ ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಳ್ಳುವುದು.

- ಸಮಾಜವು ನಿರ್ಮಲ ಹಾಗೂ ಭಕ್ತಿಪೂರ್ಣವನ್ನಾಗಿ ಮಾಡುವುದು.

- ಆಶ್ರಯ ದೊರೆಯದವರಿಗೆ ಆಶ್ರಯದಾತನಂತೆ ಕಾರ್ಯನಿರ್ವಹಿಸುವುದು.

- ಸಮಾಜದಲ್ಲಿ ಸೇವೆ ಸಲ್ಲಿಸಿದ ಪ್ರತಿಭಾವಂತರಿಗೆ ಗುರುತಿಸಿ ಪುರಸ್ಕಾರ ನೀಡಿ ಗೌರವದಿಂದ ಪ್ರೋತ್ಸಾಹಿಸುವುದು.

- ಭಕ್ತರು ತನು, ಮನ, ಧನದ ದಾಸೋಹಂಭಾವದಿಂದ ದವಸ ಧಾನ್ಯಗಳನ್ನು ಶ್ರೀ ಮಠಕ್ಕೆ ಅರ್ಪಿಸುವುದು.

- ಮಠಗಳ ಮಠಾಧೀಶರಿಗೆ ಭಕ್ತರು ದೇವರೆಂದು ಗೌರವಿಸುವುದು.

- ಗದ್ದುಗೆಗಳ ಮೇಲೆ ಪೂರ್ವ ಪೀಠಾಧಿಪತಿಯ ಮೂರ್ತಿ ಸ್ಥಾಪನೆ ಮಾಡಿರುತ್ತಾರೆ. ಕೆಲವೊಂದು ಗದ್ದುಗೆಗಳ ಮೇಲೆ ಪಾದಗಳಿರಡು ಹಾಕಿರುತ್ತಾರೆ. ಕೆಲವೊಂದು ಮಠಗಳಲ್ಲಿ ಗದ್ದುಗೆಗಳ ಮೇಲೆ ಲಿಂಗದ ಸ್ವರೂಪ ಕಂಡು ಬರುತ್ತದೆ. ಭಕ್ತರು ಈ ಗದ್ದುಗೆಗಳ ದರ್ಶನ ಪಡೆದುಕೊಳ್ಳುತ್ತಾರೆ. ಈ ಗದ್ದುಗೆಗಳೇ ಮುಂದೆ ಕಾಲಾಂತರವಾಗಿ ಭವ್ಯ ಮಂದಿರವಾಗಿ ಕಂಗೊಳಿಸುತ್ತವೆ.

- ಪೂರ್ವ ಪೀಠಾಧಿಪತಿಗಳ ಜೀವಂತ ಸಮಾಧಿಸ್ಥರಾದರೆ ಅವರ ಗದ್ದುಗೆಯು ಗವಿಯಲ್ಲಿ ಕಂಡು ಬರುತ್ತವೆ.

- ಮಠಗಳು ಸಮಾಜದ ಅವಿಭಾಜ್ಯ ಅಂಗವಾಗಿವೆ.

✿✿

## ಸಮಾರೋಪ

ಹೈದ್ರಾಬಾದ – ಕರ್ನಾಟಕ ವ್ಯಾಪ್ತಿಯು ತುಂಬಾ ವಿಶಾಲವಾದುದು ಅಷ್ಟೇ ಮಹತ್ವಪೂರ್ಣವಾದುದು. ಬೀದರ, ಗುಲಬರ್ಗಾ , ರಾಯಚೂರು ಹಾಗೂ ಕೊಪ್ಪಳ ಜಿಲ್ಲೆಗಳು ಹಿಂದೆ ಹೈದ್ರಾಬಾದ ನಿಜಾಂರ ಆಳ್ವಿಕೆಯಲ್ಲಿದ್ದವು. – ಈ ಭಾಗದ ಜನರು ಅನೇಕ ಕಷ್ಟ ನಷ್ಟ ತೊಂದರೆಗಳನ್ನು ಅನುಭವಿಸಿದರು. ಮಠ – ಮಾನ್ಯಗಳಿಗೆ ನಿಜಾಮರು ಯಾವುದೇ ರೀತಿಯ ಅನ್ಯಾಯ ಹಿಂಸೆಯನ್ನು ಕೊಡಲಿಲ್ಲ. ನಿಜಾಮನ ಆಳ್ವಿಕೆಯಲ್ಲಿ ಮಠಗಳಿಗೆ ಉಂಬಳಿಯಾಗಿ ದಾನ ನೀಡಿದರೆಂದು ಹಲವಾರು ಮಠಗಳ ಇತಿಹಾಸದ ಸಂಗತಿಯಿಂದ ತಿಳಿದು ಬರುತ್ತದೆ. ನಿಜಾಮರಿಗೆ ಮಠ, ಮಂದಿರ, ಗುರುಗಳು, ಜಂಗಮರು, ತ್ಯಾಗಿಗಳು . . . . . . ಎಂಬ ಗೌರವವಾದ ಸ್ಥಾನವನ್ನು ಕೊಡುತ್ತಿದರು. ಮುಖಾಮುಖಿ ವರ್ತಿಸಿದರೆ ಅವರು ಸಹಿಸುತ್ತಿರಲಿಲ್ಲ. ಧರ್ಮ ಪ್ರಚಾರಕ್ಕೆ ಪ್ರೋತ್ಸಾಹ ಕೊಡುತ್ತಿರಲಿಲ್ಲ.

ಹಲವಾರು ಕಾಲದವರೆಗೆ ಹೈದ್ರಾಬಾದ – ನಿಜಾಮನು ಈ ಭಾಗವನ್ನಾಳಿದ ನಂತರ ಭಾರತಕ್ಕೆ ಸ್ವತಂತ್ರ ದೊರೆತ ಮೇಲೆ ಈ ಭಾಗ ಕರ್ನಾಟಕದಲ್ಲಿ ಸೆರ್ಪಡೆಯಾಗಿದ್ದರಿಂದ ಈಗಲೂ ಈ ಭಾಗಕ್ಕೆ "ಹೈದ್ರಾಬಾದ – ಕರ್ನಾಟಕ" ವೆಂದು ಕರೆಯುವ ವಾಡಿಕೆ ಇದೆ. ಈ ಪ್ರದೇಶದಲ್ಲಿ ಸುಮಾರು ನೂರಾ ಐವತ್ತು ವೀರಶೈವ ಮಠಗಳು ಅಸ್ತಿತ್ವದಲ್ಲಿದ್ದು, ಸುಮಾರು ಎಂಬತ್ತೇಳಕ್ಕೂ ಹೆಚ್ಚು ವೀರಶೈವ ಮಠಗಳು

ಪ್ರಚಲಿತದಲ್ಲಿವೆ. ಇನ್ನೂ ಸುಮಾರು ಐವತ್ತು ಮಠಗಳು ಹಾಳು ಬಿದ್ದಂತಿವೆ. ಆದಾಯವಿಲ್ಲದ ಮಠಗಳಲ್ಲಿ ಗುರುಗಳಿಲ್ಲ, ಮಠಾಧೀಶರ ಹಾಗೂ ಗ್ರಾಮದ ಭಕ್ತರ ಮಧ್ಯೆ ಕಲಹ ಉಂಟಾದಾಗ ಆ ಮಠಾಧೀಶ ಬೇರೆ ಮಠವನ್ನು ಸ್ಥಾಪಿಸಿದ್ದರಿಂದ ಆ ಮಠ ಹಾಳು ಬಿದ್ದಿರುತ್ತದೆ. ಹಾಗೂ ಅತಿಚಿಕ್ಕ ಗ್ರಾಮವಾದ್ದರಿಂದ ಮಠಾಧೀಶರು ಅಲ್ಲಿರಲು ಒಪ್ಪದೆ ಇರುವುದರಿಂದ ಮಠಗಳು ಹಾಳಾಗಲು ಕಾರಣಗಳಾಗಿವೆ. ಕೆಲವೊಂದು ಗ್ರಾಮದಲ್ಲಿ ಮಠಗಳಿದ್ದರೂ ಗ್ರಾಮದ ದೊಡ್ಡ ದೊಡ್ಡ ಹೋಬಳಿ ಗ್ರಾಮಗಳಲ್ಲಿ ಮಠವನ್ನು ಸ್ಥಾಪಿಸುವರು. ವಿರಕ್ತ ಮಠಗಳು ಅಧಿಕವಾದಂತೆ ಹಿರೇಮಠಗಳು ಸ್ವಲ್ಪ ಕಡಿಮೆಪ್ರಮಾಣದಲ್ಲಿ ಲಭಿಸುತ್ತಿವೆ.

ಹನ್ನೆರಡನೇ ಶತಮಾನದಲ್ಲಿ ಕಲ್ಯಾಣದಲ್ಲಿ ನಡೆದ ಬಸವಣ್ಣನವರ ಕ್ರಾಂತಿಯ ನಂತರ ವೀರಶೈವ ಧರ್ಮದ ಮಠಗಳ ಸ್ವರೂಪ ಕಾಲ ಕಾಲಕ್ಕೆ ಸಾಕಷ್ಟು ಬದಲಾವಣೆಯನ್ನು ಹೊಂದಿ ಪುನಾರಚನೆಗೊಂಡವು. ಅವು ಧಾರ್ಮಿಕ ತತ್ವಗಳನ್ನು ರಕ್ಷಿಸಿ, ಉಳಿಸಿ, ಬೆಳೆಸಲು ಪ್ರಯತ್ನಿಸುತ್ತಿವೆ. ಅಧ್ಯಾತ್ಮದ ತಳಹದಿಯ ಮೇಲೆ ತನ್ನ ತತ್ವಗಳನ್ನು ರೂಢಿಸಿಕೊಂಡು ಬಂದಿವೆ, ಹಾಗೂ ಬರುತ್ತಿವೆ.

ವೀರಶೈವ ಧರ್ಮದ ಅಂಗವೆನಿಸಿದ ಗುರು, ಲಿಂಗ, ಜಂಗಮ , ವಿಭೂತಿ,ರುದ್ರಾಕ್ಷಿ, ಮಂತ್ರ, ಪಾದೋದಕ, ಹಾಗೂ ಪ್ರಸಾದಗಳೆಂಬ ಅಷ್ಟಾವರಣಗಳು ವೀರಶೈವ ಮಠಗಳ ವೈಶಿಷ್ಟ್ಯಪೂರ್ಣವಾದ ಕಟ್ಟಳೆಗಳಾಗಿವೆ. ಅಧ್ಯಾತ್ಮಿಕತೆಯಿಂದ ಅಂತರಂಗ ಬಹಿರಂಗ ಶುಚಿಗೊಳಿಸುವ ಸಂಕೇತಗಳು , ಇವುಗಳ ತತ್ವಗಳು – ಹಾಗೂ ತತ್ವಾತೀತ ಆಚರಣೆಗಳನ್ನು ಮಠಾಧೀಶರು ನಡೆಸಿಕೊಂಡು ಬರುತ್ತಿದ್ದಾರೆ.

ಧಾರ್ಮಿಕ ಹಿನ್ನಲೆಯಲ್ಲಿಯೇ ಹುಟ್ಟಿಕೊಂಡಿರುವ ವೀರಶೈವ ಮಠಗಳಲ್ಲಿ ಹಲವಾರು ವಿಧಗಳು ಕಂಡು ಬಂದರೂ ಅವುಗಳಲ್ಲಿ ಮುಖ್ಯವಾಗಿ ಗುರು ವರ್ಗದ ಮಠ ಹಾಗೂ ವಿರಕ್ತ ಮಠಗಳು ಎದ್ದು ಕಾಣುವಂಥವು. ಈ ಎರಡು ಪ್ರಕಾರದ ವೀರಶೈವ ಮಠಗಳ ಧ್ಯೆಯೋದ್ದೇಶ ಒಂದೆಯಾಗಿರುತ್ತದೆ. ಸಮಾಜೋಧಾರ್ಮಿಕ ಜಾಗೃತಿಯೊಂದಿಗೆ ಸಮಾಜದಲ್ಲಿ ಹಬ್ಬಿರುವ ಕಂದಚಾರ ಮೂಢನಂಬಿಕೆ, ಅಸ್ಪೃಶ್ಯತಾ ನಿವಾರಣೆ, ಮೇಲುಕೀಳೆಂಬ ಭಾವನೆ ಕಿತ್ತೊಗೆಯಲು ಶರಣರ ತತ್ವಾಚಾರಣೆ ಯನ್ನು ನಿಯಮಾನುಸಾರ ನಡೆಸಿಕೊಂಡು ಬರಲು ಪ್ರಯತ್ನಿಸುತ್ತಿದ್ದಾರೆ.

ಲಿಂಗಧಾರಣೆ ಮತ್ತು ಲಿಂಗದೀಕ್ಷೆ ಗಳೆರಡು ವೀರಶೈವ ಧರ್ಮದ ಕುರುಹುಗಳಾಗಿವೆ. ವೀರಶೈವ ಸಿದ್ಧಾಂತ ಪ್ರಕಾರದ ಮಗು ಜನಿಸಿದ ಕೂಡಲೇ ಅಂದಿನ ದಿವಸವೆ ಜಂಗಮರನ್ನು ಕರೆಯಿಸಿಕೊಂಡು ಬಂದು ಕ್ರಿಯಾಚರಣೆಗಳ ಅಯ್ಯಾಚಾರದ ಮೂಲಕ ಆ ಮಗುವಿಗೆ ಲಿಂಗಧಾರಣೆಯನ್ನು ಮಾಡುತ್ತಾರೆ – ಅದು

ಬಿಚ್ಚಿದ ಒಂದು ಲಿಂಗವಿರುತ್ತದೆ. ಅದಕ್ಕೆ ವಿಭೂತಿ ಭಸ್ಮ ಹಚ್ಚಿ ಹೊಸ ಬಟ್ಟೆಯಲ್ಲಿ ಕಟ್ಟಿ ಆ ಮಗುವಿಗೆ ಅರ್ಪಿಸುತ್ತಾರೆ. ಮರುದಿವಸವಾದರೂ ಮಾಡಬಹುದು. ಆದರೆ ಇಂದೂ ಹೆರಿಗೆಗಳು ದವಾಖಾನೆಯಲ್ಲಾಗುವ ಕಾರಣ ಈ ಲಿಂಗಧಾರಣೆಯನ್ನು ಮೂರು ದಿವಸಕ್ಕೆ ಅಥವಾ ಐದನೆ ದಿವಸಕ್ಕೆ ಮುಂದುಡಲಾಗುತ್ತದೆ.

ಮಗುವು ಜನಿಸಿದ ಎಂಟನೆ ವರ್ಷದಿಂದ ಹಿಡಿದು ಪ್ರೌಢ ವ್ಯವಸ್ಥೆ ಪ್ರಾರಂಭವಾಗುತ್ತಿದ್ದಂತೆ ಈ ಲಿಂಗಧೀಕ್ಷೆಯನ್ನು ಕೊಡುವ ಸಂಪ್ರದಾಯವಿದೆ. ಅರಿವಿನ ಜ್ಞಾನವು ಬರುತ್ತಿದ್ದಂತೆ ಆ ಮಗುವು ಮುಂದೆ ಸುಮಾರ್ಗದತ್ತ ಸಾಗಲು ವೀರಶೈವ ಧರ್ಮ ತತ್ವಗಳ ಭೋದನೆ ಓಂ ನಮಃ ಶಿವಾಯ ಎನ್ನುವ ಮಂತ್ರವನ್ನು ಪಠಿಸುತ್ತಾರೆ. ಲಿಂಗದೀಕ್ಷೆ ಪಡೆದ ವ್ಯಕ್ತಿ ಯಾರೆ ಆಗಿರಲಿ ಅವರು ಶರಣರ ಮಾರ್ಗದಲ್ಲಿಯೇ ನಡೆಯಬೇಕಾಗುತ್ತದೆ. ಕರಗಸದಂತೆ ಬರುತ್ತಾ ಕೊಯುತ್ತದೆ ಹೋಗುತ್ತಾ ಕೊಯುತ್ತದೆ. ಈ ಲಿಂಗದೀಕ್ಷೆಯಿಂದ ಷಟಸ್ಥಲ ಮಾರ್ಗವಲಂಬಿಯಾಗಿರುವ ಸಾಧಕನಿಗೆ ಮೊದಲು ಅರುಹಿನ ಕುರುವಾದ ಲಿಂಗಬೇಕೆ ಬೇಕು. ಮಗವು ಜನಿಸಿದಾಗಿನಿಂದ ಸಾಯುವರೆಗೆ ಹಾಗೂ ಸತ್ತ ಮೇಲೆ ಸಂಸ್ಕಾರ ಮಾಡುವ ಸಂದರ್ಭದಲ್ಲಿ ಲಿಂಗಬೇಕಾಗುತ್ತದೆ.

ದೀಕ್ಷೆ ಪಡೆದ ಯಾರೇ ಆಗಿರಲಿ ಆತ ಪೂರ್ವಾಶ್ರಮವನ್ನು ಮರೆತು ವೀರಶೈವ ಸಂಪ್ರದಾಯದ ನಿಷ್ಠಾವಂತ ಆರಾಧಕನಾಗುತ್ತಾನೆ. ಇದರಿಂದ ಅವನು ವೀರಶೈವ ತತ್ವ ಸಂಸ್ಕೃತಿಯಲ್ಲಿ ನಡೆಯಲು ಸುಲಭವಾಗುತ್ತದೆ. ಅಲ್ಲದೆ ಲಿಂಗದೀಕ್ಷೆಯಿಂದ ಅವನಲ್ಲಿರುವ ಅವಗುಣಗಳನ್ನು ಕಳೆದು ಸುಗುಣಗಳ ಮಾರ್ಗದಲ್ಲಿ ನಡೆಯಲು ಕಲಿಯತ್ತಾನೆ. ಈ ದೀಕ್ಷೆಯಲ್ಲಿ ಕ್ರೀಯಾ ದೀಕ್ಷೆ ಹಾಗೂ ಜ್ಞಾನ ದೀಕ್ಷೆಗಳೆಂಬ ಎರಡು ಪ್ರಮುಖ ಪ್ರಕಾರಗಳಾಗಿ ಕಂಡು ಬಂದರೂ, ಮತ್ತೆ ಕ್ರೀಯಾ ದೀಕ್ಷೆಯಲ್ಲಿ ಬರುವ ಜ್ಞಾನ ದೀಕ್ಷೆ ಉಪಮ ದೀಕ್ಷೆ, ಸ್ವಸ್ಥಿಕಾರೋಹಣ ದೀಕ್ಷೆ ಕಲಶಾಭಿಷೇಕ್ತ ದೀಕ್ಷೆ, ವಿಭೂತಿ ದೀಕ್ಷೆ ಲಿಂಗಾಯತ ದೀಕ್ಷೆ, ಲಿಂಗಸ್ವಾಯುತ ದೀಕ್ಷೆಯೆಂದು ಏಳು ಪ್ರಕಾರಗಳಲ್ಲಿ ಎದ್ದು ಕಾಣುತ್ತದೆ. ಅಲ್ಲದೆ ಜ್ಞಾನ ದೀಕ್ಷೆಯಲ್ಲಿ ವೇದ ದೀಕ್ಷೆ ಮಂತ್ರ ದೀಕ್ಷೆ ಕ್ರೀಯಾ ದೀಕ್ಷೆ – ಗಳೆಂದು ಮೂರು ಪ್ರಕಾರಗಳಲ್ಲಿ ಕಂಡು ಬರುತ್ತದೆ. ಇಲ್ಲಿ ದೀಕ್ಷೆಯೆಂದರೆ ಸಂಸ್ಕಾರ ಹೊಂದುವುದು. ಗುರುಗಳು ಭಕ್ತನಿಗೆ ಕೊಡುವ ಸಂಪ್ರದಾಯ ಮಾತ್ರ ಬೇರೆ ಬೇರೆಯಾಗಿರುತ್ತದೆ. ಹೀಗೆ ಲಿಂಗದೀಕ್ಷೆಯನ್ನು ಕೊಡುವ ಸಂಪ್ರದಾಯ ಶ್ರೀ ಮಠಗಳಿಗೆ ಸಲ್ಲುತ್ತದೆ.

ವೀರಶೈವ ಮಠಗಳು ಅಸ್ಪೃಶ್ಯತಾ ನಿವಾರಣೆ, ಅನಾಥರ ರಕ್ಷಣೆ, ಪ್ರತಿಭಾ ಪುರಸ್ಕಾರ ಅನ್ನದಾಸೋಹ, ಸಾಮೂಹಿಕ ವಿವಾಹ. ಉಚಿತ ನೇತ್ರ ಶಿಬಿರಗಳಂತಹ ಅನೇಕ ಸಮಾಜ ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಂಡು ಸಾವಿರಾರು ಭಕ್ತರ ಮನಸ್ಸನ್ನು ತಿದ್ದಿದ್ದಾರೆ. ಸಮಾಜ ಸೇವೆಯಲ್ಲಿ ತೊಡಗಿದ್ದಾರೆ. ಪಾಠ – ಪ್ರವಚನಗಳು ಮಾಡುವ ಮಹೋದ್ದೇಶಗಳಿಂದ ಮಠಾಧೀಶರು ಹಳ್ಳಿ – ಪಟ್ಟಣಗಳಿಗೆ ಸಂಚರಿಸಿದರು. ಭಕ್ತರಲ್ಲಿರುವ ಕಲ್ಮಷಗಳ ಬೀಜದ ಬೇರು ಸಹಿತ ಕಿತ್ತೊಗೆಯಲು ಶ್ರಮಿಸುತ್ತಿದ್ದಾರೆ. ಪ್ರಾಚೀನ ಕಾಲದಿಂದಲೂ ಇಂದಿನ ವರೆಗೆ ವೀರಶೈವ ಮಠಗಳಿಗೂ ಹಾಗೂ ಶೈಕ್ಷಣಿಕ ರಂಗಕ್ಕೆ ನಿಕಟವಾದ ಸಂಬಂಧ ಇದೆ. ಅದ್ದರಿಂದ ಹೆಚ್ಚಾಗಿ ವೀರಶೈವ ಮಠಗಳಲ್ಲಿ ಶೈಕ್ಷಣಿಕ ಕೇಂದ್ರವನ್ನು ಸ್ಥಾಪಿಸಿದ್ದಾರೆ. ತಮ್ಮ ತಮ್ಮ ಶಕ್ತಿಗನುಸಾರವಾಗಿ ಶೈಕ್ಷಣಿಕ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಈ ಭಾಗದ ಕೆಲವು ಮಠಗಳು ಮೆ ಡಿಕಲ್ ಇಂಜನಿಯರಿಂಗ ಕಾಲೇಜುಗಳನ್ನು ತೆರೆದು ವಿದ್ಯಾರ್ಥಿಗಳಿಂದ ಲಕ್ಷಾನುಗಟ್ಟಲೆ ಹಣ ತೆಗೆದುಕೊಳ್ಳುತ್ತಿದ್ದಾರೆ. ಮಠಗಳಲ್ಲಿ ಕನ್ನಡವೊಂದೆ ಶಿಕ್ಷಣ ವಲ್ಲದೆ, ಇಂಗ್ಲೀಷ ಸಂಸ್ಕೃತ ಹಾಗೂ ಮರಾಠಿ, ಹಿಂದಿ ಹಾಗೂ ಸಂಗೀತಗಳನ್ನು ಸಹ ಕಲಿಸತೊಡಗಿವೆ. ಅಂತು ಶೈಕ್ಷಣಿಕ ರಂಗದಲ್ಲಿ ವೀರಶೈವ ಮಠಗಳು ಅನುಪಮ ಸೇವೆ ಸಲ್ಲಿಸುತ್ತಿವೆ. ವೀರಶೈವ ಮಠಾಧೀಶರುಗಳಿಗೆ ಸ್ವಾಮಿಗಳೆಂದು, ಮಹಾಸ್ವಾಮಿಗಳೆಂದು, ಪಟ್ಟದೇವರೆಂದು, ಶರಣರೆಂದು, ಅಪ್ಪಗಳೆಂದು ಪೂಜ್ಯರೆಂದು, ದೇವರೆಂದು, ವಿರಕ್ತರೆಂದು ಮುಂತಾದ ನಾಮಗಳಿಂದ ಕರೆಯಿಸಿಕೊಳ್ಳುತ್ತಾರೆ.

ಮಠ ಮತ್ತು ಶಿಕ್ಷಣಕ್ಕೆ ಹೇಗೆ ಸಂಬಂಧ ಇದೆಯೋ ಹಾಗೆಯೇ ಮಠ ಮತ್ತು ಸಾಹಿತ್ಯಕ್ಕೆ ಹತ್ತಿರದ ಸಂಬಂಧವಿದೆ. ಮಠಗಳಲ್ಲಿ ವೀರಶೈವ ಧರ್ಮದ ತತ್ವಗಳು, ಶರಣರ ವಚನಗಳು, ತಾಡೋಲೆಗಳು, ಸಂರಕ್ಷಿಸಿದ ಕೀರ್ತಿ ಇಂದಿನ ಮಠಗಳಿಗೆ ಸಲ್ಲುತ್ತದೆ. ಅನೇಕ ಶರಣರ, ಸಂತರ, ಸತ್ಪುರುಷರ ಯೋಗಿಗಳ, ತ್ಯಾಗಿಗಳ, ಕೃತಿಗಳನ್ನು ಬರೆಯಿಸಿ, ಪ್ರಕಟಿಸಿ, ಜನರ ಕೈಗಿಡುತ್ತಿದ್ದಾರೆ, ಇಟ್ಟಿದ್ದಾರೆ. ಕೆಲವು ಮಠಗಳ ಮಠಾಧೀಶರು ಸ್ವತಃ ಸಾಹಿತ್ಯವನ್ನು ರಚಿಸುತ್ತಿದ್ದಾರೆ. ಅನೇಕ ಧಾರ್ಮಿಕ ಅಧ್ಯಾತ್ಮಿಕ ಗ್ರಂಥಗಳನ್ನು ರಚಿಸಿ, ಪ್ರಕಟಣೆಯ ಕಾರ್ಯ ಮಾಡುತ್ತಿವೆ. ಶ್ರೀಮಠದಲ್ಲಿಯೆ ಸಾಹಿತ್ಯ ಪ್ರಕಾಶನವನ್ನು ಪ್ರಾರಂಭಿಸಿ ಅದರಡಿಯಲ್ಲಿ ಪ್ರಸಕ್ತ ಪ್ರಕಟಣೆಯ ಕಾರ್ಯ ಮಾಡುತ್ತಿವೆ. ಭಾಲ್ಕಿ ಹಿರೇಮಠ, ಗುಲಬರ್ಗಾ ಶರಣ ಬಸವೇಶ್ವರ ಮಠ, ಹಾರಕೂಡ ಹಿರೇಮಠ, ಕೊಪ್ಪಳ ಗವಿಸಿದ್ದೇಶ್ವರ ಮಠ, ಕೋರಿಸಿದ್ದೇಶ್ವರ ಮಠ, ಜಾಲಹಳ್ಳಿ ಹಿರೇಮಠ ...... ಹೀಗೆ ಮುಂತಾದ ಮಠಗಳು ಸಾಹಿತ್ಯ ಪ್ರಕಾಶನವನ್ನುತೆರೆದು ಅನೇಕ ಕೃತಿಗಳನ್ನು

ಪ್ರಕಟಿಸಿದ್ದಾರೆ. ಹಲವಾರು ರೀತಿಯ ಧಾರ್ಮಿಕ ಗೋಷ್ಠಿ, ಚಿಂತನ, ಮಂಥನ ಮುಂತಾದ ಕಾರ್ಯಕ್ರಮ ಅನುಭವ ಗೋಷ್ಠಿಗಳನ್ನು ಸಾಂಸ್ಕೃತಿಕ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಿವೆ. ಭಕ್ತರೊಡನೆ, ನಿಕಟವಾದ ಸಂಬಂಧ ಹಾಗೂ ಸಂಪರ್ಕವನ್ನು ಇಟ್ಟುಕೊಂಡಿವೆ.

ಧಾರ್ಮಿಕ ಸಂಸ್ಥೆಗಳಾದ ವೀರಶೈವ ಮಠಗಳು ವ್ಯಕ್ತಿ ಪ್ರಜ್ಞೆಯನ್ನು ಮೀರಿ ಸಮೂಹ ಪ್ರಜ್ಞೆಯ ನೆಲೆಯಲ್ಲಿ ಅದರಲ್ಲೂ ಎಷ್ಟೋ ಮಠಗಳು ಅಲಕ್ಷಿತ ವರ್ಗಗಳ ಬಗ್ಗೆ ವಿಶೇಷ ಕಾಳಜಿ ಹೊಂದಿದ್ದನ್ನು ಗಮನಿಸಲಾಗಿದೆ. ವೀರಶೈವ ಮಠಗಳ ತತ್ವಗಳ ಹಾಗೂ ತತ್ವಾತೀತ ವಸ್ತುವಿನ ಸ್ವರೂಪ ಸಂಬಂಧಗಳನ್ನು ಯಾವ ವಸ್ತುಗಳ ಪ್ರಮಾಣ ಮೇಲೆ ನಿರ್ಣಯಿಸಿರುತ್ತದೆಂಬುದನ್ನು ಸ್ಪಷ್ಟಪಡಿಸಲಾಗಿದೆ. ಸಮಾಜೋಧಾರ್ಮಿಕ, ಶೈಕ್ಷಣಿಕ ಸಾಹಿತ್ಯಕ ಹಾಗೂ ಸಾಂಸ್ಕೃತಿಕವಾಗಿ ವೀರಶೈವ ಮಠಗಳ ಸ್ಥಾನ ಮಾನ ಅಂತಸ್ತು ನೆಲೆಗಳನ್ನು ಗಮನದಲ್ಲಿರಿಸಿಕೊಂಡು ಅಧ್ಯಯನಿಸಲಾಗಿದೆ. ಹೈದ್ರಾಬಾದ – ಕರ್ನಾಟಕ ಭಾಗದ ವೀರಶೈವ ಮಠಗಳ ಸಮಗ್ರ ಚಿತ್ರಣವನ್ನು ಕೊಡಲಾಗಿದೆ. ಅವುಗಳಲ್ಲಿ ಎಷ್ಟೋ ಮಠಗಳ ಪರಂಪರೆಯಿಂದ ಸಮಾಜ ಮುಖಿ ಕಾರ್ಯ ನಡೆಸುತ್ತ ಬಂದಿರುವುದನ್ನು ನೋಡಲಾಗಿದೆ. ಇಂತಹ ಪಾರಂಪರಿಕ ಸಂಸ್ಥೆಯೊಂದಿಗೆ ಮುಖಾಮುಖಿಯಾಗುವ ಮೂಲಕ ಅದರ ಅರ್ಥಪೂರ್ಣ ನೆಲೆಗಳನ್ನು ಪತ್ತೆ ಹಚ್ಚಲಾಗಿದೆ. ಈ ಭಾಗದ ವೀರಶೈವ ಮಠಗಳು ಸಲ್ಲಿಸಿದ ಸೇವೆ ಅಪಾರವಾಗಿದೆ.

ಹೈದ್ರಾಬಾದ – ಕರ್ನಾಟಕದಲ್ಲಿ ಪ್ರಚಲಿತವಿರುವ ಹಿರಿಯ ಮತ್ತು ಕಿರಿಯ ಸಂಪ್ರದಾಯದ ಮಠಗಳು ಒಂದು ಸಾಮೂಹಿಕ ಜಾಗೃತಿಯನ್ನು ಮೂಡಿಸುವಲ್ಲಿ ಅಂಥ ಆಸಕ್ತಿವಹಿಸಿದ್ದು ಕಾಣುವುದಿಲ್ಲ. ಆ ಪ್ರಾದೇಶಿಕ ಪರಿಸರದಲ್ಲಿಯೇ ಶಕ್ತಿ ಸಂಪನ್ಮೂಲಗಳನ್ನು ಕ್ರೋಡಿಕರಿಸಿಕೊಂಡು ವೈಯಕ್ತಿಕ ನೆಲೆಯಲ್ಲಿ ಕೆಲಸ ಮಾಡುತ್ತ ಬಂದಿವೆ. ಎಲ್ಲ ಮಠಗಳಿಗೂ ಬಸವತತ್ವ ಚಿಂತನೆಯೇ ಬಹುಮುಖ್ಯವಾಗಿದ್ದರೂ ಆಚರಣೆಗಳಲ್ಲಿ ವಿಭಿನ್ನ ವ್ಯತ್ಯಾಸಗಳನ್ನು ಇವು ಹೊಂದಿವೆ. ಸಮೃದ್ಧ ಭಕ್ತ ಸಂಪನ್ಮೂಲ ಆರ್ಥಿಕ ಸಂಪನ್ಮೂಲ ಹೊಂದಿದ ಕೆಲವು ಮಠಗಳು ಸಮಕಾಲೀನ ರಾಜಕೀಯ ಶೈಕ್ಷಣಿಕ ರಂಗಗಳಲ್ಲಿ ತನ್ನದೇ ಆದ ಹೆಜ್ಜೆ ಗುರುತುಗಳನ್ನು ಮೂಡಿಸಿವೆ. ಅದರೂ ವ್ಯವಹಾರಿಕ ಪ್ರಖರತೆಯಿಂದ ಹೊರಗುಳಿದಿಲ್ಲ ಎಂಬುದನ್ನು ಗಮನಿಸುವಂಥದ್ದು.

ನಿಜಾಮರ ಕಾಲದಲ್ಲಿ ಕನ್ನಡ ತರಗತಿಗಳನ್ನು ತೆರೆವ ಮೂಲಕ ಕ್ನನಡದ ಅನುಷ್ಠಾನಕ್ಕೆ ಕಂಕಣಕಟ್ಟಿ ನಿಂತ ಭಾಲ್ಕಿ ಹಿರೇಮಠ ಇಂದು ಮಾದರಿಯಾಗಿದೆ. ಕರ್ನಾಟಕ ಪ್ರದೇಶ, ಕರ್ನಾಟಕ ಸರಕಾರ, ಕನ್ನಡ ಜನತೆಯ ನಿರ್ದಿಷ್ಟ ಭೂ ಪ್ರದೇಶ ಇಂದು ಕನ್ನಡ ಅನುಷ್ಠಾನಕ್ಕಾಗಿ ಎದೆಬಾಯಿ ಬಿಡುವಂತಾಗಿದೆ. ಇಂಥಯಾವ

ಸೌಕರ್ಯಗಳು ಸಾಂಸ್ಕೃತಿಕ ಒತ್ತಾಸೆಗಳು ಇಲ್ಲದ ಹೊತ್ತಿನಲ್ಲಿ ಪರಕೀಯ ಆಡಳಿತ ಪ್ರದೇಶವೊಂದರಲ್ಲಿ ಕನ್ನಡದ ಕನಸನ್ನು ನನಸು ಮಾಡಲು ಎತ್ತಿಕೊಂಡ ಕೈಂಕರ್ಯ ಮಾರ್ಗದರ್ಶಿಯಾದದ್ದು. ಸಮ್ಮಿಶ್ರ ಭಾಷೆ ಸಮ್ಮಿಶ್ರ ಸಂಸ್ಕೃತಿಯನ್ನು ಹೊಂದಿದ ಹೈದ್ರಾಬಾದ – ಕರ್ನಾಟಕದಲ್ಲಿ ವೀರಶೈವ ಮಠಗಳು ಕನ್ನಡದ ಸಾಂಸ್ಕೃತಿಕ ಸಾಮ್ರಾಜ್ಯವನ್ನು ಕಟ್ಟುವಲ್ಲಿ ಶ್ರಮಿಸಿದ ಸಂಗತಿ ಗಂಭೀರವಾದದ್ದು. ಕಲ್ಯಾಣ ಕರ್ನಾಟಕದ ಈ ಭಾಗ ಇಡೀ ಪ್ರಪಂಚದ ಇತಿಹಾಸದಲ್ಲಿಯೇ ತನ್ನ ದಾರ್ಶನಿಕ ದಿವ್ಯತೆಯಿಂದ ಹೆಸರು ಮಾಡಿದಂತದ್ದು, ಶಿವಶರಣರ ಕಾರ್ಯಕ್ಷೇತ್ರ ಒಂದು ಕ್ರಾಂತಿಕಾರಿ ಸಾಮಾಜಿಕ, ಸಾಹಿತ್ಯಿಕ, ಮತ್ತು ಆರ್ಥಿಕ ಆಂದೋಲನವನ್ನು ಹುಟ್ಟುಹಾಕಿದ ನಾಡು. ಇಂಥ ನಾಡಲ್ಲಿ ನೂರಾರು ವೀರಶೈವ ಮಠಗಳು ಅಂಕುರಗೊಂಡ ಜಾತ್ಯತೀತವಾದ ಸಮುದಾಯ ಮನೋಧರ್ಮವನ್ನು ರೂಪಿಸುವಲ್ಲಿ ಕಳಂಕರಹಿತ ಕೆಲಸವನ್ನು ಮಾಡಿವೆ.

ಹಾಗೆ ಬದಲಾದ ಸಂದರ್ಭ, ಬದಲಾದ ಮನೋಧರ್ಮ, ಮಠಗಳ ಸಾಂಸ್ಥಿಕರಣದಂತಹ ನೆಲೆಗಳು ಮಠಗಳ ಮೇರುಸದೃಶವಾದ ಕ್ರಿಯಾಶೀಲಗುಣವನ್ನು ಮಸುಕಾಗಿಸಿದ್ದೂ ಇದೆ. ಮಠದ ಆಸ್ತಿಗಳು ಬೆಳೆಯುತ್ತಹೊದಂತೆ ಸಹಜವಾಗಿಯೇ ಅದನ್ನು ಕೈವಶಮಾಡಿಕೊಳ್ಳುವ ಅನುಭವಿಸಬೇಕೆನ್ನುವ ಶಕ್ತಿಗಳು ರಕ್ತ ಬೀಜಾಸುರರಂತೆ ಹುಟ್ಟಿಕೊಳ್ಳುತ್ತವೆ. ಇತ್ತೀಚೆಗೆ ರಾಜಕೀಯನ್ನು ಮಠೀಯ ವ್ಯವಸ್ಥೆಗಳು ಅಪ್ಪಿಕೊಂಡ ಕಾರಣವಾಗಿ ಅನುಕೂಲಕ್ಕಿಂತ ಅನಾನೂಕೂಲವೇ ಜಾಸ್ತಿ. ವಂಶ ಪಾರ್‍ಯಂಪರ್ಯವಾದಂತ ಆಸ್ತಿಹಕ್ಕುದಾರಿಕೆಯ ಮನೋಧರ್ಮ, ಜಾತಿಗಳಲ್ಲಿನ ಒಳಪಂಗಡದ ಒಳ ಜಗಳಾಟಗಳು ಇಂದು ಮಠದ ಬಗ್ಗೆ ಜನರಲ್ಲಿ ಹಗುರ ಭಾವನೆಗಳನ್ನು ಮೂಡಿಸಿದ್ದು ಕಂಡು ಬರುತ್ತದೆ. ಮೊದಲಿನ ಬದ್ಧತೆಯನ್ನು ಊರು ಒಟ್ಟಾಗಿ ಉಳಿಸಿಕೊಳ್ಳದ ಕಾರಣ ಅವರ್ಣೀಯ, ಸವರ್ಣೀಯ, ಮೇಲು – ಕೀಳುಗಳ ಜಗ್ಗಾಟ ಹೆಚ್ಚಾಗಿ ಮಠಗಳು ಊರ ಜನರಿಂದ ದೂರವಾಗಿ ದ್ವೀಪದಂತೆ ಬದುಕುತ್ತಿರುವುದನ್ನು ಕಾಣಬಹುದಾಗಿದೆ.

ಈ ಅಧ್ಯಯನ ಬಹುಮುಖ್ಯವಾಗಿ ಮಠಗಳ ಪಾರಂಪರಿಕವಾದ ಪದ್ಧತಿಗಳೊಂದಿಗೆ ಸಮಾಜ ಸೇವೆ ಸಂಸ್ಕೃತಿ ಸಂವರ್ಧನೆಗೆ ಶ್ರಮಿಸಿದಂತೆ. ತನ್ನ ವಿಚ್ಛಿದ್ರಕಾರಕ ಗುಣಗಳಿಂದ ತದ್ವಿರುದ್ಧವಾಗಿ ವರ್ತಿಸಿದ ಸಂಗತಿಗಳನ್ನು ಪತ್ತೆಹಚ್ಚುವಲ್ಲಿ ಆಸಕ್ತಿವಹಿಸಿದೆ. ಒಟ್ಟು ಜನಬದುಕಲ್ಲಿ ಮಠಗಳು ಮಠಾಧೀಶರು ನಿರ್ವಹಿಸಿದ ಪಾತ್ರ ಕುರಿತು ಸುಧೀರ್ಘ ಚರ್ಚೆಯನ್ನು ಮಾಡಲಾಗಿದೆ. ಮಠಗಳ ಖಾಸಗೀ ವಿಷಯಗಳಿಗಿಂತ ಅದರ ಸಾರ್ವತ್ರಿಕ ಸಂಗತಿಗಳಿಗೆ ಹೆಚ್ಚು ಮಹತ್ವ ನೀಡಲಾಗಿದೆ. ಆ ಮೂಲಕ ಮಠಗಳು ಖಾಸಗೀತನದ ಇತಿ ಮಿತಿಗಳನ್ನು ಅರಿವಿಗೆ ತಂದುಕೊಳ್ಳಲಾಗಿದೆ. ವ್ಯಕ್ತಿಪ್ರಜ್ಞೆಯನ್ನು ಮೀರಿದ ಸಮೂಹ ಪ್ರಜ್ಞೆಯಲ್ಲಿ ಅದು ಅಲಕ್ಷಿತ ಜನವರ್ಗಗಳ ಕುರಿತು ಅವು ಹೊಂದಿದ ಕಾರ್ಯಗಳನ್ನು ಸೂಕ್ಷ್ಮವಾಗಿ ಗ್ರಹಿಸಲಾಗಿದೆ.

✿✿

# ಅನುಬಂಧ

೧. ವಕ್ತಾರರ ಸೂಚಿ

೨. ಪರಾಮರ್ಶನ ಗ್ರಂಥಗಳು

೩. ಹೈದ್ರಾಬಾದ–ಕರ್ನಾಟಕ ಭೂಪಟಗಳು

೪. ಭಾವ ಚಿತ್ರಗಳು

## ವಕ್ತೃಗಳ ಸೂಚಿ

| ಹೆಸರುಗಳು | ವಯಸ್ಸು | ವೃತ್ತಿ | ವಿಳಾಸ |
|---|---|---|---|
| ೧. ಪುಜ್ಯ ಶ್ರೀ ಗುರುಪಾದ ಶಿವಾಚಾರ್ಯ ಸ್ವಾಮಿಗಳು, | ೬೮ | ಮಠಾಧೀಶರು | ವಿಮಲಖೇಡ ಹಿರೇಮಠ ತಾ. ಹುಮನಾಬಾದ್, ಜಿ. ಬೀದರ. |
| ೨. ಚನ್ನ ಮಲ್ಲೇಶ್ವರ ತ್ಯಾಗಿ | ೪೫ | ಮಠಾಧೀಶರು | ಚನ್ನಮಲ್ಲೇಶ್ವರ ತ್ಯಾಗಿ, ಇಟಗಾ, ತಾ. ಹುಮನಾಬಾದ್, ಜಿ. ಬೀದರ. |
| ೩. ಪೂಜ್ಯ ಚನ್ನವೀರ ಶಿವಾಚಾರ್ಯರು | ೪೦ | ಮಠಾಧೀಶರು | ಹಾರಕೂಡ ಬೃಹನ್ಮಠ, ತಾ. ಬಸವಕಲ್ಯಾಣ, ಜಿ. ಬೀದರ. |
| ೪. ಚನ್ನವೀರಪ್ಪ ಹೆಚ್. ಆರ್. | ೩೮ | ಪ್ರಾಧ್ಯಾಪಕರು | ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ೫. ಡಾ. ಚನ್ನಣ್ಣ ವಾಲೀಕಾರ | ೫೦ | ಪ್ರಾಧ್ಯಾಪಕರು | ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ. |
| ೬. ಚಿಕ್ಕಗುರು ನಂಜೇಶ್ವರ ಸ್ವಾಮಿಗಳು | ೪೦ | ಮಠಾಧೀಶರು | ಭರತನೂರು ವಿರಕ್ತ ಮಠ ತಾ. ಚಿತಾಪುರ, ಜಿ.ಗುಲಬರ್ಗಾ. |
| ೭. ಜೈ. ಶಾಂತಲಿಂಗೇಶ್ವರ ಸ್ವಾಮಿಗಳು | ೭೦ | ಮಠಾಧೀಶರು | ಖೆಳಗಿ ವಿರಕ್ತ ಮಠ, ಖೆಳಗಿ. |
| ೮. ಡಾ. ಜಗನ್ನಾಥ ಹೆಬ್ಬಾಳೆ | ೪೦ | ಕನ್ನಡ ವಿಭಾಗದ ಮುಖ್ಯಸ್ಥರು | ಕರ್ನಾಟಕ ಮಹಾವಿದ್ಯಾಲಯ, ಬೀದರ. |
| ೯. ಡಾ. ತಾಳ್ತಾಜೆ ವಸಂತಕುಮಾರ್ | ೪೫ | ಕನ್ನಡ ವಿಭಾಗದ ಮುಖ್ಯಸ್ಥರು | ಮುಂಬಯಿ ವಿಶ್ವವಿದ್ಯಾಲಯ, ವಿದ್ಯಾನಗರಿ, ಮುಂಬಯಿ. |
| ೧೦. ಪ್ರೋ. ತಾಳಮಲ್ಲೆ ಬಾಲಾಜಿ | ೩೫ | ಕನ್ನಡ ಉಪನ್ಯಾಸಕರು | ಶಿವಾಜಿ ಮಹಾವಿದ್ಯಾಲಯ, ಭಾಲ್ಕಿ, ಬೀದರ. |
| ೧೧. ನಾಗಶೇಟೆಪ್ಪಾ ಬಿರಾದಾರ ಗೂನಳ್ಳಿ | ೬೮ | ಅಧ್ಯಕ್ಷರು | ವೀರಶೈವ ಸಮಾಜ ಮಹಾಸಭಾ, ಘಟಕ, ಬೀದರ. |
| ೧೨. ನಾಗಭೂಷಣ ಸ್ವಾಮಿಗಳು | ೪೪ | ಮಠಾಧೀಶರು | ಅಲಿಯಂಬರ ಹಿರೇಮಠ, ಅಲಿಯಂಬರ, ತಾ. ಜಿ. ಬೀದರ. |
| ೧೩. ಪಂಚಾಕ್ಷರಿ ಪುಣ್ಯಶೇಟ್ಟಿ | ೭೦ | ವಿಶ್ರಾಂತ ಶಿಕ್ಷಕರು | ಶ್ರೀ ಸಿದ್ಧಾರೂಢ ಮಠದ ರಸ್ತೆ, ಕುಂಬರವಾಡಿ, ಬೀದರ. |
| ೧೪. ಡಾ. ಬಾಬುರಾವ್ ಬಿ. ಪೂಜಾರಿ | ೪೬ | ಕನ್ನಡ ವಿಭಾಗದ ಮುಖ್ಯಸ್ಥರು | ಶ್ರೀ ಸಂಗಮೇಶ್ವರ ಮಹಾವಿದ್ಯಾಲಯ, ಸೊಲಾಪುರ. |
| ೧೫. ಲಿಂಗೈಕ್ಯ ಮಡಿವಾಳೇಶ್ವರ ಸ್ವಾಮಿಗಳು | ೪೫ | ಮಠಾಧೀಶರು | ನಿಡವಂಚ ಚೌಕಿಮಠ, ತಾ. ಹುಮನಾಬಾದ್, ಜಿ.ಬೀದರ. |

| ಹೆಸರುಗಳು | | ವಯಸ್ಸು | ವೃತಿ | ವಿಳಾಸ |
|---|---|---|---|---|
| ೧೬. | ಲಿಂಗೈಕ್ಯ ಮಡಿವಾಳಪ್ಪ ಮುದ್ದಣ್ಣಾ | ೮೨ | ..... | ಗಣೇಶ ಮೈದಾನ್ ಹತ್ತಿರ,ಬೀದರ. |
| ೧೭. | ಮಾತೆ ಮೈತ್ರಾದೇವಿ | ೪೫ | ಮಠಾಧೀಶರು | ನಿಡವಂಚ ಚೌಕಿಮಠ,<br>ತಾ. ಹುಮನಾಬಾದ್, ಬೀದರ. |
| ೧೮. | ಡಾ. ಕೆ. ರವೀಂದ್ರನಾಥ | ೩೮ | ಪ್ರವಾಚಕರು | ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ೧೯. | ಶ್ರೀಮತಿ ಲಕ್ಷ್ಮೀಬಾಯಿ ಕೆ. ದುರ್ಗ | ೪೨ | ಮನೆ ಕೆಲಸ | ಭವಾನಿ ಕಾಲೋನಿ<br>ಶಿವನಗರ,ಬೀದರ. |
| ೨೦. | ಪೂಜ್ಯ ಶ್ರೀ ವಿರೂಪಾಕ್ಷಯ್ಯ | ೭೯ | ಮಠಾಧೀಶರು | ಹುಡುಗಿ ಹಿರೇಮಠ,<br>ಹುಡುಗಿ. ಶಿವಾಚಾರ್ಯರು<br>ತಾ. ಹಮನಾಬಾದ್, ಜಿ.ಬೀದರ. |
| ೨೧. | ಪೂಜ್ಯ ಶ್ರೀ ಶಿವಾನಂದ ಮಹಾಸ್ವಾಮಿಗಳು | ೪೫ | ಮಠಾಧೀಶರು | ಶ್ರೀಗುರು ಬಸವೇಶ್ವರ ಸಂಸ್ಥಾನ,<br>ವಿರಕ್ತ ಮಠ, ಹುಲಸೂರು.<br>ತಾ. ಬಸವಕಲ್ಯಾಣ, ಜಿ. ಬೀದರ. |
| ೨೨. | ಪೂಜ್ಯ ಶ್ರೀ ಶಿವಕುಮಾರ<br>ಮಹಾಸ್ವಾಮಿಗಳು | ೫೨ | ಮಠಾಧೀಶರು | ಶ್ರೀ ಸಿದ್ಧಾರೂಢ ಮಠ,<br>ಬೀದರ. |
| ೨೩. | ಶ್ರೀ ಶಿವಯೋಗೇಶ್ವರ ಮಹಾಸ್ವಾಮಿಗಳು | ೫೬ | ಮಠಾಧೀಶರು | ಬಸವ ಮುಕ್ತಿ ಮಂದಿರ,<br>ಸಿದ್ಧಾರುಢ ಮಠದ ರಸ್ತೆ, ಬೀದರ. |
| ೨೪. | ಬಸವಲಿಂಗ ಪಟ್ಟದ್ದೇವರು | ೪೦ | ಮಠಾಧೀಶರು | ಶ್ರೀ ಚನ್ನಬಸವೇಶ್ವರ ಸಂಸ್ಥಾನ,<br>ಹಿರೇಮಠ, ಭಾಲ್ಕಿ. |
| ೨೫. | ರುದ್ರಮುನಿ ಪಟ್ಟದ್ದೇವರು | ೬೦ | ಮಠಾಧೀಶರು | ಚಾಂಬೋಳ ಹಿರೇಮಠ,<br>ಚಾಂಬೋಳ, ತಾ.ಜಿ. ಬೀದರ. |
| ೨೬. | ಪ್ರೊ. ವೀರೇಂದ್ರ ಸಿಂಪಿ | ೭೦ | ವಿಶ್ರಾಂತ<br>ಪ್ರಾಧ್ಯಾಪಕರು | ವಿದ್ಯಾನಗರ ಕಾಲೋನಿ,<br>ಬೀದರ. |
| ೨೭. | ಡಾ. ವೀರೇಶ ಬಡಿಗೇರ | ೩೮ | ಪ್ರವಾಚಕರು ಹಾಗೂ<br>ಮಾರ್ಗದರ್ಶಕರು | ಕನ್ನಡ ವಿಶ್ವವಿದ್ಯಾಲಯ,<br>ಹಂಪಿ. |
| ೨೮. | ಡಾ. ಶಕುಂತಲಾ ಹೆಗಡೆ | ೪೫ | ಕನ್ನಡ ವಿಭಾಗದ<br>ಮುಖ್ಯಸ್ಥರು | ಸಿ.ಬಿ. ಖೇಡಗಿ ಮಹಾವಿದ್ಯಾಲಯ,<br>ಅಕ್ಕಲಕೋಟ, ಜಿ. ಸೋಲಾಪುರ. |
| ೨೯. | ಡಾ. ಸಂಗಮೇಶ ಸೌದತ್ತಿಮಠ | ೫೫ | ಕನ್ನಡ ಪ್ರಾಧ್ಯಾಪಕರು<br>ಹಾಗೂ ಮಾರ್ಗದರ್ಶಕರ | ಗುಲಬರ್ಗಾ ವಿಶ್ವವಿದ್ಯಾಲಯ,<br>ಗುಲಬರ್ಗಾ. |
| ೩೦. | ಡಾ. ಸಂಜೀವ ಶೆಟ್ಟಿ | ೫೨ | ಕನ್ನಡ ವಿಭಾಗದ<br>ಮುಖ್ಯಸ್ಥರು ಹಾಗೂ<br>ಮಾರ್ಗದರ್ಶಕರು | ಕೆ.ಜಿ. ಸೊಮಯ್ಯ ಕಲಾ,<br>ವಾಣಿಜ್ಯ ಮಹಾವಿದ್ಯಾಲಯ,<br>ಮುಂಬಾಯಿ. |

| ಹೆಸರುಗಳು | ವಯಸ್ಸು | ವೃತ್ತಿ | ವಿಳಾಸ |
| --- | --- | --- | --- |
| ೩೧. ಡಾ. ಶರಣ ಬಸಪ್ಪಾ ಅಪ್ಪಾ | ೭೦ | ಮಠಾಧೀಶರು | ಶ್ರೀ ಶರಣ ಬಸವೇಶ್ವರ ದಾಸೋಹ ಮಠ ಗುಲಬರ್ಗಾ. |
| ೩೨. ಡಾ. ಮೈತ್ರಿ ಕೆ.ಎಂ. | ೪೦ | ಪ್ರವಾಚಕರು ಹಾಗೂ ಮಾರ್ಗದರ್ಶಕರು | ಕನ್ನಡ ವಿಶ್ವವಿದ್ಯಾಲಯ, ಹಂಪಿ. |
| ೩೩. ತೋಟೆಂದ್ರ ಮಹಾಸ್ವಾಮಿಗಳು | ೪೫ | ಮಠಾಧೀಶರು | ನಾಲವಾರ ಹಿರೇಮಠ, ತಾ.ಚಿತಾಪುರ, ಜಿ. ಗುಲಬರ್ಗಾ. |
| ೩೪. ಮುರುಘೇಂದ್ರ ಸ್ವಾಮಿಗಳು | ೪೨ | ಮಠಾಧೀಶರು | ಖಜೂರಿ ವಿರಕ್ತ ಮಠ, ಖಜೂರಿ, ತಾ. ಆಳಂದ. ಜಿ. ಗುಲಬರ್ಗಾ. |
| ೩೫. ಸಿದ್ದರಾಮ ಶಿವಾಚಾರ್ಯರು | ೪೫ | ಮಠಾಧೀಶರು | ಚಿಣಮಗೇರಿ, ತಾ. ಅಫಜಲಪೂರ, ಜಿ. ಗುಲಬರ್ಗಾ. |
| ೩೬. ಶರಣಪ್ಪ ಸಕ್ರಿ | ೬೫ | | ಬಸ್ ನಿಲ್ದಾಣದ ಎದುರುಗಡೆ. ಲಿಂಗಸೂರು, ಜಿ. ರಾಯಚೂರು. |
| ೩೭. ಶ್ರೀ ಶಾಂತ ವೀರಯ್ಯ ಮಹಾಸ್ವಾಮಿಗಳು | ೭೦ | ಮಠಾಧೀಶರು | ಶ್ರೀ ಗವಿಮಠ ಕೊಪ್ಪಳ. |
| ೩೮. ಚಂದ್ರಶೇಖರ ನಾರಾಣಪುರ | ೪೫ | ಸಂಪಾದಕರು | 'ಗೆಳೆಯ' ಸಂಜೆ ಪತ್ರಿಕೆ, ವಿನಾಯಕ ನಗರ ಕೋಟೆ. ಚಿಕ್ಕಮಗಳೂರು. |
| ೩೯. ಶ್ರೀ ವಿದ್ಯಾನಂದ ಶಿವಾಚಾರ್ಯರು | ೫೨ | ಮಠಾಧೀಶರು | ಜಾಲಹಳ್ಳಿ ಹಿರೇಮಠ, ಜಾಲಹಳ್ಳಿ ತಾ.ದೇವದುರ್ಗ, ಜಿ. ರಾಯಚೂರು. |
| ೪೦. ಶಿವಮೂರ್ತಿ ಶಿವಾಚಾರ್ಯರು | ೭೦ | ಮಠಾಧೀಶರು | ಮಾನವಿ ಕಲ್ಮಠ, ಮಾನವಿ, ಜಿ. ರಾಯಚೂರು. |
| ೪೧. ಕಪಿಲಸಿದ್ಧ ಶಿವಾಚಾರ್ಯ ಸ್ವಾಮಿಗಳು | ೭೨ | ಮಠಾಧೀಶರು | ಶಿಖರ ಮಠ, ದೇವದುರ್ಗಾ ಜಿ. ರಾಯಚೂರು. |
| ೪೨. ರೇವಣಸಿದ್ಧ ಸ್ವಾಮಿಗಳು | ೪೫ | ಮಠಾಧೀಶರು | ಚವದಾಪುರಿ ಹಿರೇಮಠ, ಮುಕ್ತಂಪುರ ಓಣಿ, ಗುಲಬರ್ಗಾ. |
| ೪೩. ಶ್ರೀ ಶಾಂತಲಿಂಗೇಶ್ವರ ಮಹಾಸ್ವಾಮಿಗಳು | ೪೫ | ಮಠಾಧೀಶರು | ವಿರಕ್ತ ಮಠ, ಹಿರೇನಾಗಾಂವ, ತಾ. ಬಸವಕಲ್ಯಾಣ, ಜಿ. ಬೀದರ. |

## ಅನುಬಂಧ - ೨
## ಪರಾಮರ್ಶನ ಗ್ರಂಥಗಳು


೧) ಅಕ್ಕೂರಮಠ ಷಣ್ಮುಖಯ್ಯ, ೧೯೯೪; **ಧರ್ಮ ಸಂಪದ**, ಚನ್ನ ಚೇತನ ಪ್ರಕಾಶನ, ಹೊನ್ನಾಳಿ.

೨) ಆಲೂರು ವೆಂಕಟರಾಯರು, ೧೯೩೦; **ಕರ್ನಾಟಕ ವೀರ ರತ್ನಗಳು**, ರಾಜಾಶ್ರಯ ಬುಕ್ ಡಿಪೊ ಧಾರವಾಡ.

೩) ಎರಿಸೀಮೆ ಚನ್ನಪ್ಪ ಮತ್ತು ಟಿ. ಆರ್ ಮಹಾದೇವಯ್ಯ, (ಸಂ) ೧೯೮೧; **ದಾಸೋಹ ಸಿರಿ**, ಶ್ರೀ ಸಿದ್ದಗಂಗಾಶ್ರೀ ಹಳೆ ವಿದ್ಯಾರ್ಥಿಗಳ ಸಂಘ, ಕ್ಷೇತ್ರ ತುಮಕುರು.

೪) ಕಲಬುರ್ಗಿ ಎಂ. ಎಂ. (ಸಂ) ೧೯೯೫; **ಶಾಸನಗಳಲ್ಲಿ ಶಿವಶರಣರು**, ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ದುರು ತೋಂಟದಾರ್ಯ ಸಂಸ್ಥಾನ ಮಠ ಡಂಬಳ, ಗದಗ.

೫) ಕಲಬುರ್ಗಿ ಎಂ. ಎಂ. (ಸಂ) ೧೯೮೦; **ಶಿವಶಿರಣ ಕಾಯಕ ಸಿದ್ಧಾಂತ**, ಕನ್ನಡ ಅಧ್ಯಯನ ಪೀಠ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬) ಕಲಬುರ್ಗಿ ಎಂ. ಎಂ. (ಸಂ) ೧೯೮೦; **ಬಸವ ಮಾರ್ಗ** ( ಸಂ.ಬ.) ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೭) ಕಲಬುರ್ಗಿ ಎಂ. ಎಂ. ೧೯೯೫; **ಮಾರ್ಗ ೧ ಮಾರ್ಗ ೨**, ಕರ್ನಾಟಕ ಬುಕ್ ಏಜೇನ್ಸಿ, ಬೆಂಗಳೂರು.

೮) ಕಲಬುರ್ಗಿ ಎಂ. ಎಂ. ೧೯೯೪; **ಕರ್ನಾಟಕ ಕೈಫಿಯತ್ತುಗಳು**, ಪ್ರಸಾರಾಂಗ ಕನ್ನಡ ವಿಶ್ವವಿದಾಯಲಯ, ಹಂಪಿ.

೯) ಕಲಬುರ್ಗಿ ಎಂ. ಎಂ. ೧೯೯೩; **ಬಸವಣ್ಣನವರ ವಚನ ಸಂಪೂಟ ೧**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೧೦) ಕಲಬುರ್ಗಿ ಎಂ. ಎಂ. ೧೯೯೯; **ಹರಿಹರನ ರಗಳೆಗಳು**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧) ಕೀರ್ತಿನಾಥ ಕುರ್ತುಕೋಟಿ, ೧೯೯೭; **ಬಯಲು ಆಲಯ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨) ಕುವೆಂಪು, ೧೯೯೨; **ಕಾನೂರ ಸುಬ್ಬಮ್ಮ ಹೆಗ್ಗಡತಿ**, ವಿಜಯರವಿ ಪ್ರಕಾಶನ, ಮೈಸೂರು.

೧೩) ಕೆಳದಿ ಗೂಂಡಾಜೊಯಿಸ, ೧೯೭೬; **ಲಿಂಗಣ್ಣ ಕವಿಯ ಕೆಳದಿ ನೃಪ ವಿಜಯ (ಗದ್ಯಾನುವಾದ)**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೪) ಕೃಷ್ಣಸುರಪುರ ಎಂ. ೧೯೯೯; **ಶರಣು ಶರಣ**, ಮಹಾಕವಿ ಲಕ್ಷ್ಮೀಶ ವಾಚಿಕ ಸಂಘ, ಬೆಂಗಳೂರು.

೧೫) ಗುಂಜಾಳ ಎಸ್. ಆರ್. ೧೯೮೨; **ಉತ್ತಂಗಿ ಚನ್ನಬಸಪ್ಪನವರು**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೬) ಗುಂಜಾಳ ಎಸ್. ಆರ್. ೧೯೯೩; **ಅನುಭಾವಿ ಆತ್ಮಕಥನ**, ಶ್ರೀ ಚನ್ನಬಸವೇಶ್ವರ ಸಂಸ್ಥಾನ ಮಠ, ಹಾರಕೂಡ.

೧೭) ಚೆನ್ನಣ್ಣ ವಾಲಿಕಾರ ೧೯೮೮; **ಹೈದ್ರಾಬಾದ ಕರ್ನಾಟಕ ಗ್ರಾಮದೇವತೆಗಳು**, ಜನಪದಿಯ ಅಧ್ಯಯನ, ವಾಲಿಕಾರ ಪರಿಸರದ ಬಂಡಾಯ ಸಾಹಿತ್ಯ ಪ್ರಕಾಶನ, ಕೇಂದ್ರ ಬಡೆಪೂರ, ಗುಲಬರ್ಗಾ.

೧೮) ಚನ್ನಬಸವಪ್ಪ ಗೊ.ರು. (ಸಂ), ೧೯೮೯; **ಗ್ರಾಮಜ್ಯೋತಿ**, ಕೆ. ಆರ್. ಲಿಂಗಪ್ಪಾ ಅಭಿನಂನ ಗ್ರಂಥ, ಜಯನಗರ, ಬೆಂಗಳೂರು.

೧೯) ಚನ್ನಪ್ಪ ಉತ್ತಂಗಿ ೧೯೭೦; **ಸರ್ವಜ್ಞನನ ವಚನಗಳು**, ಮೈಸೂರು ರಾಜ್ಯದ ಸಾ.ಸಂ. ಇಲಾಖೆ, ಮೈಸೂರ.

೨೦) ಚಂದ್ರಶೇಖರ ಪಿ. ೧೯೯೮; **ಸಳರ ವೀರಶೈವ ತ್ರಿರತ್ನಗಳು**, ಕಸ್ತೂರಿ ಗ್ರಂಥಮಾಲೆ ಬಸವ ಪ್ರಗತಿ, ತುಮಕೂರ.

೨೧) ಚರಂತಿ ಮಠ - ವಿ. ಎಸ್., ೧೯೯೨; **ಅನುಭವ ಮಂಟಪದಲ್ಲಿ ವೀರಶೈವ ಸಂಸ್ಕೃತಿ**, ಶ್ರೀ ಚನ್ನ ಬಸವೇಶ್ವರ ಸಂಸ್ಥಾನ ಹಿರೇಮಠ, ಹಾರಕೂಡ.

೨೨) ಚರಂತಿ ಮಠ ವಿ. ಎಸ್, ೧೯೯೦; **ಚನ್ನಬಸವ**, ಅಜಗಣ ಮುಕ್ತಾಯಕ್ಕ ಪ್ರಕಾಶನ, ಭಾಲ್ಕಿ.

೨೩) ಚರಂತಿ ಮಠ, ವಿ. ಎಸ್. ೧೯೯೪; **ಬಸವಣ್ಣನವರ ವಚನಗಳಲ್ಲಿ ದಲಿತ ದರ್ಶನ**, ಬಸವ ಧರ್ಮ ಪ್ರಚಾರ ಸಂಸ್ಥೆ ಹಿರೇಮಠ, ಭಾಲ್ಕಿ.

೨೪) ಚಿದಾನಂದ ಮೂರ್ತಿ. ಎಂ., ೨೦೦೦; **ವೀರಶೈವ ಧರ್ಮ ಭಾರತೀಯ ಸಂಸ್ಕೃತಿ**, ಮಿಂಚು ಪ್ರಕಾಶನ, ಬೆಂಗಳೂರು.

೨೫) ಚಿದಾನಂದ ಮೂರ್ತಿ. ಎಂ., ೧೯೯೬; **ಕನ್ನಡ ಶಾಸನಗಳು ಸಾಂಸ್ಕೃತಿಕ ಅಧ್ಯಯನ**, ಮೈಸೂರು.

೨೬) ಚಿದಾನಂದ ಮೂರ್ತಿ ಎಂ., ೧೯೬೬; **ಸಂಶೋಧನ ತರಂಗ**, ಸಂಸ್ಕಾರ ಸಾಹಿತ್ಯ ಪ್ರಕಾಶನ, ಮೈಸೂರು.

೨೭) ಚಿದಾನಂದ ಮೂರ್ತಿ ಎಂ. ೧೯೮೯; **ಲಿಂಗಾಯತ ಅಧ್ಯಯನಗಳು**, ವಾಗ್ದೇವಿ ಪುಸ್ತಕಾಲಯ, ಮೈಸೂರು.

೨೮) ಜಗನಾಥ ಹೆಬ್ಬಾಳೆ (ಸಂ) ೧೯೯೭; **ಬೀದರ ಜಿಲ್ಲಾ ದರ್ಶನ**, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಬೀದರ.
೨೯) ಜಗನಾಥ ಹೆಬ್ಬಾಳೆ, (ಸಂ) ೧೯೯೬; **ಹೈದ್ರಾಬಾದ ಕರ್ನಾಟಕ ಜಾತ್ರೆಗಳು**, ಪಿ. ಎಚ್.ಡಿ. ಮಹಾಪ್ರಬಂಧ ಅಪ್ರಕಟಿತ.
೩೦) ಜಯ ಸೆಂದೀಲನಾಥನ ಪಿ. ಎಂ. ೧೯೮೯; **ಪವಿತ್ರ ಕ್ಷೇತ್ರಗಳು**, ತರುಮಲೈ ತಳಂಗಣ ಪ್ರಕಟಿತ ಸಮೀತಿ, ಬೆಂಗಳೂರು.
೩೧) ಜವರಯ್ಯ ಮ.ನ. ೧೯೯೭; **ದಲಿತ ವರ್ಗದ ಶರಣರು ಮತ್ತು ಶರಣೆಯರು**, ಒಂದು ಅಧ್ಯಯನ, ಸಿದ್ಧಾರ್ಥ ಗ್ರಂಥಮಾಲೆ ಕುವೆಂಪು ನಗರ, ಮೈಸೂರು.
೩೨) ಜವರಯ್ಯ ಮ.ನ. ೧೯೯೪; **ಪರಂಪರೆ ಹಾಗೂ ದಲಿತ ಬಂಡಾಯ ಸಾಹಿತ್ಯ ಸಮಗ್ರ ಅಧ್ಯಯನ**, ಸಿದ್ಧಾರ್ಥ ಗ್ರಂಥ ಮಾಲೆ ಕುವೆಂಪು ನಗರ, ಮೈಸೂರು.
೩೩) ಜವರೇಗೌಡ, ೧೯೯೨; **ಬಸವೇಶ್ವರ ಅಂಬೇಡ್ಕರ**, ಬಸವ ಧರ್ಮ ಪ್ರಚಾರ ಸಂಸ್ಥೆ ಹಿರೇಮಠ, ಭಾಲ್ಕಿ.
೩೪) ತಿಪ್ಪೇರುದ್ರ ಸ್ವಾಮಿ ಎಚ್, ೧೯೯೫; **ಕರ್ತಾರನ ಕಮ್ಮಟ**, ಸಿದ್ಧಗಂಗಾ ಮಠ, ತೂಮಕೂರು.
೩೫) ತಿಪ್ಪೇರುದ್ರ ಸ್ವಾಮಿ ಎಚ್. ೧೯೮೧; **ಕರ್ನಾಟಕ ಶರಣ ಚರಿತಾಮೃತ**, ಡಿ.ವಿ.ಕೆ. ಮೂರ್ತಿ, ಮೈಸೂರು.
೩೬) ತಿಪ್ಪೇರುದ್ರ ಸ್ವಾಮಿ ಎಚ್. ೧೯೮೧; **ಶರಣ ಅನುಭವ ಸಾಹಿತ್ಯ**, ಡಿ.ವಿ.ಕೆ. ಮೂರ್ತಿ, ಮೈಸೂರು.
೩೭) ತಿಪ್ಪೇರುದ್ರ ಸ್ವಾಮಿ ಎಚ್. ೧೯೮೩; **ವಚನಗಳಲ್ಲಿ ವೀರಶೈವ ಧರ್ಮ**, ಡಿ.ವಿ.ಕೆ. ಮೂರ್ತಿ, ಮೈಸೂರು.
೩೮) ತಿಪ್ಪೇರುದ್ರಸ್ವಾಮಿ ಎಚ್. ೧೯೮೩; **ವಚನ ಚಳುವಳಿ**, ಶ್ರೀಶರಣ ಬಸವೇಶ್ವರ ಗ್ರಂಥ ವಿಶ್ವವಿದ್ಯಾಲಯ, ಗುಲಬರ್ಗಾ.
೩೯) ತಿಪ್ಪೇರುದ್ರ ಸ್ವಾಮಿ (ಸಂ). ೧೯೮೯; **ಕನ್ನಡ ವಿಶ್ವಕೋಶ**, ಸಂಪೂರ್ಣ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.
೪೦) ತೆಳವಡಿ ಬಿ. ಎಂ. ಮತ್ತು ಇತರರು ( ಸಂ) ೧೯೮೬; **ಮಹಾಂತ** ( ಅಭಿನಂದಿನ ಗ್ರಂಥ), ಇಳಕಲ್ ಚಿತ್ತರಗಿ ಸಂಸ್ಥಾನ ಪೀಠದ ಪೂಜ್ಯ ಶ್ರೀ ಮ. ನಿ. ಪ್ರ. ಮಹಾಂತ ಸ್ವಾಮಿಗಳವರ ಪಟ್ಟಭಿಷೇಕ ಸಮಿತಿ, ಇಳಕಲ್.
೪೧) ತೋಟಪ್ಪ ಶಾಸ್ತ್ರಿ, ೧೯೬೮; **ಶಿವಾಚಾರ್ಯ ನವರತ್ನ ಅಥವಾ ಭಕ್ತ ಮಹೇಶ್ವರ ಕೈಪಿಡಿ**, ಶಾಹಾಬಾದಿ ಮಠ, ಗದಗ.
೪೨) ದೇವಿಂದ್ರಪ್ಪ, ೧೯೭೪; **ವಿಶ್ವಬಂಧು ಮರುಳ ಸಿದ್ಧ ಹಾಗೂ ಆತನ ಪರಂಪರೆ**, ತರಳಬಾಳು ಪ್ರಕಾಶನ, ಸಿರಿಗೆರಿ.
೪೩) ದೇವಿಂದ್ರಪ್ಪ ಎಚ್. ೧೯೯೮; **ಶರಣರ ಚರಿತ್ರ ಮಾನಸಂ**, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.
೪೪) ನಲವಡಿ ಶ್ರೀಕಂಠ ಶಾಸ್ತ್ರಿ, ೧೯೯೮; **ಹೈದ್ರಾಬಾದ ರಾಜಾಕಾರರ ಲಾವಣಿ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.
೪೫) ನಾರಾಯಣ. ಕೃ. ೧೯೯೯; **ಸರ್ವಜ್ಞ ವಚನಗಳು**, ಟಿ. ನಾರಾಯಣ ಅಯ್ಯಂಗಾರ, ಬೆಂಗಳೂರು.
೪೬) ನಾರಾಯಣ ಪಿ. ಎ. ೧೯೮೩; **ವಚನ ಸಾಹಿತ್ಯ ಒಂದು ಸಾಂಸ್ಕೃತಿಯ ಅಧ್ಯಯನ**, ವೀರಶೈವ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ.
೪೭) ನಾಗೇಶ ಶಾಸ್ತ್ರಿಗಳವರು ವೈ, ೧೯೭೧; **ಶ್ರೀ ಗವಿಸಿದ್ಧೇಶ್ವರ ಪುರಾಣ**, ಶ್ರೀ ಗವಿಸಿದ್ಧೇಶ್ವರ ಕೃಪಾ ಪೋಷಿತ ಹಳೆ ವಿಧ್ಯಾರ್ಥಿಗಳ ಬಳಗ, ಶ್ರೀ ಗವಿ ಮಠ, ಕೊಪ್ಪಳ.
೪೮) ಶ್ರೀ ಪಂಡಿತರಾದ್ಯ ಶಿವಾಚಾರ್ಯ ಸ್ವಾಮಿಗಳು, ೧೯೯೭; **ಕಾಯಕ ದಾಸೋಹ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.
೪೯) ಪಾಟೀಲ ಎಂ. ಬಿ, ೧೯೯೭; **ಕರ್ನಾಟಕ ರಾಜ್ಯ ಗ್ಯಾಸಟಿಯರ ಇಲಾಖೆ** ಕರ್ನಾಟಕ ಸರಕಾರ ಗ್ಯಾಸಟಿಯರ್ , ಗುಲಬರ್ಗಾ ಜಿಲ್ಲೆ, ಕರ್ನಾಟಕ.
೫೦) ಪುರಾಣಿಕ ಸಿದ್ಧಯ್ಯ (ಸಂ) ೧೯೭೩; **ಶರಣರ ಚರಿತಾಮೃತ**, ಸಂಸ್ಥಾನ ವಯಸ್ಕರ ಶಿಕ್ಷಣ ಸಮಿತಿ, ಮೈಸೂರು.
೫೧) ಬಸವರಾಜ ಸಬರದ, ೨೦೦೦; **ಹೈದ್ರಾಬಾದ - ಕರ್ನಾಟಕ ತತ್ವಪದಗಳು** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.
೫೨) ಬಸವರಾಜ ಕಲುಡಿ, ೧೯೯೦; **ಕನ್ನಡ ಪ್ರಮುಖ ಕಾದಂಬರಿಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

